ವಾಸ್ತವ ದರ್ಶನ

ಗಡಿಯಾಚೆಗೆ ಕನ್ನಡ; ಗಡಿಯೀಚೆಗೆ ಮರಾಠಿ

ಮನೆ ಮಂದಿಗೆಲ್ಲ ಮುದ ನೀಡುವ ಮಾಸಿಕ

# ಕಸ್ತೂರಿ

ನವೆಂಬರ್ ೧೯೯೫

ಬೆಲೆ: ರೂ.೬-೦೦



ಎಳೆಯರ ಮನದಿಂದ ಇಳಿದು ಬಂದ 'ವೈದ್ಯ'ರು



# ಕಸ್ತೂರಿ

ಕನ್ನಡ ಡೈಜೆಸ್ಟ್


ಲೋಕ ಶಿಕ್ಷಣ ಟ್ರಸ್ಟಿನ
ಹೆಮ್ಮೆಯ ಕಾಣಿಕೆ

ವ್ಯವಸ್ಥಾಪಕ ಸಂಪಾದಕ:
ಕೆ. ಶಾಮರಾವ್

ಸಂಪಾದಕ:
ಎನ್.ವಿ. ಜೋಶಿ

ಸಹಸಂಪಾದಕ:
ವೆಂಕಟನಾರಾಯಣ

ನಿರ್ವಹಣೆ:
ಗೋಪಾಲ ವಾಜಪೇಯಿ
ಶ್ರೀಕಾಂತ ಮಳಗಿ

ಕಲೆ:
ಪಿ.ಆರ್. ಪಾಟೀಲ
ಎಂ.ಎಸ್. ಶಶಿಧರ

ಮುಖಪುಟ:
ಹಾಸ - ಪ್ರಕಾಶ
ವರ್ಣಪಾರದರ್ಶಿಕೆ:
ದೇಬ್‌ಜಾನಿ ಬ್ಯಾನರ್ಜಿ



ಕಸ್ತೂರಿ ಕಾರ್ಯಾಲಯ,
ಕೊಪ್ಪೀಕರ ರಸ್ತೆ,
ಹುಬ್ಬಳ್ಳಿ-೫೮೦ ೦೨೦.


## ಚಿಂತನ

"ಕರ್ನಾಟಕಬುದ್ಧ್ಯಂತ- ಅದು ನಡುನಾಡೇ ಇರಲಿ, ಅಥವಾ, ಗಡಿನಾಡೇ ಇರಲಿ- ಕನ್ನಡ ಈ ನೆಲದ ಮಣ್ಣಿಂದ ಹೂವಿನಿಂದ ಗಂಧ ಹೊರಸೂಸುವಷ್ಟೇ ಸಹಜವಾಗಿ ಹೊರಹೊಮ್ಮಬೇಕು; ಇಲ್ಲಿಯ ಆಡಳಿತದ ಭಾಷೆ ಸಂಪೂರ್ಣವಾಗಿ ಕನ್ನಡವೇ ಆಗಬೇಕು; ಇಲ್ಲಿಯ ಎಲ್ಲಾ ವ್ಯವಹಾರದ ಮಾಧ್ಯಮ ಕನ್ನಡವಾದರೇನೇ ಚೆನ್ನ ಎಂಬುದು ಬಹುಜನರ ಬಹುದಿನಗಳ ಬಯಕೆ. ಆದರೆ ಕನ್ನಡದ ಹೆಸರಿನಲ್ಲಿಯೇ ರಾಜ್ಯ ಕಟ್ಟಿ ಅದನ್ನು ಕನ್ನಡಿಗರೇ ಆಳುತ್ತಿರುವ ನಾಲ್ಕು ದಶಕಗಳ ನಂತರವೂ ಈ ಬಯಕೆ 'ಬಯಕೆಯಾಗಿಯೇ' ಉಳಿದಿರುವುದು ಕನ್ನಡಿಗರ ನಿರ್ವಿಣ್ಣತೆಗೆ ಹಿಡಿದ ಕನ್ನಡಿ.

"ಬಂಗಾಲಿ ಗೊತ್ತಿರದವರು ಬಂಗಾಲದಲ್ಲಿ ನಾಲ್ಕಾರು ದಿನ ನೂಕುವುದೂ ದುಸ್ತರವಾಗುತ್ತದೆ. ತಮಿಳುನಾಡಿಗೆ ಪ್ರವಾಸಿಗನಾಗಿ ಹೋದ ಹೊರನಾಡಿನವರು, ಅಲ್ಲಿಯ ಶ್ರೀ ಸಾಮಾನ್ಯನೊಂದಿಗೆ ಅತ್ತ ಆತನಿಗೆ ಹಿಂದಿ ತಿಳಿಯದೇ, ಇತ್ತ ಈತನಿಗೆ ತಮಿಳು ಬಾರದೇ, ಇಬ್ಬರಿಗೂ ಇಂಗ್ಲೀಷು ಎಟುಕದೇ ಪಡುವ ಪಡಿಪಾಟಲು ವರ್ಣಿಸಲಸದಳ. ಇದೇ ರೀತಿ ಮಲೆಯಾಳಿ ಬಾರದವ ಕೇರಳದಲ್ಲಿ, ಮರಾಠಿ ಬಾರದವ ಮಹಾರಾಷ್ಟ್ರದಲ್ಲಿ ವೃತ್ತಿ ನಿಮಿತ್ತ ನಾಲ್ಕಾರು ವರುಷ ನೂಕುವುದೂ ದುಸ್ಸಾಧ್ಯದ ಮಾತು. ಆದರೆ ಕರ್ನಾಟಕದ ಗಡಿನಾಡಿನಲ್ಲಿ ನಾಲ್ಕಾರು ದಶಕ ಕಳೆದವರು, ಅಷ್ಟೇ ಏಕೆ ನಾಲ್ಕಾರು ತಲೆಮಾರುಗಳಿಂದ ಇಲ್ಲಿಯೇ ನೆಲೆಸಿದವರಿಗೆ ಇಂದಿಗೂ ವ್ಯವಹಾರ ಜ್ಞಾನಕ್ಕೆ ಸಾಲುವಷ್ಟೂ ಕನ್ನಡ ಬಾರದು. ಇನ್ನೂ ಚೋದ್ಯದ ಸಂಗತಿಯೆಂದರೆ ಇಂಥವರಲ್ಲಿ ಕೆಲ ಜನ ಕರ್ನಾಟಕ ಸರಕಾರದ ಸೇವೆಯಲ್ಲಿಯೇ ತಮ್ಮ ಜೀವಮಾನವನ್ನು ಸವೆಸಿದವರೂ ಇದ್ದಾರೆ...." ಇದು ಗಡಿನಾಡಿನಲ್ಲಿ ನೆಲೆಸಿ ಕನ್ನಡವನ್ನೇ ಉಸಿರಾಗಿಸಿ ಕೊಂಡಿರುವ ವೈದ್ಯ ಅನಿಲ ಕಮತಿಯವರ ಅಳಲು. ಮುಂದಿನ ಪುಟಗಳಲ್ಲಿ ಅವರು 'ಗಡಿಯಾಚೆಗೆ ಕನ್ನಡ; ಗಡಿಯೀಚೆಗೆ ಮರಾಠಿ' ಎಂಬ ಲೇಖನದಲ್ಲಿ ಆ ಭಾಗದ ವಾಸ್ತವದರ್ಶನ ಮಾಡಿಸಿದ್ದಾರೆ.

"ಇಂದು ಕನ್ನಡಿಗರು ತಮ್ಮೊಳಗಿನ ಕನ್ನಡಿಗನನ್ನು ಹುಡುಕಿಕೊಳ್ಳುವುದು ಹಿಂದೆಂದಿಗಿಂತಲೂ ಹೆಚ್ಚು ಅಗತ್ಯ" ಎಂಬ ಅವರ ಕಳಕಳಿಯ ನುಡಿಗೆ ನಾವೂ ದನಿಸೇರಿಸುತ್ತೇವೆ.

ಕನ್ನಡಿಗ ಬರಿ "ಹಚ್ಚೇವು ಕನ್ನಡದ ದೀಪ" ಎಂದು ಹಾಡುತ್ತ ಕೂತರೆ ಸಾಲದು. ಕನ್ನಡದ ದೀಪವನ್ನು ನಂದಾದೀಪವಾಗಿಸಬೇಕು.

ಈ ದೀಪಾವಳಿಯಿಂದಲೇ ಶುರುವಾಗಲಿ ಈ ಕಾರ್ಯ.

● ವ್ಯವಸ್ಥಾಪಕ ಸಂಪಾದಕ

## ಸಹಚಿಂತನ

### ದೇವಾಲಯ ಆಭರಣಗಳು

ಅಕ್ಟೋಬರ್ ತಿಂಗಳಲ್ಲಿ ಮೂಡಿಬಂದ ಲೇಖನ "ಪ್ರಾಚೀನ ಭಾರತದ ದೇವಾಲಯ ಆಭರಣಗಳು" ಕೇವಲ ಸಂಕ್ಷಿಪ್ತ ಪರಿಚಯ ಮಾಡಿಸಿದೆ. ಆಳಕ್ಕೆ ಹೋದರೆ ಇನ್ನೂ ಹಲವಾರು ಮಾಹಿತಿಗಳು ದೊರೆಯುತ್ತಿತ್ತು. ಹಿಂದೆ ದೇವಾಲಯಗಳಿಗೆ ಬೆಲೆ ಕಟ್ಟಲಾಗದ ಆಭರಣಗಳನ್ನು ಆಯಾ ಪ್ರಾಂತ್ಯಗಳ ಮಹಾರಾಜರು ದೇವರಿಗೆ ಅರ್ಪಿಸುತ್ತಿದ್ದರು. ಚಾಮರಾಜನಗರದ ಶ್ರೀ ಚಾಮರಾಜೇಶ್ವರ ದೇವಾಲಯಕ್ಕೆ ಮೈಸೂರಿನ ಸುಪ್ರಸಿದ್ಧ ಒಡೆಯರ್ ಮನೆತನದವರು ಭೇಟಿ ನೀಡಿದಾಗಲೆಲ್ಲ ತಾವು ಧರಿಸಿದ್ದ ಆಭರಣಗಳನ್ನು ಮಂಗಳಾರತಿಗೆ ಹಾಕುತ್ತಿದ್ದರಂತೆ. ಹಾಗೆ ಬಂದುದೆಲ್ಲಾ ಸರ್ಕಾರಿ ಖಜಾನೆಯಲ್ಲಿ ಭದ್ರವಾಗಿದೆ. ಅವೆಲ್ಲಾ ಸಾರ್ವಜನಿಕರಿಗೆ ದರ್ಶನಕ್ಕೆ ಸಿಗುವುದು "ಗಿರಿಜಾ ಕಲ್ಯಾಣ" ದಂತಹ ವಿಶೇಷ ದಿನಗಳಲ್ಲೆ. ಇದೇ ರೀತಿ ಅಸಂಖ್ಯಾತ ಒಡವೆಗಳು ಸರ್ಕಾರದ ತಿಜೋರಿಯಲ್ಲೇ ಭದ್ರವಾಗಿದೆ. ಜನತೆಯ ಹಣದಿಂದ ತಯಾರಾದ ಈ ಆಭರಣಗಳ ಸಾರ್ವಜನಿಕ ಪ್ರದರ್ಶನಗಳನ್ನು ಸರ್ಕಾರ ಆಗಾಗ ಏರ್ಪಡಿಸುತ್ತಿದ್ದರೆ ಜನರು ಹಿಂದಿನವರ ಕುಸುರಿ ಕೆಲಸದ ಉತ್ಕೃಷ್ಟತೆಯ ದರ್ಶನ ಮಾಡಿಕೊಳ್ಳಬಹುದು.

**ಚಾಮರಾಜನಗರ — ಎಸ್. ಲಕ್ಷ್ಮೀನರಸಿಂಹ**

### ಡಾ.ಪಾ.ಶ.ಶ್ರೀನಿವಾಸ

ಅಕ್ಟೋಬರ್ ೧೯೯೫ರ ಸಂಚಿಕೆಯಲ್ಲಿ ಪ್ರಕಟವಾದ ಮಧುರಸೇತು ಡಾ. ಪಾ.ಶ. ಶ್ರೀನಿವಾಸರ ಬಗ್ಗೆ ಡಾ. ಹರಿಕೃಷ್ಣ ಭರಣ್ಯರ ಲೇಖನ ಚೆನ್ನಾಗಿ ಮೂಡಿ ಬಂದಿದೆ.

ಕನ್ನಡಕ್ಕೆ ತಮಿಳಿನಿಂದ ತಂದ ತಿರುಕ್ಕುರುಳ್ ಕೃತಿಯೊಂದೇ ಸಾಕು ಅವರ ವಿದ್ವತ್ತಿಗೆ, ಸಾಹಿತ್ಯಪ್ರೇಮಕ್ಕೆ. ಆ ಪುಸ್ತಕ ಹೊರಬಂದಾಗ ಅದನ್ನು ತರಿಸಿ ಓದಿದೆ. ನಂತರ ಅವರಿಗೆ ಪತ್ರಬರೆದೆ. ವಿಶ್ವಾಸವಿಟ್ಟು ಉತ್ತರ ಬರೆದರು ಮಾತ್ರವಲ್ಲ, ಜ್ಞಾನರಥ ಮತ್ತು ಸಾಹಿತ್ಯ ಕಾವೇರಿ ಭಾಗ-೧ ಕೃತಿಗಳನ್ನು ನನಗೆ ಕಳಿಸಿಕೊಟ್ಟರು. ವಿಶಾಲ ಹೃದಯವಂತಿಕೆಯ ಪಾ.ಶ. ಶ್ರೀನಿವಾಸರನ್ನು ಕನ್ನಡಿಗರಿಗೆ ಪರಿಚಯಿಸಿದ ಹರಿಕೃಷ್ಣ ಭರಣ್ಯ ಮತ್ತು 'ಕಸ್ತೂರಿ'ಗೆ ಧನ್ಯವಾದಗಳು.

**ಗುಬ್ಬಿಹೊಸಹಳ್ಳಿ ಹೆಚ್.ಕೆ. ನರಸಿಂಹಮೂರ್ತಿ**

---

'ಕಸ್ತೂರಿ' ೧೯೯೫ ಅಕ್ಟೋಬರ್ 'ಜ್ಞಾನ ನಿಧಿ' ಅಂಕಣದಲ್ಲಿ ಪ್ರಕಟವಾದ 'ಆ ಬಾಂಬು ದುರಂತ' ಲೇಖನ ಸುಭಾಷ ನೇಳಗೆಯವರದು. ಲೇಖನದೊಂದಿಗೆ ಅವರ ಹೆಸರು ಪ್ರಕಟವಾಗದೆ ಹೋದುದಕ್ಕಾಗಿ ವಿಷಾದಿಸುತ್ತೇವೆ.

*-ಸಂಪಾದಕ*

---

### ಹೇಳದೇ ಹೇಳುವುದು

ಅಕ್ಟೋಬರ್ ೯೫, ಕಸ್ತೂರಿ ಸಂಚಿಕೆಯಲ್ಲಿ ಪ್ರಕಟವಾದ "ಹೇಳದೆ 'ಹೇಳುವುದು' ಹೇಗೆ?" ಚಿಕ್ಕದಾದರೂ ಚೊಕ್ಕವಾದ ಲೇಖನ.

"ನಬ್ರೂಯಾತ್ ಸತ್ಯಂ ಅಪ್ರಿಯಂ, ಪ್ರಿಯಂಚ ನಾನೃತಂ ಬ್ರೂಯಾತ್" ಎಂದು ಹಿರಿಯರೇ ಹೇಳಿದ್ದಾರಲ್ಲವೆ? ಬಾಯಿ ಇದೆಯೆಂದು ವಿವೇಚಿಸದೇ ಮಾತನಾಡಿ ಇನ್ನೊಬ್ಬರನ್ನು ಸಂಕಟಕ್ಕೆ ಗುರಿಮಾಡುವುದು ಎಷ್ಟು ಸೂಕ್ತ? ಇನ್ನೊಬ್ಬರಿಗೆ ಒಳ್ಳೆಯದನ್ನು ಮಾಡಲು ನಮಗೆ ಸಾಧ್ಯವಿಲ್ಲವಾದರೆ ಅವರನ್ನು ನೋಯಿಸದೆಯಾದರೂ ಇರಬಹುದಲ್ಲವೆ?

**ತುಮಕೂರು — ತರಂಗಿಣಿ**

"ಹೇಳದೇ ಹೇಳುವುದು ಹೇಗೆ?" ಮನಸ್ಸಿಗೆ ಮುದ ನೀಡಿತು. ಮಿತಭಾಷಿಯಾದ ಎಲ್ಲರಿಗೂ ಲೇಖನ ಮೆಚ್ಚುಗೆಯಾಗುವುದರಲ್ಲಿ ಸಂದೇಹವೇ ಇಲ್ಲ.

**ಹಿಂಚಗೇರಾ — ಬಸವರಾಜ ಘಾಣೂರ**

### ಹೆಜ್ಜೆಗುರುತು

ನಾನು ೧೯೭೫ರಲ್ಲಿ ಮೊದಲನೆಯ ಬಾರಿ ಅಮೆರಿಕಕ್ಕೆ ಹೋದಾಗ ಒಂದು ಸಣ್ಣ ಹಲಿಗೆಯ ತುಂಡಿನ ಮೇಲೆ ಆಕರ್ಷಕವಾಗಿ ಬರೆದ ಒಕ್ಕಣೆಯೊಂದನ್ನು ನೋಡಿದೆ. ನನ್ನ ಮಗಳು ಅದನ್ನು ನನಗೆ (ಖರೀದಿಸಿ) ಕೊಟ್ಟಳು. ಒಕ್ಕಣೆ "Foot prints" ಇದನ್ನು ನಾನು ಆಮೇಲೆ ಅನೇಕ ಕಡೆಗಳಲ್ಲಿ ಕಂಡಿದ್ದೇನೆ. ಇದರ ಭಾಷಾಂತರವನ್ನು ನಿಮ್ಮ ಆಗಸ್ಟ್ ಸಂಚಿಕೆಯಲ್ಲಿ ನೋಡಿ ಸಂತೋಸವಾಯಿತು. ಆದರೆ "ಲೇಖಕರು" ಅದು ತಮ್ಮದೇ ರಚನೆಯೆಂಬಂತೆ ತೋರಿಸಿದುದು ಸರಿಯಲ್ಲ.

**ಮಂಗಳೂರು — ಡಾ. ವಿ.ಆರ್. ಭಟ್**

### ಅಜ್ಜಿಯ ಅನುಭವ

ಟಿ.ಎಸ್.ಲಲಿತ ಅವರು ಬರೆದ 'ಮತ್ತೆ ಜೇನು ಕಟ್ಟಲಿಲ್ಲ' (ಅಕ್ಟೋಬರ್ ೯೫) ಓದಿದೆ. ನಿಜಕ್ಕೂ ಅಜ್ಜಿಯ ಅನುಭವದ ಮಾತಿನಲ್ಲಿ ಸರಳತೆ ಇದೆ, ಜೊತೆ ಜೊತೆಗೆ

ನೈಜತೆಯೂ ಇದೆ.

ಸಾಸ್ವಿಹಳ್ಳಿ ನಾ.ಬ. ಗೋರೋಜನ

**ಪದವೋ ಪಾದವೋ?**

"ಕಸ್ತೂರಿ"ಯು ೪೦ನೆಯ ವರ್ಷಕ್ಕೆ ಪದಾರ್ಪಣೆ (ಪಾದಾರ್ಪಣೆ?) ಮಾಡಿದ್ದು ಸಂತಸದ ವಿಷಯ. ಆದರೆ ಇಲ್ಲಿ ಮುಖ ಪುಟದಲ್ಲಿ ಮುದ್ರಿತವಾದ "ಪದಾರ್ಪಣೆ" ಎಂಬುವುದು ಸರಿಯೋ? ಅಥವಾ "ಪಾದಾರ್ಪಣೆ" ಎನ್ನು ವುದು ಸರಿಯೋ?

ಚೋಲಂದುಬೈಲ್ ಪಿ. ರಾಜೇಶ್ ಐತಾಳ

*(ಎರಡೂ ಸರಿ. -ಸಂ.)*

**'ಕೃತಿ' ಎಂಬ ಹುಡುಗಿ**

ಅಕ್ಟೋಬರ್ ಸಂಚಿಕೆಯ ಮುಖಪುಟ ಮನಮೋಹಕ. 'ಕೃತಿ' ಎಂಬ ವಿಶೇಷ ಹುಡುಗಿಯ ಸಾಧನೆಯನ್ನು ಓದಿ ಹೆಮ್ಮೆ ಎನ್ನಿಸಿತು. ಅವಳ ಮುಂದೆ, ೩೦ರ ನಾನು ಕಿರಿಯನಾದ ಅನುಭವವಾಯಿತು!

ರಾಮಜೋಗಿಹಳ್ಳಿ ಪಿ.ಎಸ್. ಕುದರಿ

ಅಕ್ಟೋಬರ್ ತಿಂಗಳ 'ಕಸ್ತೂರಿ' ಸಪ್ಟಂಬರ್ ಸಂಚಿಕೆಯಲ್ಲಿ "ಕೃತಿ" ಎಂಬ ಲೇಖನದಲ್ಲಿ ಭಾರತದ ಪ್ರಪ್ರಥಮ ಪ್ರನಾಳ ಶಿಶು ೧೯೮೬ರ ಜೂ. ೨೯ ರಂದು ಜನಿಸಿದುದಾಗಿ ಉಲ್ಲೇಖವಿದೆ. ಆದರೆ ಈಗಿನ ದ್ವಿತಿಯ ಪಿ.ಯು.ಸಿ. ಜೀವಶಾಸ್ತ್ರ (ಪ್ರಾಣಿಶಾಸ್ತ್ರ) ಪುಸ್ತಕದಲ್ಲಿ 'ಆಗಸ್ಟ್ ೬, ೧೯೮೬' ಎಂದಿದೆ. ಇವೆರಡರಲ್ಲಿ ಯಾವುದು ಸರಿ?

ಬೆಂಗಳೂರು ಪಿ.ವಿ. ದಾಮೋದರ

*(ಲೇಖನದಲ್ಲಿ ಬಂದ ದಿನಾಂಕವೇ ಸರಿ. - ಸಂ)*

**ಹೃದಯ ಸ್ಪರ್ಶಿ**

೧೯೯೫ರ 'ಕಸ್ತೂರಿ' ಸಪ್ಟಂಬರ್ ಸಂಚಿಕೆಯಲ್ಲಿನ ಡಾ. ನಾ. ಸೋಮೇಶ್ವರರವರು ಬರೆದ "ಬಿಳಿಯ ಮಕ್ಕಳ ಕಪ್ಪು ಕಥೆ" ನಿಜವಾಗಿಯೂ ಹೃದಯಸ್ಪರ್ಶಿಯಾಗಿತ್ತು.

ಮೂರ್ನಾಡು, ಕೊಡಗು ಡಿ. ನಾಗಪ್ರಿಯೆ

**ಸಾವಿರ ವರ್ಷಗಳ ಹಿಂದೆ**

ಅಕ್ಟೋಬರ್ ೯೫ರ ಸಂಚಿಕೆಯಲ್ಲಿ ಪ್ರಕಟವಾದ "ಸಾವಿರ ವರ್ಷಗಳ ಹಿಂದಿನ ಆಸ್ಪತ್ರೆಯ ಕಥೆ" ಲೇಖನವನ್ನು ಓದಿ ತುಂಬಾ ಆಶ್ಚರ್ಯವಾಯಿತು.

ಅಂದಿನ ಆಸ್ಪತ್ರೆಗಳ ಸೇವಾಮನೋಭಾವ ಮತ್ತು ಶಿಸ್ತು ಸ್ವಚ್ಛತೆಗಳಿಗೆ ಹೋಲಿಸಿದರೆ ಇಂದಿನ ಆಸ್ಪತ್ರೆಗಳು ಎಷ್ಟೊಂದು ಅದಕ್ಷತೆಯಿಂದ ಕೂಡಿವೆ ಎಂಬುದರಲ್ಲಿ ಸಂಶಯವಿಲ್ಲ. ಇಂದು ನಾವು ವೈಜ್ಞಾನಿಕವಾಗಿ ಮುಂದುವರೆದಿದ್ದರೂ ವೈದ್ಯ ಮತ್ತು ರೋಗಿಗಳ ನಡುವಣ ಸಂಬಂಧ ಮಾತ್ರ ಸರಿಯಾಗಿಲ್ಲ. ಬರೀ ಹಣದಾಸೆಯ ವೈದ್ಯರೇ ತುಂಬಿರುವ ಇಂದಿನ ಆಸ್ಪತ್ರೆಗಳು ಅಂದಿನ ಆಸ್ಪತ್ರೆಗಳಿಂದ ಕಲಿಯುವುದು ಸಾಕಷ್ಟಿದೆ.

ಕುಕನೂರು ಎಚ್. ಆರ್. ವಸ್ತ್ರದ

**ಸಾಧನೆಯಲ್ಲಿ ಸಿಂಹಪಾಲು**

ಸಪ್ಟಂಬರ್ ೧೯೯೫ರ 'ಕಸ್ತೂರಿ'ಯಲ್ಲಿ ಪುರುಷೋತ್ತಮ ಬಿಳಿಮಲೆಯವರು ದಿ.ಜಿ.ಶಂ.ಪ. ಅವರ ಬಗ್ಗೆ ಬರೆದಿರುವ ಲೇಖನ ಚೆನ್ನಾಗಿದೆ. ಆದರೆ ಅವರು ಮೈಸೂರು ಜಾನಪದ ವಸ್ತುಸಂಗ್ರಹಾಲಯದ ಬಗ್ಗೆ ಹೇಳುವಾಗ ಜೀಶಂಪರವರು ಪಿ.ಆರ್. ತಿಪ್ಪೇಸ್ವಾಮಿಯವರ ಜೊತೆಗೂಡಿ ಕಟ್ಟಿ ಬೆಳೆಸಿದರು ಎಂದಿದ್ದಾರೆ. ಇದರಲ್ಲಿ ತಿಪ್ಪೇಸ್ವಾಮಿಯವರದು ಸಿಂಹಪಾಲಿದೆ.

"ಮೈಸೂರು ವಿಶ್ವ ವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಜಾನಪದ ವಸ್ತು ಸಂಗ್ರಹಾಲಯವನ್ನು ಕಟ್ಟುವುದರಲ್ಲಿ ಪಾಲುಗೊಂಡದ್ದು ತಿಪ್ಪೇಸ್ವಾಮಿಯವರ ಮಹತ್ವದ ಸಾಧನೆ," ಎಂದು ಡಾ. ಹಾಮಾ ನಾಯಕರು ತಮ್ಮ 'ಸಂವಹನ' ಪುಸ್ತಕದಲ್ಲಿ ಬರೆದಿದ್ದಾರೆ.

ಮೈಸೂರು ರಾಜಶೇಖರ ಕದಂಬ

**ನೋವಿಲ್ಲದ ಶಸ್ತ್ರ ಚಿಕಿತ್ಸೆ**

ಅಕ್ಟೋಬರ್ ಸಂಚಿಕೆಯ 'ಆರೋಗ್ಯದಂಗಳ'ದಲ್ಲಿ ಪ್ರಕಟವಾದ ಡಾ. ದೇವಧರ ಅವರ "ನೋವಿಲ್ಲದ ಶಸ್ತ್ರ ಚಿಕಿತ್ಸೆಗಳು" ಲೇಖನ ಸಂಗ್ರಹಯೋಗ್ಯವಾಗಿದೆ.

ಕಲಾದಗಿ ಶ್ರೀದೇವಿ ಆಲಗುಂಡಿ

"ನೋವಿಲ್ಲದ ಶಸ್ತ್ರ ಚಿಕಿತ್ಸೆಗಳು" ವೈದ್ಯಕೀಯ ಕ್ಷೇತ್ರದಲ್ಲಿ ಒಂದು ಮಹತ್ಸಾಧನೆ. ಆಪರೇಶನ್‌ಗಾಗಿ ಸಾವಿರಗಟ್ಟಲೆ ದುಡ್ಡು ಖರ್ಚುಮಾಡಿದರೂ ಗುಣಹೊಂದುವುದು ಸಂಶಯದ ಮಾತಾಗಿರುವ ಈಗಿನ ಕಾಲದಲ್ಲಿ ಡಾ. ದೇವಧರರ ಯಶಸ್ವೀ ಪ್ರಯೋಗಗಳು ಬಡಜನತೆಗೆ ಆಶಾಕಿರಣವಾಗಿ ತೋರಿದರೆ ಆಶ್ಚರ್ಯವಿಲ್ಲ.

ಗಜೇಂದ್ರಗಡ ಆರ್.ಆರ್. ಪಾಟೀಲ

**ಯಾವುದು ಸರಿ?**

ಆಗಸ್ಟ್ ೧೯೯೫ರ ಕಸ್ತೂರಿಯಲ್ಲಿ ಪ್ರಕಟವಾದ ಡಾ. ಡಿ.ಕೆ. ಮಹಾಬಲರಾಜು ಅವರ 'ಆರೋಗ್ಯಕ್ಕಾಗಿ ಅಡುಗೆ

(ಆರನೇ ಪುಟಕ್ಕೆ)

# ಅಂತರಂಗ








ವಿಶೇಷ ವಿಭಾಗ

## ಕಾಫಿ

● ಡಾ. ಎಚ್.ಎಸ್. ವೆಂಕಟೇಶ ಮೂರ್ತಿ
ಸಂಗ್ರಹ: ಮೋಹನ ಕಳಸದ



## ಸ್ಥಿರ ಶೀರ್ಷಿಕೆಗಳು



## ಬೆಳಕಿಂಡಿ

ಬರಿ ಆಶೆಯ ಮೇಲೆಯೇ ಬದುಕಿದವರಿಗೆ ಸಾಯುವುದೊಂದೇ ದಾರಿ.

-ಬೆಂಜಮಿನ್ ಫ್ರಾಂಕ್‌ಲಿನ್

ಬರಿ ಒಳ್ಳೆಯವರಾಗಿರಬೇಡಿ, ಒಳ್ಳೆಯ ದೇನನ್ನಾದರೂ ಮಾಡಿ.

-ಹೆನ್ರಿ ಥೋರೋ

ಮನುಷ್ಯನನ್ನು ಅರಿತುಕೊಳ್ಳುವುದ ಕ್ಕಿಂತ ಮನುಷ್ಯನ್ನು ಅರಿತುಕೊಳ್ಳುವುದು ತುಂಬಾ ಹಗುರ.

-ಲಾ. ರೋಷೆಫೋಕಾರೋ

ಕಲೆಗಾಗಿ ಕಲೆ ಎಂದು ಭಾವಿಸಿದ ಜನರಿ ರುವುದು ಎಷ್ಟು ಸತ್ಯವೋ ಸುಳ್ಳಿಗಾಗಿ ಸುಳ್ಳು ಎಂದು ಭಾವಿಸಿದ ಜನರಿರುವುದೂ ಅಷ್ಟೇ ಸತ್ಯ.

-ಎಡ್ಮಂಡ್ ಬರ್ಕ್

ಸಾಲದಲ್ಲಿ ಸಿಕ್ಕಿ ಹಾಕಿಕೊಳ್ಳುವುದು ತೊಂದರೆಯಲ್ಲ. ಆದರೆ ಸಾಲ ಕೊಟ್ಟವರಲ್ಲಿ ಸಿಕ್ಕಿ ಹಾಕಿಕೊಳ್ಳುವುದು ಮಾತ್ರ ನಿಜಕ್ಕೂ ತೊಂದರೆದಾಯಕವಾದದ್ದು.

-ಎಂ.ಆರ್.ಎಸ್

ಆರೋಗ್ಯರಂಗ

## ಬೊಜ್ಜು ಉಳ್ಳವರಿಗೆ ಬೀಜಮಾತುಗಳು

• ಡಾ. ಡಿ.ಕೆ. ಮಹಾಬಲರಾಜು

(ಮೂರನೇ ಪುಟದಿಂದ)

ಎಣ್ಣೆ' ಎಂಬ ಲೇಖನವನ್ನೋದಿದೆ. ಅದರಲ್ಲಿ "ಕೊಬ್ಬರಿ ಎಣ್ಣೆ ಕೊಲೆಸ್ಟಿರಾಲ್ ಹೆಚ್ಚಿಸುತ್ತದೆ. ಕೊಬ್ಬರಿ ಎಣ್ಣೆಯನ್ನು ಹೆಚ್ಚಾಗಿ ಸೇವಿಸುವ ಕೇರಳ ರಾಜ್ಯದಲ್ಲಿ ಹೃದಯಾಘಾತಗಳು ಅಧಿಕವಾಗಿವೆ" ಎಂದು ಹೇಳಿದ್ದಾರೆ. ಆದರೆ ೨೭-೧೧-೯೪ರ 'ಉದಯವಾಣಿ'ಯಲ್ಲಿ ಪ್ರಕಟವಾದ 'ತೆಂಗಿನೆಣ್ಣೆಯ ಗ್ರಹಚಾರ' ಲೇಖನದಲ್ಲಿ "ತೆಂಗಿನೆಣ್ಣೆಯಲ್ಲಿ ಕೊಲೆಸ್ಟಿರಾಲ್ ಇಲ್ಲ ಮತ್ತು ಈಚಿನ ದಿನಗಳಲ್ಲಿ ಕೇರಳದವರು ತೆಂಗಿನೆಣ್ಣೆ ಬಿಟ್ಟು ಹೊಸ ಎಣ್ಣೆಗಳನ್ನು ಉಪಯೋಗಿಸಿದಂತೆ ಕಳೆದ ದಶಕದಲ್ಲಿ ಅಲ್ಲಿಯ ಹೃದಯಾಘಾತದ ಸಂಖ್ಯೆ ಹೆಚ್ಚಿದೆ ಎಂದು ಒಂದು ಚಿಕ್ಕ ಸಮೀಕ್ಷೆ ತಿಳಿಸಿದೆ" ಎಂದು ಹೇಳಲಾಗಿದೆ. ಯಾವುದು ಸರಿ?

**ಪೆರ್ಡಾಲ ನವಕಾನ ಶಂಕರನಾರಾಯಣ ಭಟ್ಟ**

(ಕೊಬ್ಬರಿ ಎಣ್ಣೆ ಕೊಲೆಸ್ಟಿರಾಲ್‌ಅನ್ನು ಹೆಚ್ಚಿಸುತ್ತದೆ ಎಂದು ಬಹಳಷ್ಟು ವೈದ್ಯಕೀಯ ಸಂಶೋಧನೆಗಳಿಂದ ಸಾಬೀತಾಗಿದೆ. ಕೇರಳದಲ್ಲಿ ಇತ್ತಿಚೆಗೆ ಹೆಚ್ಚುತ್ತಿರುವ ಹೃದಯಾಘಾತಕ್ಕೆ ಅವರು ಕೊಬ್ಬರಿ ಎಣ್ಣೆಯನ್ನು ತ್ಯಜಿಸುತ್ತಿರುವುದೊಂದೇ ಕಾರಣವೆಂದು ದೂಷಿಸುವುದು ಸರಿಯಲ್ಲ. ಬದಲಾಗುತ್ತಿರುವ ಜೀವನಕ್ರಮದಿಂದ ದೇಶದೆಲ್ಲೆಡೆಯೂ ಹೃದಯಾಘಾತಗಳು ಹೆಚ್ಚಾಗಿವೆ. ಕೇರಳದಲ್ಲೂ ಹೀಗೇಕೆ ಆಗಿರಬಾರದು? ಒಂದೆರಡು ದಶಕದ ಹಿಂದೆ ಕೇರಳ ಹೃದಯಾಘಾತಗಳ ಸಂಖ್ಯೆಯಲ್ಲಿ ಮುಂಚೂಣಿ'ಯಲ್ಲಿತ್ತು. ಆಗ ಅಲ್ಲಿನ ಬಹುಪಾಲು ಜನ ಕೊಬ್ಬರಿ ಎಣ್ಣೆಯನ್ನೇ ಬಳಸುತ್ತಿರಲಿಲ್ಲವೆ? ಕಷ್ಟ ಜೀವಿಗಳಾದ, ಬೊಜ್ಜಿನವರಲ್ಲದ ಕೇರಳೀಯರಿಗೆ ಆಗ ಹೃದಯಾಘಾತಕ್ಕೆ ಕೊಬ್ಬರಿ ಎಣ್ಣೆಯಲ್ಲದೆ ಮತ್ತಾವುದೂ ಪ್ರಮುಖ ಕಾರಣವಾಗಿರಲಾರದು. ಚಿಕ್ಕ ಸಮೀಕ್ಷೆಯ ಫಲಿತಾಂಶ ಹಾಗೆ ಹೇಳುತ್ತದೆಯೆಂದ ಮಾತ್ರಕ್ಕೆ ಅನೇಕ ದೊಡ್ಡ ದೊಡ್ಡ ಸಮೀಕ್ಷೆಗಳು, ಅಧ್ಯಯನಗಳು ನೀಡಿದ ಫಲಿತಾಂಶ ಸುಳ್ಳಾಗಲಾರದು.

**ದಾವಣಗೆರೆ ಡಾ. ಮಹಾಬಲರಾಜು. ಡಿ.ಕೆ.**

---

## ಲೇಖಕರಿಗೆ ಸೂಚನೆ

- 'ಕಸ್ತೂರಿ'ಗಾಗಿ ಕಳಿಸುವಂಥ ಲೇಖನಗಳು ಕಾಗದದ ಒಂದೇ ಮಗ್ಗುಲಲ್ಲಿ ಸ್ಫುಟವಾಗಿ ಬರೆದಂಥವಾಗಿರಲಿ. ನಿಮ್ಮ ಹೆಸರು-ವಿಳಾಸಗಳು ಸ್ಪಷ್ಟವಾಗಿರಲಿ. ಅನುವಾದ, ರೂಪಾಂತರ, ಆಧಾರಿತ ಲೇಖನಗಳಾದರೆ ಮೂಲ ಲೇಖಕ-ಪ್ರಕಾಶಕರ ವಿಳಾಸ, ಅನುಮತಿ ಪತ್ರಗಳನ್ನು ಜತೆಗೆ ಲಗತ್ತಿಸಿ.
- ಅಸ್ವೀಕೃತ ಲೇಖನಗಳನ್ನು ಮರಳಿ ಪಡೆಯಲಿಚ್ಛಿಸುವವರು ಲೇಖನಗಳ ಸಂಗಡವೆ ಅಗತ್ಯ ಅಂಚೆಚೀಟಿ ಲಗತ್ತಿಸಿದ ಲಕೋಟೆಯನ್ನಿಡಿ.
- ಚುಟುಕು, ಪುಟಕೊನೆಯ ಕಿರುಲೇಖನ, ನೆನಪು ನೆರಳಿನಲ್ಲಿ ಮುಂತಾದವುಗಳ ಕುರಿತು ಪತ್ರವ್ಯವಹಾರ ಮಾಡಲಾಗುವುದಿಲ್ಲ.
- ಲೇಖನದ ಕಾರ್ಬನ್ ಅಥವಾ ಝೆರಾಕ್ಸ್ ಪ್ರತಿಯನ್ನು ಕಳಿಸಲೇಬೇಡಿ.
- ಸ್ವೀಕೃತ ಲೇಖನಗಳನ್ನು ಯಥಾವಕಾಶ ಪ್ರಕಟಿಸಿ ಸೂಕ್ತ ಗೌರವಧನವನ್ನು ನೀಡಲಾಗುವುದು.

## ಚಂದಾದಾರರಿಗೆ ಸೂಚನೆ

- 'ಕಸ್ತೂರಿ' ಪ್ರತಿ ತಿಂಗಳ ೧ನೇ ದಿನಾಂಕದೊಳಗೆ ಪ್ರಕಟವಾಗುವುದು. ತಿಂಗಳಿನ ೨ನೆಯ ದಿನಾಂಕದೊಳಗೆ ನಿಮಗೆ ತಲುಪದಿದ್ದಲ್ಲಿ ಚಂದಾದಾರರು ತಮ್ಮ ಟಪ್ಪಾಲು ಕಚೇರಿಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಈ ಸಂಬಂಧದಲ್ಲಿ ಪತ್ರವ್ಯವಹಾರ ಮಾಡುವಾಗ, ವಿಳಾಸ ಬದಲಾವಣೆಯ ಸಂದರ್ಭದಲ್ಲಿ ದಯವಿಟ್ಟು ಚಂದಾ ನಂಬರು ಸ್ಫುಟವಾಗಿ ನಮೂದಿಸಿರಬೇಕಾದ್ದು ಅತ್ಯವಶ್ಯಕ.

**ಪತ್ರವ್ಯವಹಾರ ವಿಳಾಸ:**
ಪ್ರಸಾರಾಂಗ ವ್ಯವಸ್ಥಾಪಕ,
ಕಸ್ತೂರಿ, ಪೊ.ಬಾ. ನಂ. ೩೦,
ಹುಬ್ಬಳ್ಳಿ-೫೮೦ ೦೨೦.

### ಚಂದಾ ದರಗಳು

| | |
|---|---|
| ಬಿಡಿ ಸಂಚಿಕೆ | ರೂ. ೬-೦೦ |
| ೬ ತಿಂಗಳಿಗೆ ಅಂಚೆ ವೆಚ್ಚ ಸೇರಿ | ರೂ. ೩೫-೦೦ |
| ೧ ವರ್ಷಕ್ಕೆ, ಅಂಚೆ ವೆಚ್ಚ ಸೇರಿ | ರೂ. ೭೦-೦೦ |
| ೨ ವರ್ಷಕ್ಕೆ ಅಂಚೆ ವೆಚ್ಚ ಸೇರಿ | ರೂ. ೧೩೦-೦೦ |

# ಕಸ್ತೂರಿ

ವರ್ಷ: ೪೦ ನವೆಂಬರ್ ೧೯೯೫ ಸಂಚಿಕೆ: ೩


# ಕತ್ತಲೆ-ಬೆಳಕು

• ವಿಶಾಖದತ್ತ

ಬೆಳಕಿನ ಮಾತು ಬಂದಾಗಲೆಲ್ಲ ಕತ್ತಲೆಯ ಕುರಿತೂ ಉಲ್ಲೇಖಿಸಬೇಕಾಗುತ್ತದೆ.

ಕತ್ತಲೆ ಎಲ್ಲಿಲ್ಲ? ನಮ್ಮೊಳಗೂ ಇದೆ, ಹೊರಗೂ ಅದೇ. ನಾವು ಬದುಕುತ್ತಿರುವುದೇ ಕತ್ತಲೆಯಲ್ಲಿ, ಕತ್ತಲೆಯೊಂದಿಗೆ.

ಅದನ್ನು ಗುರುತಿಸುವ-ಅರಿತುಕೊಳ್ಳುವ ಕೆಲಸವನ್ನು ಎಲ್ಲಿಂದ ಪ್ರಾರಂಭಿಸೋಣ? ಮೊದಲು ಒಳಗಡಗಿರುವ ತಿಮಿರವನ್ನು ಗುರುತಿಸೋಣವೆ, ಇಲ್ಲ, ಹೊರಗೆ ಅಡಗಿರುವ ಅಂಧಕಾರವನ್ನೊ? ಉತ್ತರ ಬಲು ದುಸ್ತರ. ಈ ಮೂಲಭೂತ ಸಮಸ್ಯೆಯನ್ನು ಬಿಡಿಸುವುದು ಸುಲಭವಲ್ಲ. ಭಾರತೀಯ ದಾರ್ಶನಿಕರು ಮತ್ತೆ ಮತ್ತೆ ಹೇಳಿದ್ದು ಒಂದೇ ಮಾತು- ''ನಿನ್ನೊಳಗೆ ನೀನಿಳಿದು ಇಣುಕಿಕೊ..."

''ನನ್ನೊಳಗೇ ನಾ ತಿಳಕೊಂಡೆ" ಎಂದು ಹೇಳುವುದು ಶಿಶುನಾಳ ಶರೀಫರಂಥವರಿಗೆ ಮಾತ್ರ ಸಾಧ್ಯ. ಕೋಡಗನ್ನ ಕೋಳಿ ನುಂಗಿದ ವಿದ್ಯಮಾನವನ್ನು ಅರಿಯುವುದು ಕೂಡ ಅಂಥ ಸಂತರಿಗೇ ಶಕ್ಯವಾಗುವ ವಿಚಾರ. ಮೇಲ್ನೋಟಕ್ಕೆ ಇವು ಮಲಕಿನ ಮಾತುಗಳೆನಿಸಿದರೂ ನಿಜಕ್ಕೂ ಅವು ಮನಕಲಕುವ ಮಾತುಗಳು. ಕಲಕುವಿಕೆ ಎಂದರೆ ಇಲ್ಲಿ ಗೊಂದಲವೆಬ್ಬಿಸುವಿಕೆ ಅಲ್ಲ, ಮಥನ ಎಂದರ್ಥ.

ಈ ಮಥಿಸುವ ಪ್ರಕ್ರಿಯೆಯಲ್ಲಿ ನಾವು ಕಾಮ, ಕ್ರೋಧ, ಮದ, ಲೋಭ, ಮೋಹ ಮತ್ತು ಮತ್ಸರಗಳೆಂಬ ಆರು ಬಗೆಯ ಅಂಧತತ್ವಗಳ ಮೇಲೆ ಜಯ ಸಾಧಿಸಬೇಕಾಗುತ್ತದೆ. ಹೀಗೆ ಜಯ ಸಾಧಿಸಿದರೆ ಹೊರಗಿನ ಅಂಧಕಾರ ತಂತಾನೇ ಕರಗುತ್ತದೆ, ಬೆಳಕಿನ ಬೀಜಗಳನ್ನು ಬಿತ್ತಿ ಹರಗುತ್ತದೆ.

ಕತ್ತಲೆ ಅಂದರೇನು? ಕೆಟ್ಟತನಕ್ಕೆ ಮತ್ತೊಂದು ಹೆಸರು. ಅದು ಅಂಧವಿಶ್ವಾಸವೂ ಹೌದು, ಅಂಧಕೂಪವೂ ಹೌದು. ಸಂತ ಕಬೀರ ಕೆಟ್ಟದ್ದೆಂದರೆ ಏನೆಂದು ಹುಡುಕಲು ಹೊರಟ. ಹುಡುಹುಡುಕಿ ಸೋತ, ಸುಸ್ತಾದ.

''ಕೆಟ್ಟದ್ದನ್ನs ಹುಡುಕಲು ಹೊರಟೆ. ಕೆಟ್ಟದ್ದೆಂಬುದೆ ಸಿಗಲಿಲ್ಲ,
ತೊಟ್ಟ ಚರ್ಮದೊಳು ಹಣಿಕಿಕ್ಕಿದರೆ ಕೆಟ್ಟವ ನಾನೆಂದು ಅರಿತೆನಲ್ಲ..."

ಹೀಗೆಂದು ಹಾಡಿದ ಆತ ಜೀವನ ರಹಸ್ಯವನ್ನರಿಯಲು ಆಧ್ಯಾತ್ಮದ ಆಳಕ್ಕೆ ಇಳಿಯತೊಡಗಿದ. ಹೀಗಿದ್ದೂ ಈ ಲೌಕಿಕರ ಪಾಖಂಡತೆಯ ಮೇಲೆ, ಅಂಧವಿಶ್ವಾಸ-ಬೂಟಾಟಿಕೆಗಳ ಮೇಲೆ ಪದಪ್ರಹಾರ ನಡೆಸುತ್ತಲೇ ಸಾಗಿದ.

ಅಂಧಕಾರದ ಇನ್ನೊಂದು ರೂಪ ಸತ್ತಾಭೀಪ್ಸೆ ಅಥವಾ ಪಟ್ಟಭದ್ರ ಹಿತಾಸಕ್ತಿ. ಆದರ್ಶರಹಿತ ಅಧಿಕಾರ ಒಂದು ವ್ಯಸನವೂ ಹೌದು, ವಾಸನೆಯೂ ಹೌದು. ಅದು ತೇಜೋಮಯ ಶಕ್ತಿಯಲ್ಲ, ತಮೋಮಯ ಸ್ವೇಚ್ಛಾಚಾರ. ಸ್ವರಾಜ್ಯ ಮತ್ತು ಸುರಾಜ್ಯಗಳಿಗಾಗಿ ಕಟಿಬದ್ಧರಾಗಿ ನಿಂತ ಸ್ವಾತಂತ್ರ್ಯವೀರ ಚಿಂತಕರು, ಮುಂದೆ ಈ ದೇಶದ ಅಧಿಕಾರ ಸೂತ್ರವನ್ನು ಹಿಡಿದವರಿಂದ ಅನಾಸಕ್ತಿ ಮತ್ತು ಅಪರಿಗ್ರಹಗಳನ್ನು ಅಪೇಕ್ಷಿಸಿದರು. ಆದರೆ ಆದದ್ದೇನು? 'ಅ' ಎಂಬುದನ್ನು ಈ ಜನ ಅರ್ಥಮಾಡಿಕೊಂಡದ್ದೇ ಬೇರೆ ರೀತಿಯಲ್ಲಿ. 'ಅನಾಸಕ್ತಿ' ಹಾಗೂ 'ಅಪರಿಗ್ರಹ'ಗಳಲ್ಲಿನ ಮೊದಲಕ್ಷರವನ್ನು ಅವರು ತ್ಯಜಿಸಿದರು. 'ಆಸಕ್ತಿ' ಮತ್ತು 'ಪರಿಗ್ರಹ'ಗಳನ್ನು ಭಜಿಸಿದರು. ಅಂಥವರ ಸಂತತಿ ಸಾವಿರವಾಯಿತು. ಲಕ್ಷವಾಯಿತು.



ಒಟ್ಟನಲ್ಲಿದು ಅಂಧಯುಗ. ಪ್ರತಿಯೊಬ್ಬ ನೇತಾರನೂ ಧರ್ಮಜನಲ್ಲ, ಧೃತರಾಷ್ಟ್ರನಾಗಿ ಅಂಧಯುಗ ಪುನರಾವರ್ತಿಸುವಂತೆ ಮಾಡುತ್ತಿದ್ದಾನೆ. ಅಂಧೇರಿ ನಗರಿಗೊಬ್ಬ ಚೌಪಟ ರಾಜನಿದ್ದನಂತೆ. ಈ ಚೌಪಟ ರಾಜನಿಗೆ ಪ್ರಜೆಗಳ ಅಳಲು ಅರಿವಿಗೆ ಬಂದೀತಾದರೂ ಹ್ಯಾಗೆ? ಅರಮನೆಯ ಗೋಡೆಗಳನ್ನು ದಾಟಿ ಅಂತಃಪುರದವರೆಗೂ ನುಗ್ಗುವಷ್ಟು ಸಶಕ್ತವಲ್ಲ ಆ ಅಳಲುಗಳು. ಅಲ್ಲಿ ಚೌಪಟ ರಾಜ ಆಪ್ತಾಲೋಚನೆಯಲ್ಲಿಯೆ ತೊಡಗಿಕೊಂಡಿರುತ್ತಿದ್ದ. ಆತನ ಸುತ್ತ ಬರಿ ಶಕುನಿಗಳು-ಉಪಶಕುನಿಗಳು-ಅಪ ಶಕುನಿಗಳು. ಇಂಥವರಿರುವಲ್ಲಿ ಮತ್ತೇನಿದ್ದೀತು ವಿಷಯ? ಇವರೊಂದಿಗೆ ಸೋ ಅನ್ನುತ್ತ ಕ್ರಮೇಣ ಇಡೀ ಅಧಿಕಾರವನ್ನೇ ತಮ್ಮ ಕೈಗೆ ಅಪರೋಕ್ಷವಾಗಿ ತೆಗೆದುಕೊಂಡು ಆಡಿಸತೊಡಗಿದರು ಧನಪತಿಗಳು. ಧನ ಎಂದ ಕೂಡಲೇ ನಮಗೆ ಕಾಳಧನ-ಕಪ್ಪು ಹಣಗಳು ನೆನಪಿಗೆ ಬರುತ್ತವೆ. ಇಲ್ಲಿಯೂ ಕಪ್ಪು (ಕತ್ತಲೆ) ತನ್ನ ಮಹಿಮೆ ತೋರುತ್ತಿದೆ. ಈಗಲೂ ಅಷ್ಟೆ. ಕಪ್ಪು ಹಣದ್ದೇ ಕಾರಭಾರ. ಒಂದು ವಿಷಯದಲ್ಲಿ ಮಾತ್ರ ಈ ಧನಪತಿಗಳು ಹಾಗೂ ಅವರಾಡಿಸಿದಂತೆ ಆಡುವ ಅಧಿಕಾರಸ್ಥರು ವರ್ಣಭೇದವನ್ನು ಅನುಸರಿಸುವುದಿಲ್ಲ, ಆಚರಿಸುವುದಿಲ್ಲ. ಅವರೆಂದೂ 'ಕರಿಲಕ್ಷ್ಮಿ' 'ಬಿಳಿಲಕ್ಷ್ಮಿ' ಎಂದು ಹೇಳಿದ್ದು ಕೇಳಿದ್ದಿದೆಯೆ? ಅವರ ಮಟ್ಟಿಗೆ ಹಣ ವರ್ಣರಹಿತ.

ಅಂಧಕಾರಕ್ಕೆ ರೂಪ-ಗುಣ-ಆಕಾರಗಳಿವೆಯೇ? ನಕ್ಕುಬಿಡುವ ಪ್ರಶ್ನೆಯಲ್ಲ. ಗಂಭೀರವಾಗಿ ಯೋಚಿಸಬೇಕಾದ ವಿಚಾರ ಅದು ಬಹುರೂಪಿ, ಬಹುಗುಣಿ; ಬಹುವಿಧ ಆಕಾರ ತಳೆಯುವ ಸಾಮರ್ಥ್ಯವುಳ್ಳದ್ದು. ಕತ್ತಲೆಯ ಆರಾಧಕರಿಗೆ ಈ ಬಹುರೂಪ-ಬಹುಗುಣ-ಬಹುವಿಧ ಆಕಾರಗಳು ಸುಪರಿಚಿತ. ಅಂತೆಯೇ ಅವರು ಹುಣ್ಣಿಮೆಯನ್ನು ದೂಷಿಸುತ್ತಾರೆ, ಚಂದ್ರನನ್ನು ದ್ವೇಷಿಸುತ್ತಾರೆ. ಅಮಾವಾಸ್ಯೆಯನ್ನು ಅತಿಪ್ರೀತಿಯಿಂದ ಆದರಿಸುತ್ತಾರೆ, ತಮ್ಮೆಲ್ಲ ಕರಾಳ ಕೃತ್ಯಗಳಿಗೆ ಅಮಾವಾಸ್ಯೆಯನ್ನೇ ಆಧರಿಸುತ್ತಾರೆ.

ನಾವು ಬೆಳಕಿನ ಪಕ್ಷಪಾತಿಗಳಾಗೋಣ. ಸಾಮಾನ್ಯ ಅರ್ಥದ ಬೆಳಕಿನ ಪಕ್ಷಪಾತಿಗಳಲ್ಲ; ಅವರ್ಣನೀಯ ಅನುಭೂತಿಯುಂಟು ಮಾಡುವ ಅಲೌಕಿಕ ಬೆಳಕಿನ ಪಕ್ಷಪಾತಿಗಳಾಗೋಣ. ಒಳಗೂ ಅದನ್ನೇ ತುಂಬಿಕೊಳ್ಳೋಣ, ಹೊರಗೂ ಅದನ್ನೇ ಅಪ್ಪಿಕೊಳ್ಳೋಣ.

**ಮಗು ಮನಸ್ಸು**

# ಎಳೆಯರ ಮನದಿಂದ ಇಳಿದು ಬಂದ 'ವೈದ್ಯ'ರು

● ಇಂದ್ರದೇವ್ ಪಂತ್



"ವೈದ್ಯರು ಸಾಮಾಜಿಕವಾಗಿ ಅತ್ಯಂತ ಪ್ರತಿಷ್ಠಿತರು"- ಕ್ಯಾಥರೀನ್ (ಆರು ವರ್ಷ).

ಇತ್ತೀಚೆಗೆ ವಿದೇಶಿ ನಿಯತಕಾಲಿಕವೊಂದರ ಮೇಲೆ ಕಣ್ಣಾಡಿಸುತ್ತಿದ್ದೆ. "ಎಳೆಯರ ಮನದಿಂದ ಇಳಿದು ಬಂದ 'ವೈದ್ಯ'ರು" ಎಂಬ ಶೀರ್ಷಿಕೆಯಡಿ ಪ್ರಕಟಗೊಂಡಿದ್ದ ಸಮೀಕ್ಷಾ ಲೇಖನ ನನ್ನ ಗಮನ ಸೆಳೆಯಿತು. ಓದತೊಡಗಿದೆ. ಅದರೊಳಗಿನ ವಿಷಯ ನನ್ನನ್ನು ನನ್ನ ಬಾಲ್ಯಕ್ಕೆ ತಳ್ಳುತ್ತದರೂ ಮನೆ ಹೊರಗಿನ ದಾಂಧಲೆಖೋರನಾದ ನನ್ನ ಸ್ಮೃತಿಪಟಲದ ಮೇಲೆ ವೈದ್ಯರ ಕುರಿತ ವಿಶೇಷಗಳೊಂದೂ ಮೂಡಲಿಲ್ಲ. ನಾನು ಹೆಚ್ಚು ಬಾರಿ ವೈದ್ಯರ ಬಳಿಗೆ ಹೋಗದಿರುವುದೋ ಅಥವಾ ವೈದ್ಯರ ಬಗೆಗೆ ತಲೆ ಕೆಡಿಸಿಕೊಳ್ಳದಿರುವುದೋ ಇದಕ್ಕೆ ಕಾರಣವಾಗಿರಲೂ ಸಾಕು ಎಂದೇ ನನ್ನ ಅನಿಸಿಕೆ.

ಆದರೆ ನನ್ನಕ್ಕನ ಮಗ ಡಾಕ್ಟರೆಂದಾಕ್ಷಣ ಮನೆಯ ಮಾಡು ಕುಸಿಯುವಂತೆ ಅರಚುತ್ತಿದ್ದುದೂ, ರಂಪಾಟ ಮಾಡುತ್ತಿದ್ದುದೂ ಮನದಲ್ಲಿ ಮೂಡಿತು. ಆತ ಬಲು ಉಲಕೋಚಿ. ಒಂದು ರೀತಿ ಚಂಡಿಕತೆಯ ಹುಡುಗ. ನನ್ನಕ್ಕ ಯಾವುದನ್ನು ಮಾಡಬೇಡವೆನ್ನುತ್ತಿದ್ದಳೋ ಅದನ್ನು ಮಾಡಿಯೇ ತೀರುವ ಹಟದ ಸ್ವಭಾವದವ. ಆಕೆ ಬಟ್ಟೆ ಒಗೆಯುವಾಗೊಮ್ಮೆ "ನೀರು ಆಡಬ್ಯಾಡೋ ಅಪ್ಪ್ಯಾ. ಹೀಂಗss ನೀರು ಆಡತಾ ಇರು; ಡಾಕ್ಟರ ಹತ್ರ ಕರಕೊಂಡು ಹೋಗಿ ಡಬ್ಬಣದಂಥಾ ಸೂಜಿಯಿಂದ ಚುಚ್ಚಸತೀನಿ" ಎಂದು ಬೆದರಿಸುತ್ತಿದ್ದಳು. 'ಡಾಕ್ಟರು' ಎಂಬ ಶಬ್ದ ಅದೇನು ಮೋಡಿಮಾಡಿತ್ತೋ ಏನೋ, ಅಪ್ಪ್ಯಾ ಆ ಕ್ಷಣಕ್ಕೆ ನೀರಾಟವನ್ನು ನಿಲ್ಲಿಸುತ್ತಿದ್ದ. ಮತ್ತೊಂದು ಸ್ವಲ್ಪ ಹೊತ್ತು ತಡೆದು ಪುನಃ ನೀರಾಟ ಮುಂದುವರಿಸುತ್ತಿದ್ದ. ಹಾಗಾಗಿ ಆತ ಮೇಲಿಂದ ಮೇಲೆ ಡಾಕ್ಟರರ ಬಳಿ ಹೋಗಬೇಕಾಗುತ್ತಿತ್ತು. ನಾವೆಲ್ಲ ಅವನ ಒದರಾಟವನ್ನು ಸಹಿಸಬೇಕಾಗುತ್ತಿತ್ತು. ಡಾಕ್ಟರ್ ಅಂದಾಕ್ಷಣ ಅವನು ನೀರಾಟವನ್ನೇಕೆ ನಿಲ್ಲಿಸುತ್ತಾನೆ? ಅನಾರೋಗ್ಯವಾದಾಗ ಡಾಕ್ಟರ ಬಳಿ ಕರೆದೊಯ್ದರೆ ಹಾಗೇಕೆ ಆಕಾಶ-ಭೂಮಿ ಒಂದಾಗುವಂತೆ ಒದರುತ್ತಾನೆ ಅನ್ನುವದು ಭೇದಿಸಲಾಗದ ನಿಗೂಢರಹಸ್ಯವಾಗಿತ್ತು ನನಗೆ.

ಅವನ ಆ ನೆನಪು ಬರತೊಡಗಿದೊಡನೆ ನನ್ನ ನಿಗೂಢದ ರಹಸ್ಯವನ್ನು ಭೇದಿಸಬಲ್ಲ ಉತ್ತರ ಈ ಲೇಖನದಲ್ಲಿ ಸಿಕ್ಕಬಹುದೆನ್ನಿಸಿತು. ಓದುತ್ತ ಹೋದೆ. ಸಮೀಕ್ಷಾ ಲೇಖನಕ್ಕೆ ಪೂರಕವಾಗಿ ನೀಡಲಾಗಿದ್ದ; ಅಷ್ಟೇನು ಆಕರ್ಷಣೀಯವಲ್ಲದ, ಅಸಡಾ-ಬಸಡಾ ಎಳೆದ ಗೆರೆಗಳು, ಬಣ್ಣಗಳು ವೈದ್ಯರ ಬಗೆಗಿನ ಮಕ್ಕಳ ಭಾವನೆಗಳನ್ನು ಒಂದೊಂದಾಗಿ ನನ್ನ ಮುಂದೆ ತೆರೆದಿಡತೊಡಗಿದವು. ವೈದ್ಯರ ಕುರಿತು ತಮ್ಮ ಮನದಲ್ಲಿರುವ ಭಾವನೆ ಮತ್ತು ತಾವು ಅನಾರೋಗ್ಯ ಪೀಡಿತರಾದಾಗ ವೈದ್ಯನೆಂಬ ವ್ಯಕ್ತಿ ತಮಗೆ ಹೇಗೆ ಕಾಣಿಸುತ್ತಾನೆ ಎಂಬುದನ್ನು ಮಕ್ಕಳು ತಮ್ಮ ಚಿತ್ರಗಳಲ್ಲಿ ಅಭಿವ್ಯಕ್ತಿಸಿದ್ದರು. ಆ ಅಭಿವ್ಯಕ್ತಿ ಯಾವುದೇ ಕವಿ, ಕಲೆಗಾರನ ಕೃತಿಗಿಂತ ಯಾವುದರಲ್ಲೂ ಕಮ್ಮಿಯಿಲ್ಲ ಎಂದೆನಿಸಿತು. ಅವುಗಳ ಕೆಲ ತುಣುಕುಗಳನ್ನು ಕೊಡುವ ಪ್ರಯತ್ನವನ್ನು ನಾನಿಲ್ಲಿ ಮಾಡಿದ್ದೇನೆ.

## ತಂದೆಯಂತಹ ವ್ಯಕ್ತಿ ವೈದ್ಯ

ಆಲಿವರ್ ನಾಲ್ಕೂವರೆ ವರ್ಷದ ಚಿನ್ನಾರಿ. ಅನಾರೋಗ್ಯಕ್ಕೆ ತುತ್ತಾಗಿರುವುದರಿಂದ ತಾನೀಗ ಸಂಪೂರ್ಣ ನಿಷ್ಕ್ರಿಯ. ಪುಟ್ಟ ರೋಗಿಯಾಗಿದ್ದರೂ ಬೃಹತ್ತಾದ ಹಾಸಿಗೆಯಲ್ಲಿ ಮಲಗಿದ್ದು ಎಲ್ಲೋ ಕಳೆದು ಹೋಗಿರುವವ. (ಚಿತ್ರ ೧ರ ಕೆಳಭಾಗದ ಎಡತುದಿ) ಎಂಬಂತೆ ಚಿತ್ರಿಸಿಕೊಂಡಿದ್ದಾನೆ. ತಾನು ರೋಗ ಪೀಡಿತನಾಗಿರುವ ಕಾರಣ ಎಲ್ಲರಿಂದ ಪ್ರತ್ಯೇಕವಾಗಿ ಇರಬೇಕಲ್ಲ ಎಂಬ ಹೆದರಿಕೆಯ ಭಾವನೆಯಿಂದಲೋ ಅಥವಾ ಶಾಲೆಗೆ ಹೋಗಬೇಕೆನ್ನುವ ಕಿರಿಕಿರಿ ಇಲ್ಲದೇ ಆರಾಮಾಗಿ, ಸಂತೋಷದಿಂದ ಹಾಸಿಗೆಯಲ್ಲಿ ಮಲಗಿರಬಹುದು ಎಂಬ ಭಾವನೆಯಿಂದಲೋ ಆ ರೀತಿ ಚಿತ್ರಿಸಿದ್ದಿರಬಹುದು ಎಂದುದು ಮನೋವೈದ್ಯರ ವಿಶ್ಲೇಷಣೆ.

ವೈದ್ಯರ ಬಗೆಗೆ ಆಲಿವರ್‌ಗೆ ತನ್ನ ತಂದೆಯಲ್ಲಿರುವಂಥದೇ ಪ್ರೀತಿ. ಆದ್ದರಿಂದ ತನ್ನ ಹಾಸಿಗೆ ಬಳಿ ತನ್ನ ತಾಯಿಯನ್ನು ಚಿತ್ರಿಸಿಲ್ಲ. ಉದ್ದ ಕೂದಲು, ದಪ್ಪತಲೆಯ ವೈದ್ಯ ಪೂರ್ಣ ಚಂದಿರನಂಥ ಮುಖವುಳ್ಳ ದಯಾಮಯನಾದ ವ್ಯಕ್ತಿ. ಕೆಂಪು ಬಣ್ಣದ ಚೀಲವೊಂದನ್ನು ವೈದ್ಯ ಹಿಡಿದಿ

ದ್ದಾನೆ. ಈ ಚೀಲ ಎಲ್ಲ ಚಿತ್ರಗಳಲ್ಲೂ ಸಾಮಾನ್ಯವಾದುದಾಗಿದ್ದು ಎರಡು ಅರ್ಥಗಳನ್ನು ಅದು ಸಾರುತ್ತದೆ. ಮಗುವಿನ ಸಮೀಪ ಈ ಚೀಲವನ್ನು ಹಿಡಿದಾಗ (ಚಿತ್ರದಲ್ಲಿರುವಂತೆ) ಉಡುಗೊರೆಯಂತೆ ಕಂಡುಬರುವುದು ಒಂದಾದರೆ, ಯುದ್ಧದ ಸಮಯದಲ್ಲಿ ಝಳಪಿಸುವ ಅಥವಾ ಮಗುವನ್ನು ಬೆದರಿಸಲು ಉಪಯೋಗವಾಗುವ ಆಯುಧದಂತೆಯೂ ಗೋಚರಿಸುವುದು ಮತ್ತೊಂದು. ಈ ಎರಡೂ ಸಂದರ್ಭಗಳಲ್ಲಿ ಮಕ್ಕಳ ದೃಷ್ಟಿಯಲ್ಲಿ ವೈದ್ಯನ ಘನತೆ ಮತ್ತು ಮಹತ್ವ ಎಷ್ಟೆಂಬುದನ್ನು ಚಿತ್ರ ವಿವರಿಸುತ್ತದೆ.

## ಸರ್ವಶಕ್ತ ವ್ಯಕ್ತಿ

ಐದು ವರ್ಷದ ಪ್ಯಾಟ್ರಿಕ್ ದೃಷ್ಟಿಯಲ್ಲಿ ಹಾವಿನಂತೆ ಉದ್ದವಾದ ಕೈಗಳು ಮತ್ತು ದೊಡ್ಡ ಕಣ್ಣುಗಳ ಅಧಿಕಾರಯುತ ವ್ಯಕ್ತಿ ವೈದ್ಯ (ರೋಗಿಯನ್ನು ಸ್ಪರ್ಶಿಸಲು ಮತ್ತು ಪರೀಕ್ಷಿಸಲು ವೈದ್ಯನಿಗೆ ಉದ್ದವಾದ ಕೈಗಳು ಅತ್ಯಗತ್ಯ. ಅಂತೆಯೇ ವೈದ್ಯನಾದವ ದೊಡ್ಡ ದೊಡ್ಡ ಕಣ್ಣುಗಳನ್ನು ಹೊಂದಿರಬೇಕು ಇಲ್ಲವೇ ದೊಡ್ಡದಾದ ಕನ್ನಡಕವನ್ನು ಹಾಕಿಕೊಂಡಿರಬೇಕು. ಹಾಗಿದ್ದಲ್ಲಿ ಮಾತ್ರ ಆತ ತನ್ನ ಕರ್ತವ್ಯವನ್ನು ಸಮರ್ಥವಾಗಿ ನಿಭಾಯಿಸಲು ಸಾಧ್ಯ ಎನ್ನುವ ಭಾವನೆಯಿಂದಲೂ ಕೆಲ ಮಕ್ಕಳು ವೈದ್ಯರನ್ನು ಚಿತ್ರಿಸಿರುವುದುಂಟು.) ಇದರೊಂದಿಗೆ ರೋಗಿಯ ಪರಿಸ್ಥಿತಿಯನ್ನು ಕೂಲಂಕಷವಾಗಿ ಪರಿಶೀಲಿಸಲು ಬೆಳಕಿನ ಅವಶ್ಯಕತೆಯೂ ಇದೆ ಎಂಬ ಭಾವನೆಯಿಂದ ಈ ಚಿತ್ರದಲ್ಲಿ ಮಾಳಿಗೆಗೆ ಜೋತು ಬಿದ್ದ ದೀಪವನ್ನು ಚಿತ್ರಿಸಲಾಗಿದೆ. (ಚಿತ್ರ ೨)

ಅನಾರೋಗ್ಯಕ್ಕೆ ತುತ್ತಾದ ಮಗುವನ್ನು ವೈದ್ಯ ಪರೀಕ್ಷಿಸತೊಡಗುತ್ತಿದ್ದಂತೆಯೇ ಮಗು ಮತ್ತಷ್ಟು ಮುದುಡಿಕೊಂಡು ಸಶಕ್ತ ಪ್ರಾಣಿಯೊಂದರ ಕೈಗೆ ಸಿಕ್ಕ ಅತಿಚಿಕ್ಕ ಸೂಕ್ಷ್ಮ ಜೀವಿಯಂತಾಗುತ್ತದೆ ಎಂಬಂತೆ ಚಿತ್ರಿಸಿದ್ದಾನೆ ಪ್ಯಾಟ್ರಿಕ್.

ವೈದ್ಯರ ಬಗೆಗೆ ಪೋಷಕರು ಮಕ್ಕಳ ಮನದಲ್ಲಿ ಉಂಟು ಮಾಡುವ ಭಯಕ್ಕೆ ಈ ಚಿತ್ರ ಸ್ಪಷ್ಟ ಉದಾಹರಣೆ. ಅನಾರೋಗ್ಯಕ್ಕೆ ತುತ್ತಾಗುವುದು ತುಂಟಾಟಕ್ಕೆ ಆಗುವ ಶಿಕ್ಷೆ ಎಂಬ ಹೆದರಿಕೆಯನ್ನು ಮಗುವಿನ ಮನದಲ್ಲಿ ಬಿತ್ತಿದುದೂ ಈ ರೀತಿ ಚಿತ್ರಿಸಲು ಕಾರಣವಾಗಿರಬಹುದು. ಪೋಷಕರ ಆ ತೆರನಾದ ನಡವಳಿಕೆ ಮಕ್ಕಳ ಮನಸ್ಸನ್ನು ಮತ್ತಷ್ಟು ಜಟಿಲಗೊಳಿಸಿ ಭಯಭೀತ ಪ್ರವೃತ್ತಿಗೆ ಜಾರುವಂತೆ ಮಾಡುವ ಸಂದರ್ಭವೂ ಒದಗಬಹುದು. ವೈದ್ಯರೆಂದಾಕ್ಷಣ ಉದ್ವೇಗಕ್ಕೆ ತುತ್ತಾಗುವ ಮನೋಭಾವವನ್ನೂ ರೂಢಿಸಬಹುದು ಎಂಬುದಾಗಿ ವೈದ್ಯರು ವಿಶ್ಲೇಷಿಸಿದ್ದಾರೆ.

## ಅಕ್ರಮ ಪ್ರವೇಶಗಾರ

ಆರು ವರ್ಷದ ಬಾಲೆ ಜ್ಯೂಲಿಗೆ ವೈದ್ಯನ ಆಗಮನವೇ ಅತ್ಯಂತ ಕಿರಿಕಿರಿಯ ಸಂಗತಿ. ವೈದ್ಯರು ಪರೀಕ್ಷಿಸಲು ಬಂದೊಡನೆ ಬಟ್ಟೆಯನ್ನು ತೆಗೆದುಹಾಕಲು ಹೇಳುತ್ತಾರೆ. ಹಾಗೇ ಅವರೆದುರು ನಿಲ್ಲಬೇಕು. ಆಗ ವೈದ್ಯರು ನೋಡುವ ರೀತಿಯಿದೆಯಲ್ಲ, ಅದು ಸ್ವಲ್ಪವೂ ಹಿಡಿಸಲಾರದಂಥದು. ಆದ್ದರಿಂದ ವೈದ್ಯನೆಂದರೆ ನನಗೆ ಸ್ವಲ್ಪವೂ ಮೆಚ್ಚುಗೆಯಿಲ್ಲ ಎಂಬ ಬಹುತೇಕ ಹುಡುಗಿಯರ ಅಭಿಪ್ರಾಯವನ್ನವಳು ತನ್ನ ಚಿತ್ರದಲ್ಲಿ ಅಭಿವ್ಯಕ್ತಿಸಿರುವಳು.

ಸರಳವಾದ ಗೆರೆಗಳು ಮತ್ತು ಸೌಮ್ಯವಾದ ಬಣ್ಣವನ್ನು ಹೊರತುಪಡಿಸಿ (ಚಿತ್ರ ೩)ನ್ನು ವೀಕ್ಷಿಸಿದಾಗ ಈ ಮಾತಿಗೆ ಸ್ಪಷ್ಟ ರೂಪಕಗಳು ಚಿತ್ರದಲ್ಲಿ ದೊರೆಯುತ್ತವೆ. ಮುಖ, ಕೈಕಾಲುಗಳೊಂದೂ ಇಲ್ಲದ, ಅತಿಕಡಿಮೆ ಬಟ್ಟೆ ತೊಟ್ಟಿರುವ ಜೀವಿ ತಾನು ಎಂಬಂತೆ ಚಿತ್ರಿಸಿಕೊಂಡಿರುವ ಜ್ಯೂಲಿ ತನ್ನ ರಕ್ಷಣೆಗಾಗಿ ತನ್ನ ತಾಯಿಯ ಬದಲಿಗೆ ಅರಳಿದ ದೊಡ್ಡ ಹೂವುಗಳು ಮತ್ತು ಸುತ್ತಲಿರುವ ಟೇಬಲ್ಲುಗಳನ್ನೇ ದಾಳಿಕೋರನನ್ನು ತಡೆಹಿಡಿಯುವ ಕೋಟೆಯನ್ನಾಗಿಸಿದ್ದಾಳೆ.

ವೈದ್ಯ ತೊಟ್ಟಿರುವ ದಿರಿಸು ಅವನಿಗಿರುವ ಸಾಮಾಜಿಕ ಘನತೆಯನ್ನು ಮತ್ತು ಪುರುಷತ್ವವನ್ನು ಸೂಚಿಸುತ್ತದೆ ಎಂಬಂತೆ ಬಾಲಕಿಯರು ವೈದ್ಯಕೀಯ ಸಲಕರಣೆಗಳಾದ ಸ್ಟೆಥೋಸ್ಕೋಪ್, ಸಿರಿಂಜ್, ಸ್ಕಾಲ್‌ಪೆಲ್‌ಗಳ ಬದಲಾಗಿ ಪುರುಷರ ಸಂಕೇತಗಳಾದ ಗಡ್ಡ, ಸಿಗರೇಟಿನ ಕೊಳವೆ, ಊರುಗೋಲುಗಳ ಮೇಲೆ ಹೆಚ್ಚಿನ ಗಮನವನ್ನು

ನೀಡಿರುತ್ತಾರೆ. ಇದಕ್ಕೆ ವಿರುದ್ಧವಾಗಿ ವೈದ್ಯಕೀಯ ಸಲಕರಣೆಗಳ ಬಗೆಗೆ ಬಾಲಕರು ಹೆಚ್ಚಿನ ಆದ್ಯತೆ ನೀಡುತ್ತಾರೆ ಎಂಬುದು ಈ ಚಿತ್ರಗಳಿಂದ ತಿಳಿದು ಬಂದಿರುವುದಾಗಿ ವಿಶ್ಲೇಷಿಲಾಗಿದೆ.

## ವೈದ್ಯ ಮತ್ತು ಚಮಚ

ಕೈಯಲ್ಲಿ ದೊಡ್ಡದಾದ ಚಮಚ ಮತ್ತು ಟಾರ್ಚ್‌ಗಳನ್ನು ಹಿಡಿದು ಬರುವ ವೈದ್ಯ ಗಂಟಲನ್ನು ಪರೀಕ್ಷಿಸುವ ರೀತಿ ನಾಲ್ಕು ವರ್ಷದ ಡೇನಿಯಲ್‌ಗೆ ಹಿತಕರವಲ್ಲದ ಕ್ರಿಯೆ. ಇದೇ ಅಭಿಪ್ರಾಯವನ್ನು ಬಹುತೇಕ ಮಕ್ಕಳು ವ್ಯಕ್ತಪಡಿಸಿದ್ದು ಚಮಚೆಗಳು ಮತ್ತು ಟಾರ್ಚ್‌ಗಳೇ ವೈದ್ಯಕೀಯ ಸಾಮಗ್ರಿಗಳು ಎನ್ನುವಂತೆ ಚಿತ್ರಿಸಿದ್ದಾರೆ. ಇವುಗಳೊಂದಿಗೆ ಸ್ಟೆಥೋಸ್ಕೋಪ್ ಸಹ ಎಲ್ಲ ಚಿತ್ರಗಳಲ್ಲಿ ಕಂಡುಬರುವ ಸಲಕರಣೆಯಾಗಿದ್ದು ಕೆಲ ಚಿತ್ರಗಳಲ್ಲಂತೂ ಇದು ಬೃಹದಾಕಾರವಾದದ್ದೂ ಆಗಿರುತ್ತದೆ. ಸ್ಟೆಥೋಸ್ಕೋಪ್‌ನ ತಣ್ಣಗಿನ ಸ್ಪರ್ಶದಿಂದ ಮಕ್ಕಳು ಒಮ್ಮೆಲೇ ಬೆದರುತ್ತವೆ.

ಬಹುತೇಕ ಚಿತ್ರಗಳಲ್ಲಿ ಕಾಣಿಸಿಕೊಂಡಿರುವ ಸಿರಿಂಜ್‌ಗಳು ಬಾಣಗಳಂತೆ, ಕತ್ತಿಯಂತೆ ಅಥವಾ ಮಕ್ಕಳಲ್ಲಿ ಹೆದರಿಕೆ ಉಂಟುಮಾಡಬಲ್ಲ ಇದೇರೀತಿಯ ಆಯುಧಗಳಂತೆ ಚಿತ್ರಿಸಲ್ಪಟ್ಟಿರುವುದೂ ಮತ್ತೊಂದು ಗಮನ ಸೆಳೆವ ಸಂಗತಿಯಾಗಿದೆ. ಇದಲ್ಲದೆಯೇ ಚಿತ್ರಿಸಲ್ಪಡುವ ಮತ್ತೊಂದು ಸಲಕರಣೆಯೆಂದರೆ ಥರ್ಮಾಮೀಟರ್. ಬಾಲ್ಯದ ದಿನಗಳಿಂದಲೂ ಇದನ್ನು ನೋಡುತ್ತಿರುವ ಮಕ್ಕಳು ಇದೊಂದು ವೈದ್ಯರು ಉಪಯೋಗಿಸುವ ಸಾಮಾನ್ಯ ಸಲಕರಣೆಯೆಂದೇ ಭಾವಿಸಿರುತ್ತಾರೆ ಎಂದು ವಿಶ್ಲೇಷಿಸಲಾಗಿದೆ.

## ತಾಯಿಯಾಗಿ ವೈದ್ಯ

ಕೆಲವು ಮಕ್ಕಳು ವೈದ್ಯರನ್ನು ತಮ್ಮ ಇನ್ನೊಬ್ಬ ತಾಯಿಯೆಂದೇ ಭಾವಿಸಿರುತ್ತವೆ. ಆರು ವರ್ಷದ ಆ್ಯನೆ ಚಿತ್ರಿಸಿರುವ ಇಬ್ಬರು ವ್ಯಕ್ತಿಗಳಲ್ಲಿ ಏಪ್ರಾನ್ ಮೇಲೆ ಪ್ಲಸ್ ಗುರುತು ಇರುವುದನ್ನು ಹೊರತುಪಡಿಸಿದರೆ ಇಬ್ಬರು ವ್ಯಕ್ತಿಗಳೂ ತಾಯಿಯ ರೂಪದಲ್ಲೆ ಇದ್ದಾರೆ. ತಾನು ಅನಾರೋಗ್ಯ ಪೀಡಿತಳಾಗಿದ್ದರೂ ತನ್ನನ್ನು ರಕ್ಷಿಸಲು ತಾಯಿಯೊಂದಿಗೆ ವೈದ್ಯರೂ ಇರುವುದರಿಂದ ತಾನು ಉಲ್ಲಾಸ ಭರಿತಳೂ ಲವಲವಿಕೆಯಿಂದ ಕೂಡಿದವಳೂ ಆಗಿರುವಂತೆ ಚಿತ್ರಿಸಿಕೊಂಡಿದ್ದಾಳೆ.

ಆ್ಯನೆ ದೃಷ್ಟಿಯಲ್ಲಿ ಅನಾರೋಗ್ಯದ ಇನ್ನೊಂದು ಲಾಭವೆಂದರೆ ಉತ್ಕೃಷ್ಟವಾದ ಆಹಾರ ದೊರೆಯುವುದು (ಇದೇ ಭಾವನೆ ಬಹುತೇಕ ಮಕ್ಕಳಲ್ಲಿ ವ್ಯಕ್ತವಾಗಿದೆ) ಅನಾರೋಗ್ಯದ ಸಮಯದಲ್ಲಿ ತಮಗೆ ದೊರೆಯುವ ಸ್ವಾದಿಷ್ಟ ಮತ್ತು ಸತ್ವ ಭರಿತ ಆಹಾರ ಮಕ್ಕಳನ್ನು ಅವರ ಶೈಶವಾವಸ್ಥೆಗೂ ಕೆಲಕಾಲ ಕೊಂಡೊಯ್ದಿರುತ್ತದೆ. ಶಿಶು ಆಹಾರ, ಸಿಹಿಯಾದ ದ್ರವಾಹಾರ ಹಾಗೂ ಮತ್ತಿತರ ಹಿತಕರ ಆಹಾರ ಲಭಿಸುವುದು ಅನಾರೋಗ್ಯದ ಅನುಕೂಲವೆಂಬುದು ಮಕ್ಕಳ ಭಾವನೆಯಾಗಿದೆ.

ಇದರೊಂದಿಗೆ ತಾನು ಅನಾರೋಗ್ಯ ಪೀಡಿತಳಾದ ಅವಧಿ ತನ್ನನ್ನು ತಾಯಿ ರೂಪವೇ ಇಲ್ಲದ ಕ್ರಿಮಿಯಂತಿರುವ ತಮ್ಮನಿಂದ ದೂರವಿದ್ದು ಆರೈಕೆ ಮಾಡುವ ಸುಸಮಯವೂ ಹೌದು ಎಂಬರ್ಥದೊಂದಿಗೆ ಚಿತ್ರಿಸಿ ವೈದ್ಯ ತನ್ನನ್ನು ಆರೈಕೆ ಮಾಡಲೋಸುಗ ತಾಯಿಯೊಂದಿಗೆ ಸ್ಪರ್ಧೆಗಿಳಿದಿರುವ ವ್ಯಕ್ತಿ ಎಂಬಂತೆ ಆ್ಯನೆ ಚಿತ್ರಿಸಿದ್ದಾಳೆ.

ತಮ್ಮ ಆರೈಕೆಗಾಗಿ ಹುಡುಗರು ತಮ್ಮ ತಾಯಿಯನ್ನು ಅವಲಂಬಿಸಿದರೆ ಹುಡುಗಿಯರು ಆಕೆಯನ್ನು ಎದುರಾಳಿಯೆಂದೇ ಭಾವಿಸುವುದು ಇವರಿಬ್ಬರಲ್ಲಿರುವ ಪ್ರಮುಖ ವ್ಯತ್ಯಾಸವಾಗಿದೆ. ಈ ಹಿನ್ನೆಲೆಯಲ್ಲಿ ಹುಡುಗಿಯರು ತಮ್ಮ ತಾಯಿಯನ್ನು ದೂರದಲ್ಲಿ ಚಿತ್ರಿಸುತ್ತಾರೆ ಮತ್ತು ಅವಳ ಕೈ ಅಥವಾ ಕಾಲು ದುರ್ಬಲವಾಗಿರುವಂತೆ ತೋರಿಸಿರುತ್ತಾರೆ.

ವೈದ್ಯರ ಬಗೆಗೆ ತನ್ನ ಮನದಲ್ಲಿ ಮೂಡಿದ್ದ ಭೀತಿಯನ್ನು ಅನಾರೋಗ್ಯದ ಸಮಯದಲ್ಲಿ ನನ್ನಕ್ಕನ ಮಗ ತನ್ನ ಕೂಗಾಟ, ಚೀರಾಟಗಳ ಮೂಲಕ ವ್ಯಕ್ತಪಡಿಸುತ್ತಿದ್ದ. ಆರೋಗ್ಯವಾಗಿದ್ದಾಗ 'ಡಾಕ್ಟರ್' ಎಂಬ ಶಬ್ದ ಕೇಳಿದಾಕ್ಷಣ ತನ್ನ ತುಂಟಾಟವನ್ನೆಲ್ಲ ನಿಲ್ಲಿಸುತ್ತಿದ್ದ ಎಂಬುದನ್ನು ಆ ಸಮೀಕ್ಷಾ ಲೇಖನ ನನಗರಿವು ಮಾಡಿಕೊಟ್ಟಿತು. ●

ಮಗು ಮನಸ್ಸು

• ಡಾ. ಎಚ್.ಎಸ್. ಮೋಹನ್

# ಮಗುವಿನ ಬೆಳವಣಿಗೆಯಲ್ಲಿ 'ಸ್ಪರ್ಶ'ದ ಮಹತ್ವ

ಮಗುವಿನ ಬೆಳವಣಿಗೆಯ ಮೇಲೆ ಹಲವಾರು ಅಂಶಗಳು ಪ್ರಭಾವ ಬೀರುತ್ತವೆ ಎಂಬುದು ವಿಜ್ಞಾನಿಗಳು, ವೈದ್ಯರು ಬಹಳ ಹಿಂದೆಯೇ ಕಂಡುಕೊಂಡ ಸತ್ಯ. ಆದರೆ ಇತ್ತೀಚೆಗೆ ನಡೆದ ಒಂದು ಸಂಶೋಧನೆ ಹೊಸ ವಿಷಯವೊಂದರ ಮೇಲೆ ಬೆಳಕು ಚೆಲ್ಲಿದೆ.

ಮಗುವಿಗೆ ಆಗುವ ಸ್ಪರ್ಶದ ಅನುಭವ ಅದರ ದೈಹಿಕ ಮತ್ತು ಮಾನಸಿಕ ಬೆಳವಣಿಗೆಯ ಮೇಲೆ ನೇರವಾದ ಮತ್ತು ಅತಿಮುಖ್ಯವಾದ ಪರಿಣಾಮ ಬೀರುತ್ತದೆ ಎಂಬುದು ಈ ಸಂಶೋಧನೆಯ ಸಾರ. ಚರ್ಮದಿಂದ ಚರ್ಮಕ್ಕೆ ಆಗುವ ಸಂಪರ್ಕದ ನರ-ರಾಸಾಯನಿಕ ಪರಿಣಾಮಗಳ ಬಗ್ಗೆ ಮೊದಲ ಸಾರಿ ನಡೆದ ಈ ಸಂಶೋಧನೆ ಸ್ಪರ್ಶದ ಅನುಭವವಿಲ್ಲದಿದ್ದರೆ ಆಗತಾನೇ ಹುಟ್ಟಿದ ಮಗು ಬೆಳವಣಿಗೆಯಲ್ಲಿ ಬಹಳವಾಗಿ ಕುಂಠಿತಗೊಳ್ಳುತ್ತದೆ ಎನ್ನುತ್ತದೆ. ಈ ಸ್ಪರ್ಶ ಮಗುವಿನ ತಂದೆ ಅಥವಾ ತಾಯಿಯದೇ ಆಗಬೇಕು ಎಂದೇನೂ ಇಲ್ಲ, ಆದರೆ ಇದು ಮನುಷ್ಯರ ಸಂಪರ್ಕವಾದರೆ ಸರಿ. ಹಾಗೆ ಮನುಷ್ಯರ ಸಂಪರ್ಕದಿಂದ ವಂಚಿತವಾಗುವ ಮಕ್ಕಳನ್ನು ನಿಧಾನವಾಗಿ ಕೊಲ್ಲುವ ಕೆಲವು ಕಾಯಿಲೆಗಳ ಮರ್ಮವನ್ನು ಈ ಸಂಶೋಧನೆ ಹೊರಗೆಡವಬಲ್ಲದು.

ಎರಡನೆಯ ಮಹಾಯುದ್ಧದಲ್ಲಿ ಅನಾಥರಾದ ಮಕ್ಕಳಿಗೆ ಸರಿಯಾದ ಆಹಾರ, ಪಾಲನೆ ಲಭ್ಯವಾದರೂ ಅವರ ಮಾನಸಿಕ ಮತ್ತು ದೈಹಿಕ ಬೆಳವಣಿಗೆಯಲ್ಲಿ ವಿವಿಧ ರೀತಿಯ ನ್ಯೂನತೆ ಕಂಡುಬಂದಿತೆಂದು ಈ ಬಗ್ಗೆ ಸಂಶೋಧನೆ ನಡೆಸಿದ ಹ್ಯಾರಿ ಹಾರ್ಲೋ ಮತ್ತಿತರರು ಅಭಿಪ್ರಾಯಪಡುತ್ತಾರೆ. ಈ ಸಂಶೋಧನೆಯಲ್ಲಿ ಕಂಡುಬಂದ ಮುಖ್ಯ ಅಂಶವೇನೆಂಗರೆ, 'ಸ್ಪರ್ಶ'ದಿಂದಾಗಿ ಮಗುವಿನ ಮಿದುಳಿನಲ್ಲಿ ಒಂದು ರೀತಿಯ ರಾಸಾಯನಿಕ ಬಿಡುಗಡೆ ಹೊಂದುತ್ತದೆ. ಸ್ಪರ್ಶವಿಲ್ಲದ ಕಾರಣ ಈ ರಾಸಾಯನಿಕ ಬಿಡುಗಡೆಯಾಗದಿರುವುದರಿಂದ ಮಗುವಿನ ಬೆಳವಣಿಗೆ ಕುಂಠಿತವಾಗುತ್ತದೆ.

ದಿನ ತುಂಬದೇ ಹುಟ್ಟಿದ ಶಿಶುಗಳನ್ನು ಸಾಮಾನ್ಯವಾಗಿ 'ಇನ್‌ಕ್ಯುಬೇಟರ್' ಎಂಬ ಶಾಖಯುಕ್ತ ಪೆಟ್ಟಿಗೆಯಲ್ಲಿಡುವುದು ಆಸ್ಪತ್ರೆಗಳಲ್ಲಿ ವಾಡಿಕೆ. ಆದರೆ ಹಾಗೆಮಾಡದೆ, ಹೊರಗಡೆಯೇ ಇಟ್ಟು, ದಿವಸಕ್ಕೆ ಮೂರು ಬಾರಿ ೧೫ ನಿಮಿಷಗಳಷ್ಟು ಕಾಲ ಕೈಯಿಂದ ತಿಕ್ಕಿದರೆ 'ಇನ್‌ಕ್ಯುಬೇಟರ್'ನಲ್ಲಿಟ್ಟ ಮಗುವಿಗಿಂತಲೂ ಶೇಕಡಾ ೪೭ರಷ್ಟು ಹೆಚ್ಚು ಬೇಗ ಬೆಳವಣಿಗೆಯಾಗುತ್ತದೆ ಎಂಬುದು ತೀರ ಆಶ್ಚರ್ಯಕರ. ಅಲ್ಲದೆ ಈ ರೀತಿ ತಿಕ್ಕಿಸಿಕೊಂಡ ಶಿಶುಗಳ ನರಮಂಡಲ ವ್ಯವಸ್ಥೆ ಹೆಚ್ಚು ಬೇಗ ಸಶಕ್ತವೂ ಪ್ರಬುದ್ಧವೂ ಆಗುತ್ತದೆ. ಅಲ್ಲದೆ ಈ ಶಿಶುಗಳು ಉಳಿದ ಮಕ್ಕಳಿಗಿಂತ ಹೆಚ್ಚು ಚುರುಕಾಗುತ್ತವೆ. ಹಾಗೆಂದ ಮಾತ್ರಕ್ಕೆ ಹೀಗೆ ತಿಕ್ಕಿಸಿಕೊಂಡ ಶಿಶುಗಳು ಬೇರೆ ಮಕ್ಕಳಿಗಿಂತ ಆಹಾರವನ್ನೇನೂ ಹೆಚ್ಚು ಸೇವಿಸುವುದಿಲ್ಲ. "ದೇಹದ ವಿವಿಧ ಕ್ರಿಯೆಗಳ ಮೇಲೆ ಸ್ಪರ್ಶದ ಪರಿಣಾಮವೇ ಈ ಶಿಶುಗಳು



ಹೆಚ್ಚಾಗಿ ಕ್ಷಿಪ್ರವಾಗಿ ಬೆಳೆಯಲು ಅಥವಾ ಅವುಗಳ ತೂಕ ಜಾಸ್ತಿಯಾಗಲು ಕಾರಣ," ಎಂದು ಮಯಾಮಿ ವಿಶ್ವವಿದ್ಯಾನಿಲಯದ ಮನಃಶಾಸ್ತ್ರಜ್ಞ ಟಿಫನಿ ಫೀಲ್ಡ್ ಅಭಿಪ್ರಾಯಪಡುತ್ತಾರೆ. ಈ ರೀತಿ ತಿಕ್ಕಿಸಿಕೊಂಡ ಮಕ್ಕಳು, ದಿನ ತುಂಬದೇ ಹುಟ್ಟಿದ ಶಿಶುಗಳಿಗಿಂತ ಆರೇಳು ದಿವಸ ಮೊದಲು ಆಸ್ಪತ್ರೆಯಿಂದ ಮನೆಗೆ ಬರಲು ಸಾಧ್ಯ. ಎಂಟು ತಿಂಗಳ ನಂತರ ಮೊದಲ ಗುಂಡಿನ ಮಕ್ಕಳೇ ಉಳಿದ ಮಕ್ಕಳಿಗಿಂತ ಎಲ್ಲ ರೀತಿಯಿಂದ ಉತ್ತಮವಾಗಿದ್ದರು. ಈ ರೀತಿಯ ಹೊಸ ವಿಚಾರ ಬೆಳಕಿಗೆ ಬಂದಮೇಲೆ ಪಾಶ್ಚಾತ್ತ್ಯ ದೇಶಗಳ ಆಸ್ಪತ್ರೆಗಳಲ್ಲಿ ಇದಕ್ಕನುಗುಣವಾಗಿ ಸೂಕ್ತ ಮಾರ್ಪಾಡನ್ನು ಮಾಡಲಾಗಿದೆ.

ಮೊದಲೇ ತಿಳಿಸಿದಂತೆ, ಸಾಮಾನ್ಯವಾಗಿ ನವಮಾಸಭರಿತವಾಗದೆ ಪೂರ್ಣ ಪ್ರಮಾಣದಲ್ಲಿ ಬೆಳವಣಿಗೆ ಹೊಂದದೆ ಹುಟ್ಟಿದ ಶಿಶುಗಳನ್ನು 'ಇನ್‌ಕ್ಯುಬೇಟರ್'ಗಳಲ್ಲಿರಿಸಿ ಚುಚ್ಚುಮದ್ದಿನ ಮೂಲಕವೇ ಅಗತ್ಯ ಆಹಾರವನ್ನು ಕೊಡುವುದಿದೆ. ಅಷ್ಟೆ ಅಲ್ಲ, ಅವುಗಳನ್ನು ಮುಟ್ಟುವುದೇ ಅಪರೂಪ. ಚುಚ್ಚುಮದ್ದು ಕೊಟ್ಟಾಗಲೆಲ್ಲ ಅವು ವಿಪರೀತ ಒದ್ದಾಡುತ್ತವೆ. ಹೀಗೆ ಒದ್ದಾಡಿದಾಗಲೆಲ್ಲ ಹೆಚ್ಚು ಬೆಳವಣಿಗೆ ಹೊಂದಿರದ ಅವುಗಳ ಶ್ವಾಸಕೋಶದ ಮೇಲೆ ವಿಪರೀತ ಒತ್ತಡ ಬೀಳುತ್ತದೆ. ಹಾಗಾದಾಗ ಮಗುವಿಗೆ ಉಸಿರುಕಟ್ಟಿದಂದಾಗಿ ಜೀವಕ್ಕೇ ಅಪಾಯ ಒದಗುತ್ತದೆ.

ಆದರೆ ನಿಧಾನವಾಗಿ ಮಗುವಿನ ಬೆನ್ನು, ಕಾಲುಗಳು, ಕುತ್ತಿಗೆಗಳನ್ನು ತಿಕ್ಕುವುದರಿಂದ ಮತ್ತು ಕೈಕಾಲುಗಳನ್ನು ಸ್ವಲ್ಪ ಸ್ವಲ್ಪವೇ ಆಡಿಸುವುದರಿಂದ ಈ ರೀತಿ ಒದ್ದಾಟ ಇರುವುದಿಲ್ಲ ಮತ್ತು ಇದು ಅವುಗಳ ಬೆಳವಣಿಗೆಗೂ ಅತಿ ಉತ್ತಮ ಎಂದು ಫೀಲ್ಡ್ ಕಂಡುಕೊಂಡಿದ್ದಾರೆ.

ಫೀಲ್ಡ್ ಅವರ ಈ ಮಾರ್ಪಾಡಿಗೆ ಡ್ಯೂಕ್ ವಿಶ್ವವಿದ್ಯಾಲಯದ ಡಾ. ಸಾಲ್‌ಷಾನ್‌ಬರ್ಗ್ ಅವರ ಸಂಶೋಧನೆಯೇ ಕಾರಣ. ಇವರು ಈ ದಿಶೆಯಲ್ಲಿ ವಿವಿಧ ಸಸ್ತನಿಗಳ ಮೇಲೆ ಅನೇಕ ಪ್ರಯೋಗಗಳನ್ನು ಮಾಡಿದ್ದಾರೆ. ಡಾ. ಬರ್ಗ್ ಇಲಿಗಳಲ್ಲಿ ಮಾಡಿದ ಪ್ರಯೋಗಗಳಲ್ಲಿ - ತಾಯಿ ಇಲಿಯ ಯಾವುದೋ ಒಂದು ರೀತಿಯ 'ಸ್ಪರ್ಶ' ಮರಿ ಇಲಿಯಲ್ಲಿ 'ಬೀಟಾ ಎಂಡಾರ್ಫಿನ್' ಎಂಬ ರಾಸಾಯನಿಕ ವಸ್ತುವಿನ ಉತ್ಪಾದನೆಯನ್ನು ಕಡಿಮೆ ಮಾಡಿತು. ಈ ರಾಸಾಯನಿಕವು ದೇಹದಲ್ಲಿನ ಇನ್ಸುಲಿನ್ ಮತ್ತು ಬೆಳವಣಿಗೆಯ ಹಾರ್ಮೋನುಗಳ ಮಟ್ಟವನ್ನು ಕಾಯ್ದುಕೊಳ್ಳಲು ಅವಶ್ಯಕವಾದುದು. ಮರಿ ಇಲಿಗಳನ್ನು, ತಾಯಿ ಇಲಿಯಿಂದ ಬೇರ್ಪ

ಡಿಸಿದ್ದಾಗ ಬೀಟಾ ಎಂಡಾರ್ಫಿನ್ ಜಾಸ್ತಿಯಾಗಿ, ಬೆಳವಣಿಗೆ ಕುಂಠಿತಗೊಳ್ಳತೊಡಗಿತು. ಹಾಗಾಗಿ ಇಲಿಗಳಲ್ಲಿ ಕಂಡುಬಂದ ಈ ಬದಲಾವಣೆಗಳು ಮನುಷ್ಯರಲ್ಲಿಯೂ ಕಂಡು ಬರುತ್ತವೆ ಎಂದು ಡಾ. ಷಾನ್‌ಬರ್ಗ್ ಅಭಿಪ್ರಾಯಪಡುತ್ತಾರೆ. ಏಕೆಂದರೆ ಮೂಲಭೂತವಾಗಿ ನರಮಂಡಲ ವ್ಯವಸ್ಥೆ ಸ್ಪರ್ಶ ವ್ಯವಸ್ಥೆಗಳಲ್ಲಿ ಇಲಿಗಳಿಗೂ ಮನುಷ್ಯರಿಗೂ ಸಾಮ್ಯವಿದೆ. ಡಾ. ಷಾನ್‌ಬರ್ಗ್‌ರ ಪ್ರಕಾರ- ಸ್ಪರ್ಶ ವ್ಯವಸ್ಥೆ ಎಲ್ಲಾ ಸಸ್ತನಿಗಳಲ್ಲಿಯೂ ಕಂಡು ಬರುವ ಮೂಲಭೂತ ರಕ್ಷಣಾ ವ್ಯವಸ್ಥೆಯ ಅಂಗವಾಗಿದೆ. ಏಕೆಂದರೆ ಸಸ್ತನಿಗಳು ಮೊದಮೊದಲು ಬದುಕಲು ತಾಯಿಯ ಆಶ್ರಯವನ್ನು ಬಹಳವಾಗಿ ಬಯಸುತ್ತವೆ. ಈ ಆಶ್ರಯವನ್ನು ದೀರ್ಘಕಾಲ ತಪ್ಪಿಸಿದರೆ ಅವುಗಳ ಬೆಳವಣಿಗೆ ಕುಂಠಿತಗೊಳ್ಳುವುದು ಸಾಮಾನ್ಯ.

ಇದೇ ರೀತಿಯ ಮತ್ತೊಂದು ಪ್ರಯೋಗದಲ್ಲಿ ಸ್ಟಾನ್‌ಫರ್ಡ್ ವಿಶ್ವವಿದ್ಯಾನಿಲಯದ ಮನಃಶಾಸ್ತ್ರಜ್ಞ ಡಾ. ಸೇಮರ್ ಲಿವಿನ್ ಕಂಡುಕೊಂಡ ಮತ್ತೊಂದು ಅಂಶ ಎಂದರೆ ಮಗುವಿಗೆ ಅಸಾಮಾನ್ಯ ಒತ್ತಡದ ಸಂದರ್ಭದಲ್ಲಿ ಬಿಡುಗಡೆಯಾಗುವ ಹಾರ್ಮೋನುಗಳ ಪ್ರಮಾಣವನ್ನು ಕಡಿಮೆ ಮಾಡಲು ತಾಯಿಯ ಭೌತಿಕ ಸಂಪರ್ಕ ತೀರ ಅವಶ್ಯಕ. ಮರಿ ಇಲಿಗಳು ಮತ್ತು ಮರಿ ಕೋತಿಗಳು ತಮ್ಮ ತಾಯಂದಿರಿಂದ ಬೇರ್ಪಟ್ಟಾಗ ಪಿಟ್ಯುಯಿಟರಿ-ಆಡ್ರಿನಲ್ ವ್ಯವಸ್ಥೆಯ ಚಟುವಟಿಕೆ ಹೆಚ್ಚುತ್ತದೆ. ಇದೇ ರೀತಿಯ ಪರಿಣಾಮ ಒತ್ತಡದ ಸಂದರ್ಭದಲ್ಲಿ ಮನುಷ್ಯರಲ್ಲಿಯೂ ಕಂಡುಬರುತ್ತದೆ.

ಶಿಶುವಿನ ದೇಹದ ವಿವಿಧ ಭಾಗಗಳು 'ಸ್ಪರ್ಶ'ಕ್ಕೆ ವಿವಿಧ ರೀತಿಯ ಪರಿಣಾಮವನ್ನು ತೋರಿಸುತ್ತವೆ. ಮಗುವನ್ನು ಸುಮ್ಮನಿರಿಸಲು ತಂದೆ ಅಥವಾ ತಾಯಿ ನಿಧಾನವಾಗಿ ಬೆನ್ನನ್ನು ತಿಕ್ಕಿದರೆ ಮಗು ಸಮಾಧಾನಗೊಳ್ಳುತ್ತದೆ. ಅದೇ, ಮಗುವಿಗೆ ಮುಖದ ಮೇಲೆ, ಹೊಟ್ಟೆಯ ಮೇಲೆ ಅಥವಾ ಪಾದಕ್ಕೆ ಹೊಡೆದರೆ ಅದು ಇನ್ನೂ ಹಟಮಾಡುತ್ತದೆ. ಜಗತ್ತಿನ ಹೆಚ್ಚಿನ ಭಾಗಗಳಲ್ಲಿ ಈ ರೀತಿ ಮಗುವನ್ನು ಮೃದುವಾಗಿ ಮೈದಡವುತ್ತಾರೆ. ಆದರೆ ಮುಂದುವರಿದ ಪಾಶ್ಚಾತ್ಯ ದೇಶಗಳಲ್ಲಿಯೇ ಈ ಅಭ್ಯಾಸ ಬಹಳ ಕಡಿಮೆ ಎಂದು ಡಾ. ಫೀಲ್ಡ್ ಅಭಿಪ್ರಾಯಪಡುತ್ತಾರೆ.

ಮಕ್ಕಳು ತಮ್ಮ ಅವಶ್ಯಕತೆಯನ್ನು ಪೂರೈಸಿಕೊಳ್ಳಲು ಜೋರಾಗಿ ಅಳುತ್ತವೆ. ಆದರೆ ತಮ್ಮ ಸಂವೇದನೆಗಳನ್ನು ಮತ್ತು ಅವಶ್ಯಕತೆಗಳನ್ನು ಚಲನೆಯ ಮೂಲಕ ವ್ಯಕ್ತಪಡಿಸುತ್ತವೆ ಎಂದು ತಜ್ಞರು ಅಭಿಪ್ರಾಯ ಪಡುತ್ತಾರೆ. ತಾಯಿ ಹೆಚ್ಚು ಹೊತ್ತು ಮಗುವನ್ನು ಎತ್ತಿಕೊಂಡಷ್ಟೂ ಅವಳಿಗೆ ಅದರ ಅಗತ್ಯತೆಯ ಬಗ್ಗೆ ಮನವರಿಕೆಯಾಗುತ್ತದೆ. ಇಂಥ ಮಕ್ಕಳೇ ಉತ್ಕೃಷ್ಟ ಬೆಳವಣಿಗೆ ಹೊಂದುತ್ತವೆ.

ಬೆಚ್ಚಗಿನ ಸ್ಪರ್ಶ ಯಾವುದೇ ಒಂದು ರೀತಿಯ ಪ್ರೀತಿಯ ಕುರುಹು ಎಂದು ಮಾನ್ಯ ಮಾಡಲ್ಪಟ್ಟಿದ್ದರೂ, ಇದರ ಮಹತ್ವ ಅದಕ್ಕಿಂತ ಇನ್ನೂ ಹೆಚ್ಚು ಎಂದು ಈಗ ಗೊತ್ತಾಗಿದೆ. ಮಾನಸಿಕ ಬೆಳವಣಿಗೆಯಲ್ಲೂ ಇದು ಮಹತ್ತರ ಪಾತ್ರ ವಹಿಸುತ್ತದೆ. ಉದಾಹರಣೆಗೆ ಮಗುವಿಗೆ ಹೆದರಿಕೆಯಾದಾಗ ಸುಮ್ಮನಿರಿಸಲು, ಅದಕ್ಕೆ ಯಾರಲ್ಲಿ ಹೆಚ್ಚು ವಿಶ್ವಾಸವಿದೆಯೋ ಅವರು ಅದನ್ನು ಗಟ್ಟಿಯಾಗಿ ಅವುಚಿಕೊಂಡರೆ ಅಥವಾ ಅಪ್ಪಿಕೊಂಡರೆ ಅದಕ್ಕೆ ಒಂದು ರೀತಿಯ ಸುರಕ್ಷತೆ ಉಂಟಾಗುತ್ತದೆ.

ಇನ್ನೊಂದು ಅಂಶವೆಂದರೆ ಹೀಗೆ ಹೆಚ್ಚು ಸ್ಪರ್ಶದ ಅನುಭವಹೊಂದಿದ ಮಕ್ಕಳ ಮಿದುಳಿನಲ್ಲಿ ಸರಿಯಾಗಿ ಬೆಳೆದ ನರಜೀವಕೋಶಗಳಿವೆ. ಈ ರೀತಿ ಸ್ಪರ್ಶದ ಕಡಿಮೆ ಅನುಭವವನ್ನು ಹೊಂದಿರುವ ಮಕ್ಕಳ ಮಿದುಳಿನಲ್ಲಿ ನರ-ಜೀವಕೋಶಗಳ ಪ್ರಮಾಣವು ಕಡಿಮೆ. ಬೆಳವಣಿಗೆಯೂ ಕುಂಠಿತ.

ಈ ಎಲ್ಲಾ ಸಂಶೋಧನೆ, ಅಧ್ಯಯನದ ನಂತರ ಮಕ್ಕಳನ್ನು ಬೆಳೆಸುವ ಭಾರತೀಯ ಪದ್ಧತಿಗೆ ಹೆಚ್ಚು ಮಹತ್ವ ಬರುತ್ತಿದೆ.



ಮಗು ಮನಸ್ಸು

# ಮಕ್ಕಳ 'ಸ್ವಗತ ಸಂಭಾಷಣೆ': ಕಾರಣವೇನು?

• ಗೋವಾ

## ಅದು ದೋಷವಲ್ಲ ಎನ್ನುತ್ತಾರೆ ಶಿಶುಮಾನಸತಜ್ಞರು

"ಇಲ್ನೋಡ್ ಬಾರೆ.... ಪುಟ್ಟೂ ಹ್ಯಾಗೆ ಒಬ್ನೇ ಏನೇನೋ ಮಾತಾಡಿಕೊಳ್ತಾ ಆಟಾ ಆಡ್ತಿದಾನೆ...." ಗಂಡ ಪಿಸುದನಿಯಲ್ಲಿ ಹೆಂಡತಿಯನ್ನು ಕರೆಯುತ್ತಾನೆ. ಆಕೆ ಸಡಗರದಿಂದ ಬಂದು ನಿಂತಾಗ 'ಬಾಯಿಬಿಟ್ಟುಗಿಟ್ಟೀಯೆ' ಎಂಬಂತೆ ಸನ್ನೆ ಮಾಡುತ್ತಾನೆ. ಒಂದೆರಡು ನಿಮಿಷ ಅವರು ಮಗನ ಆಟವನ್ನು ಕಂಡು, ಹಾಗೇ ಸದ್ದಾಗದಂತೆ, ಆತನ ಆಟಕ್ಕೆ ಭಂಗಬರದಂತೆ ಹಿಂದೆ ಸರಿಯುತ್ತಾರೆ.

ಆದರೆ ಇನ್ನು ಕೆಲ ತಂದೆ ತಾಯಂದಿರಿರುತ್ತಾರೆ. ಅವರಿಗೆ ತಮ್ಮ ಹತ್ತರೊಳಗಿನ ಮಗ ಅಥವಾ ಮಗಳು ಆಟವಾಡಿಕೊಳ್ಳುತ್ತ ಮಾತಾಡಿಕೊಳ್ಳುತ್ತಿದ್ದರೆ ಏನೋ ಒಂದು ರೀತಿ ಭಯ. ಮಗ(ಳಗೆ)ನಿಗೆ ಏನೋ ಆಗಿದೆ, ಡಾಕ್ಟರಿಗೆ ತೋರಿಸಬೇಕು ಅಂದ್ಕೊಂಡು ಒದ್ದಾಡುವವರು ಕೆಲವರಾದರೆ ಸುಮ್ಮನೆ ಚಿಂತೆ ಹಚ್ಚಿಕೊಂಡು ಕೊರಗುವವರು ಕೆಲವರು.

ಮಗುವಿನ 'ಸ್ವಗತ ಸಂಭಾಷಣೆ'ಯನ್ನು ತಪ್ಪಾಗಿ ಭಾವಿಸುವವರೇ ಜಾಸ್ತಿ. "ಅದೊಂದು ಕೆಟ್ಟ ಚಟ," "ಇದೇ ರೂಢಿ ಬೆಳೆದ ಮೇಲೂ ಉಳುದ್ರೆ?" "ನಾಲ್ಕು ಮಂದಿ ಬಂದಾಗ ಈ ಹುಡುಗ ಹೀಗೆ ತನ್ನಷ್ಟಕ್ಕೆ ತಾನು ಮಾತಾಡಿಕೊಳ್ತಿದ್ರೆ ಬಂದವರು ಏನಂದುಕೊಂಡಾರು?" ಎಂಬಿವೇ ಹತ್ತಾರು ಅಭಿಪ್ರಾಯಗಳು, ಪ್ರತಿಕ್ರಿಯೆಗಳು ಈ ವಿಷಯದಲ್ಲಿ ಕೇಳಿಬರುತ್ತವೆ.

ಬಹುತೇಕ ಹತ್ತುವರ್ಷದವರೆಗಿನ ಎಲ್ಲ ಮಕ್ಕಳೂ ಈ ರೀತಿ 'ಸ್ವಗತ ಸಂಭಾಷಣೆ' ನಡೆಸುತ್ತಲೇ ಇರುತ್ತವೆ. ಆ ಪೈಕಿ ತಂದೆ-ತಾಯಿಯರ ಕಿವಿಗೆ ಬೀಳುವುದು ಶೇಕಡಾ ಇಪ್ಪತ್ತರಿಂದ ಮೂವತ್ತರಷ್ಟು ಮಾತ್ರ. ಕೆಲವು ಮಕ್ಕಳಂತೂ ಇತರರೆದುರು ಬಾಯಿ ತೆರೆಯಲೂ ಹಿಂದೇಟು ಹಾಕುವುದುಂಟು. ಇನ್ನು ಕೆಲ ಮಕ್ಕಳು ಇತರರು ಮಾತಾಡಿಸಿದಾಗ ಒಂದೋ ಎರಡೋ ಪದಗಳನ್ನು ಮಾತ್ರ ಉದುರಿಸಿ ನಾಚಿಕೊಂಡು ನಿಲ್ಲುತ್ತವೆ. ಇಂಥ ಮಕ್ಕಳನ್ನು ಅವರು ಏಕಾಂತದಲ್ಲಿದ್ದಾಗ ಎಂದಾದರೂ ಗಮನಿಸಿದ್ದೀರಾ? ಅಬ್ಬಾ, ಅವನಂಥ ಮಾತುಗಾರನೇ ನಿಮಗೆ ಬೇರೆಲ್ಲೂ ಸಿಕ್ಕಲಾರನೇನೋ ಎಂಬಷ್ಟು ವಾಚಾಳಿತನವನ್ನು ಅಲ್ಲಿ ಮಗು ಪ್ರದರ್ಶಿಸುತ್ತಿರುತ್ತದೆ. ಗೊಂಬೆಯೊಡನೆ ಆಡುವಾಗ ತಾನು ಅಪ್ಪನಾಗಿ-ಅಮ್ಮನಾಗಿ, ಕೊನೆಗೆ ನರ್ಸರಿ ಸ್ಕೂಲಿನ ಮೇಡಂ ಆಗಿ ಕೂಡ ಮಗು ಪಾತ್ರ ನಿರ್ವಹಿಸುತ್ತದೆ.

ಈ ತಂತಾನೇ ಮಾತಾಡಿಕೊಳ್ಳುವಿಕೆಯನ್ನು ಅಪಾರ್ಥಮಾಡಿಕೊಳ್ಳಬೇಕಾದ ಕಾರಣವೇನಿಲ್ಲ. ಇದು ಮಕ್ಕಳ ಜ್ಞಾನ ಪರಿಧಿ ವಿಸ್ತರಿಸುವುದಕ್ಕೆ ಪೂರಕವಾದ ನಡವಳಿಕೆ. ಅಷ್ಟೇ ಅಲ್ಲ, ಇದೊಂದು ಆತ್ಯಂತಿಕ ಅವಶ್ಯಕತೆ ಕೂಡ. ಅದು ಮಗುವಿನ ಪದಸಂಪತ್ತಿಯನ್ನು ಬೆಳೆಸುತ್ತದೆ, ತತ್ಕಾಲೀನ ಸಂಬಂಧಗಳ ಕುರಿತು ಹೆಚ್ಚಿನ ಮಾಹಿತಿಯನ್ನು ಮಗುವಿಗೆ ನೀಡುತ್ತದೆ, ಕೆಲವು ಸಂಶಯಗಳನ್ನೂ ಮಗುವಿನಲ್ಲಿ ಹುಟ್ಟಿಸುತ್ತದೆ ಮತ್ತು ಆ ಸಂಶಯಗಳಿಗೆ ಸದಾಕಾಲವೂ ಲಭ್ಯವಾಗುವ ಅಮ್ಮನಿಂದ ಉತ್ತರ ಪಡೆಯಲೆತ್ನಿಸುತ್ತದೆ. ಮಗು ಕೇಳುವ ಪ್ರಶ್ನೆಗೆ ಉತ್ತರ ಹೇಳಿ ಹೇಳಿ ಸಾಕಾಗಿ ಹೋದ ತಾಯಂದಿರೆಷ್ಟಿಲ್ಲ? ಗೊತ್ತಿಲ್ಲದುದನ್ನು "ಗೊತ್ತಿಲ್ಲ" ಅಂತ ಹೇಳಿದರೆ ಮಗು ಏನು ತಿಳಿದುಕೊಳ್ಳುತ್ತದೋ ಎಂದು ಏನೋ ಒಂದನ್ನು ಹೇಳಿಬಿಡುವ ತಾಯಂದಿರೂ ಇದ್ದಾರೆ. ಆದರೆ ಇದು ಸರಿಯಲ್ಲ. ತಪ್ಪು ಕಲ್ಪನೆಯನ್ನು ಮಗುವಿನಲ್ಲಿ ಬೆಳೆಯಿಸಲು ಅದು ಕಾರಣವಾಗುತ್ತದೆ.

ಲೆವ್ ವಿಗೋಟ್‌ಸ್ಕಿ ಎಂಬ ರಶಿಯನ್ ಮನಃಶಾಸ್ತ್ರಜ್ಞ ಮಕ್ಕಳ ಸ್ವಗತ ಸಂಭಾಷಣೆಯ ಕುರಿತು ಸಾಕಷ್ಟು ಕಾಲ ಅಧ್ಯಯನ ನಡೆಸಿದ. ೧೯೩೦ರಲ್ಲಿ ಇಂಥ ನಡವಳಿಕೆಯ ಮಹತ್ವವನ್ನು ಆತ ಕಂಡುಕೊಂಡು ಅದನ್ನು ಪ್ರಕಟಿಸಿದ. ಆದರೆ ಆ ಕಾಲದ ರಶಿಯದ ರಾಜಕೀಯ ಗೊಂದಲದ ನಡುವೆ ಆತನ ಈ ಮೂಲಗಾಮಿ ವಿಚಾರಗಳು ಜಗತ್ತಿನೆದುರು ಬಾರದೇ ಉಳಿದವು. ಆತನ ಮಿತ್ರರೂ ವಿದ್ಯಾರ್ಥಿಗಳೂ ವಿಗೋಟ್‌ಸ್ಕಿಯ ವಿಚಾರಗಳನ್ನು ಲೇವಡಿ ಮಾಡಿದರು. ಬರಬರುತ್ತ ಅವರು ಆತನಿಂದ ದೂರವೂ ಸರಿದರು. ಹೀಗೆ ದೂರ ಸರಿದವರು ವಿಗೋಟ್‌ಸ್ಕಿಯ ವಿರುದ್ಧ ಪ್ರಚಾರ ನಡೆಸತೊಡಗಿದರು. ಆದರೆ ೧೯೩೪ರವರೆಗೆ ಅವರಿಗೆಲ್ಲ ತಕ್ಕ ಉತ್ತರ ನೀಡಲು ಶ್ರಮಿಸಿದ ವಿಗೋಟ್‌ಸ್ಕಿ ತನ್ನ ವಿಚಾರಗಳನ್ನೆಲ್ಲ ಒಂದೆಡೆ ಸಂಕಲಿಸಿ ಗ್ರಂಥ ರೂಪದಲ್ಲಿ ಪ್ರಕಟಿಸಲು ಪ್ರಾರಂಭಿಸಿದ ಹೊತ್ತಿನಲ್ಲೇ ಆತನಿಗೆ ಕ್ಷಯ ಗಂಟುಬಿತ್ತು. ಆತ ಅದರಲ್ಲೇ ಕಣ್ಣುಮುಚ್ಚಬೇಕಾಗಿಬಂತು. ಅಷ್ಟಲ್ಲದೆ ಅಂದಿನ ಸರಕಾರ ಆತನ ಗ್ರಂಥ ಪ್ರಕಟಣೆಯ ಮೇಲೆ ನಿಷೇಧವನ್ನೂ ಹೇರಿತು. ಆತನ ನಿಧನಾನಂತರವೂ ವಿಗೋಟ್‌ಸ್ಕಿಯ ವಿರೋಧಿಗಳು "ಮಕ್ಕಳು ಸ್ವತಃ ಮಾತಾಡಿಕೊಳ್ಳುವುದೇನೂ ಅಂಥ ಮಹತ್ವದ ವಿಷಯವಲ್ಲ; ಅದು ಸಂವಾದವೇ ಅಲ್ಲ; ಬೆಳೆಯುತ್ತ ಹೋದಂತೆ ಅವರಲ್ಲಿನ ಈ ಚಟ ತಂತಾನೇ ನಶಿಸುತ್ತದೆ" ಎಂದೆಲ್ಲ ಹೇಳಿಕೊಳ್ಳುತ್ತಲೇ ನಡೆದರು.

ಆದರೆ ವಿಗೋಟ್‌ಸ್ಕಿಯ ವಿಚಾರಗಳು ಪ್ರಚಾರಕ್ಕೆ ಬರಲು ಮುಂದೆ ಕಾಲು ಶತಮಾನವೇ ಬೇಕಾಯಿತು. ೧೯೬೨ರಲ್ಲಿ ಮೊದಲ ಬಾರಿಗೆ ಇಂಗ್ಲೀಷಿನಲ್ಲಿ ವಿಗೋಟ್‌ಸ್ಕಿಯ ಸಂಶೋಧನಾ ಪ್ರಬಂಧ ಪ್ರಕಟವಾಯಿತು. ಜಗತ್ತಿನ ಬೇರೆ ಬೇರೆಡೆಯ 'ಮಗುಮನಸ್ತತ್ವ ತಜ್ಞರು' ಈ ಪ್ರಬಂಧದಿಂದ ಪ್ರಭಾವಿತರಾಗಿ ಅಧ್ಯಯನಶೀಲರಾದರು. ಕಳೆದ ಮೂವತ್ತು ವರ್ಷಗಳ ಅವಧಿಯಲ್ಲಿ ಹಾರ್ವರ್ಡ್ ವಿಶ್ವವಿದ್ಯಾಲಯದ ಲಾರೆನ್ಸ್ ಕೋಹಲ್‌ಬರ್ಗ್, ಸ್ಟಾನ್‌ಫೋರ್ಡ್ ವಿಶ್ವವಿದ್ಯಾಲಯದ ರಾಫೆಲ್ ಡಯಾಝ್ ಹಾಗೂ ಇಲಿನಾಯ ಸ್ಟೇಟ್ ಯುನಿವರ್ಸಿಟಿಯ ಲಾರಾ ಬರ್ಕ್ ಮುಂತಾದವರು ವಿಗೋಟ್‌ಸ್ಕಿಯ ವಿಚಾರಗಳ ಬೆಳಕಿನಲ್ಲಿ ಸಾಗಿ ಸಂಶೋಧನೆ ಮುಂದುವರಿಸಿ ಮಕ್ಕಳ ಮಾನಸಲೋಕದ ಕುರಿತು ಹೊಸ ಅರ್ಥವನ್ನೇ ಹುಡುಕಿಕೊಟ್ಟರು.

ವಿಗೋಟ್‌ಸ್ಕಿಯ ವಿಚಾರಗಳ ಮುಖ್ಯಾಂಶಗಳು ಇವು:

"ಸಾಮಾಜಿಕ ಅನುಭವ ಮತ್ತು ಮಾತು-ಕಲಿಕೆ ಇವುಗಳಲ್ಲಿ ಒಂದು ಗಟ್ಟಿಯಾದ ಸಂಬಂಧವಿದೆ. ಸಣ್ಣ ಮಕ್ಕಳಿಗೆ ನಿತ್ಯವೂ ಹೊಸದಾಗಿ ತೆರೆದುಕೊಳ್ಳುವ ಜಗತ್ತಿನಲ್ಲಿ ಅನೇಕ ರೀತಿಯ ಅಂಶಗಳು ಗಮನ ಸೆಳೆಯುತ್ತವೆ. ಅವುಗಳಲ್ಲಿ ವಿಶಿಷ್ಟವಾದ ಕೆಲ ಅಂಶಗಳ ಕುರಿತು ಮಾತ್ರ ಅರಿತುಕೊಳ್ಳಲು ಮಕ್ಕಳು ಯತ್ನಿಸುತ್ತವೆ. ಮಕ್ಕಳ ವಯೋಮಾನಕ್ಕನುಗುಣವಾಗಿ ಜ್ಞಾನಕಕ್ಷೆ ಸೀಮಿತಗೊಂಡಿರುತ್ತದೆ. ಅದಕ್ಕೆ ಮೀರಿದ ಅಂಶಗಳ ಬಗ್ಗೆ ತಂದೆ-ತಾಯಿ-ಗುರು-ಹಿರಿಯರ ಮಾರ್ಗದರ್ಶನ

ಅವಕ್ಕೆ ಅವಶ್ಯ, ಅಗತ್ಯ. ಈ ಮಾರ್ಗದರ್ಶನ ರೂಪದಲ್ಲಿ ಅವುಗಳ ಮನಸ್ಸಿನ ಮೇಲೆ ಪಡಿಮೂಡಿಸಲ್ಪಟ್ಟ ಅಂಶಗಳೇ ಮಗುವಿನ 'ಸ್ವಗತ ಸಂಭಾಷಣೆ'ಯಲ್ಲಿ ವ್ಯಕ್ತವಾಗುವುದುಂಟು. ಇದಕ್ಕೆ ಕಾಲ ಮಿತಿಯೇನೂ ಇಲ್ಲ, ಇಂದು ಗೊತ್ತಾದ ಸಂಗತಿ ಮುಂದೆಂದೋ ಒಂದು ದಿನ ಮಗುವಿನ 'ಸ್ವಗತ ಸಂವಾದ'ವಾಗಿ ಹೊರಬರಲೂಬಹುದು.

"ಮಗುವಿನ ಬೌದ್ಧಿಕ ಬೆಳವಣಿಗೆಯ ಅತ್ಯಂತ ಅರ್ಥಪೂರ್ಣ ಕ್ಷಣವೂ ಒಂದಿದೆ. ಶಬ್ದ ಮತ್ತು ಕೃತಿಯಲ್ಲಿ ಏಕತೆ ಕಂಡುಬರುವ ಕ್ಷಣ ಅದು. ಅದಕ್ಕೂ ಮುನ್ನ ಅವೆರಡರಲ್ಲೂ ಒಂದು ಅಸಂಬದ್ಧತೆ ಎದ್ದು ಕಾಣುತ್ತಿರುತ್ತದೆ. ಮಾತು ಮತ್ತು ಕೃತಿಯಲ್ಲಿ ಈ ಏಕತೆಯ ಅನುಭವವಾಗತೊಡಗಿದಾಗ ಮಗುವಿನ ಮುಖ ಇನ್ನಷ್ಟು ಅರಳತೊಡಗುತ್ತದೆ. ಅಥವಾ ಒಂದು ಶಾಬ್ದಿಕ ಉದಾಹರಣೆಯು ಭೌತಿಕವಾಗಿ ಇಲ್ಲವೆ ಪ್ರತ್ಯಕ್ಷವಾಗಿ ಗೋಚರಿಸಿದಾಗ ಮಗು ತನಗೆ ಅರಿವಿಲ್ಲದಂತೆ ಕೇಕೆ ಹಾಕಲೂ ಬಹುದು.

"ಈ 'ಸ್ವಗತ ಸಂಭಾಷಣೆ'ಯಲ್ಲೂ ಅನೇಕ ವಿಧಗಳಿವೆ. ಏಕಾಂತದಲ್ಲಿದ್ದಾಗಿನವಷ್ಟೇ ನಮ್ಮ ಗಮನಕ್ಕೆ ಬಂದಿರುವುದು. ಆದರೆ ಎಲ್ಲರೊಂದಿಗೆ ಮನೆಯಲ್ಲಿದ್ದಾಗ ಆಗಲಿ, ಸ್ಕೂಲಲ್ಲಿ ಗೆಳೆಯರೊಂದಿಗೆ ಇದ್ದಾಗ ಆಗಲಿ, ಮಗು 'ಸ್ವಗತ ಸಂಭಾಷಣೆ' ನಡೆಸುವುದೂ ಇದೆ. ಒಳಗೆ ಆತ ಏನೇನೋ ವಿಚಾರ ನಡೆಸಿರುತ್ತಾನೆ. ಆದರೆ ಒಮ್ಮೊಮ್ಮೆ ಆ ವಿಚಾರಕ್ಕೆ ಸಂಬಂಧಿಸಿದ ಒಂದೇ ಒಂದು ಶಬ್ದ ಅಥವಾ ಎರಡೇ ಶಬ್ದಗಳ ವಾಕ್ಯ ಬಾಯಿಂದ ಹೊರಬೀಳುತ್ತದೆ. ಈ ವಾಕ್ಯದ ಅರ್ಥ ಜತೆಯಲ್ಲಿದ್ದವರಿಗೆ ಆಗುವುದೇ ಇಲ್ಲ. ಉದಾಹರಣೆಗೆ: 'ಅದು ಒಡೆಯಿತು' ಎಂಬ ಎರಡು ಪದಗಳ ವಾಕ್ಯ. ಜತೆಯಲ್ಲಿದ್ದವರಿಗೆ 'ಏನು ಒಡೆಯಿತು? ಎಲ್ಲಿ ಒಡೆಯಿತು? ಹೇಗೆ ಒಡೆಯಿತು?' ಎಂಬ ಜಿಜ್ಞಾಸೆ. ಹಾಗೆಂದು ಕೇಳಿದರೆ ಈ ಹುಡುಗ ತಲೆ ಅಲ್ಲಾಡಿಸಿ, 'ಊಹುಂ, ಏನೂ ಇಲ್ಲ' ಎಂದು ಬಿಟ್ಟಾನು. ಇಲ್ಲವೆ ಸುಮ್ಮನೆ ನಕ್ಕು ದೂರ ಸರಿದು ಬಿಟ್ಟಾನು. ಇನ್ನೊಂದು ರೀತಿಯ ಸ್ವಗತ ಸಂಭಾಷಣೆ ಭೀತಿಮೂಲವಾದದ್ದು. ಒಬ್ಬನೇ ಕುಳಿತು 'ಮಮ್ಮೀಗೂ-ಡ್ಯಾಡೀಗೂ ಜಗಳ ಶುರು ಆಯ್ತು....' ಎಂದು ಯಾವನಾದರೂ ಅಪರಿಚಿತ ಹುಡುಗ ಹೇಳಿದ್ದು ನಿಮ್ಮ ಕಿವಿಗೆ ಬಿದ್ದರೆ ಆತನ ಮನೆಯ ಸ್ಥಿತಿ ನಿಮಗೆ ಅರಿವಿಗೆ ಬಂದು ಬಿಡುತ್ತದೆ. ಹಾಗೆಂದು ಅತಿಕುತೂಹಲಿಯಾಗಿ 'ಯಾವಾಗ? ದಿನವೂ ಜಗಳವಾಗುತ್ತಾ?' ಅಂತ ಕೇಳಿದಿರೋ ಆ ಹುಡುಗ ನಿಮ್ಮನ್ನೊಮ್ಮೆ ವಿಚಿತ್ರವಾಗಿ ನೋಡಿ ಅಲ್ಲಿಂದೆದ್ದು ಹೋಗಿಬಿಡುತ್ತಾನೆ. ಇಲ್ಲಿ ಮಗುವಿಗೆ ಒಂದು ರೀತಿ ಅನಾಥ ಪ್ರಜ್ಞೆ ಕಾಡುತ್ತಿರುವುದು ಸ್ಪಷ್ಟವೆ. ಹೀಗೆಯೇ ಅಭ್ಯಾಸ ಕ್ಲಿಷ್ಟವೆನಿಸಿದರೆ, ಗೆಳೆಯ ಹೊಡೆದರೆ, ಮಾಸ್ತರು ಹೆದರಿಸಿದರೆ ಅವೆಲ್ಲ ಅನುಭವಗಳು ಮಗುವಿನ ಸ್ವಗತ ಸಂವಾದ ರೂಪ ತಳೆಯುತ್ತವೆ. ಇಲ್ಲವೆ ಯೋಚಿಸಿದ್ದು ಘಟಿಸಿದಾಗಲೂ ಇದ್ದಕ್ಕಿದ್ದಂತೆ 'ವಾಹ್' ಎಂಬಿವೇ ಮೊದಲಾದ ಮಾತುಗಳು ಜಿಗಿದು ಬರುತ್ತವೆ.

"ಇವೆಲ್ಲ ಅಂತರ್ಮನದ ವಿದ್ಯಮಾನಗಳ ಪ್ರತಿಬಿಂಬಗಳು. ಮಗುವಿನ (ಮಾನಸಿಕ ಮತ್ತು ದೈಹಿಕ) ಬೆಳವಣಿಗೆ ಸರಿಯಾಗಿ ಆಗಲು ಹೇಗೋ ಆಗದಿರಲು ಕೂಡ ಈ ಅಂತರ್ಮನದ ವಿದ್ಯಮಾನಗಳೇ ಕಾರಣ.

"ಏಕಾಗ್ರಚಿತ್ತ ಮತ್ತು ಅಭ್ಯಾಸಶೀಲತೆ ಇವುಗಳಷ್ಟೇ ಮಗುವಿನ 'ಸ್ವಗತ ಸಂಭಾಷಣೆ'ಯೂ ಮುಖ್ಯ ಪಾತ್ರವಾಡುತ್ತದೆ."

ಸಾಮಾಜಿಕ ಪರಿಸರದಲ್ಲಿ ಬೆರೆಯತೊಡಗಿದರೂ ಸಣ್ಣ ಮಕ್ಕಳಲ್ಲಿ 'ಸ್ವಗತ ಸಂವಾದ' ಮುಂದುವರಿದೇ ಇರುತ್ತದೆ. ಧಾಟಿ ಸ್ವಲ್ಪ ಬೇರೆಯಾಗಬಹುದು. ಅಷ್ಟೇ. ಮಾನವನಿಗೆ ಮಾತ್ರ ಸಾಧ್ಯವಿರುವ ಸ್ವಬೋಧೆಯ ಪ್ರಕ್ರಿಯೆ ಈ ಹಂತದಲ್ಲಿಯೇ ಶುರುವಾಗುವುದು. ಅಷ್ಟೇ ಅಲ್ಲ, ಪ್ರತಿಯೊಂದು ವಸ್ತು-ವಿಚಾರದ ಕುರಿತ ಹೊಸ ಅರ್ಥಗಾರಿಕೆ ಮಗುವಿಗೆ ಸಾಧಿಸತೊಡಗುತ್ತದೆ. ಕೃತಿಯಲ್ಲಿ ಸುಸಂಬದ್ಧತೆ ತೋರತೊಡಗುತ್ತದೆ. ತನ್ನ ಸಂಸ್ಕೃತಿಯ ಅರ್ಥವನ್ನು ಮಗು ಮಾಡಿಕೊಳ್ಳಲೆಳಸುವುದು ಈ ಘಟ್ಟದಲ್ಲಿಯೆ.



ಎಂಥೆಂಥಾ ಮೂತಿಗಳು!

ತಮ್ಮ ವರ್ತನೆಗಳ ಮೇಲೆ ಹತೋಟಿ ಸಾಧಿಸುತ್ತ ಹೋದಂತೆಲ್ಲ ಆ ಮಗುವಿನ ಮಾತಿನಲ್ಲಿ ಅನೇಕ ಬದಲಾವಣೆಗಳು ಗೋಚರಿಸತೊಡಗುತ್ತವೆ. ಪದಸಂಪತ್ತು ಹೆಚ್ಚತೊಡಗುತ್ತದೆ. ವಾಕ್ಯ ರಚನೆಯಲ್ಲಿ ಸರಿಯಾದ ಪದ ಬಳಕೆಯತ್ತ ಗಮನ ಹರಿಯಲಾರಂಭಿಸುತ್ತದೆ. ಹಾಂ, ಹೀಗೆ ಪದಗಳನ್ನು ವಾಕ್ಯಗಳ ರೂಪದಲ್ಲಿ ಪ್ರಕಟರೂಪವಾಗಿ ಬಳಸುವ ಮುನ್ನ ಹತ್ತಾರು ಸಾರಿ ಮನದೊಳಗೇ ಆ ವಾಕ್ಯವನ್ನು ಮಗು ಹೇಳಿಕೊಳ್ಳುತ್ತದೆ. ಆನಂತರ ತಂತಾನೆ-ತನಗೆ ಮಾತ್ರ ಕೇಳುವ ಹಾಗೆ ಹೇಳಿಕೊಳ್ಳುತ್ತದೆ. ಸರಿಯೆಂದೆನಿಸಿದ ಮೇಲೆ ಇತರರೆದುರು ಆ ವಾಕ್ಯವನ್ನು ಆಡುತ್ತದೆ. ಈ ಹಂತವನ್ನೂ ದಾಟಿ ನೇರವಾಗಿ ಇತರರೊಂದಿಗೆ ಸಂಭಾಷಿಸುವ ಸಾಮರ್ಥ್ಯ ಬಂದ ಮೇಲೆಯೂ ಈ 'ಸ್ವಗತ'ದ ರೂಢಿ ತಪ್ಪುವುದಿಲ್ಲ. ತಿಳಿಯದ ವಿಷಯದ ಕುರಿತು ಚಿಂತನೆ ಶುರುವಾಗುತ್ತದೆ. ಈ ಚಿಂತನೆ ಅಂತರ್ಮನದಲ್ಲೇ ನಡೆದಿದ್ದರೂ ಅದು ಶಬ್ದರೂಪದಲ್ಲಿ ವಾಕ್ಯ ರೂಪದಲ್ಲಿ 'ಸ್ವಗತ ಸಂಭಾಷಣೆ'ಯಾಗಿ ಹೊರಹೊಮ್ಮುತ್ತದೆ. ಅಡೆತಡೆಗಳನ್ನು ನಿವಾರಿಸಿ ಹೊಸದನ್ನು ಸಿದ್ಧಿಸಿಕೊಳ್ಳುವ ಕಲೆಯನ್ನು ಆತ್ಮಸಾತ್ ಮಾಡಿಕೊಳ್ಳುವುದಕ್ಕೆ ಈ ಹಂತದ 'ಸ್ವಗತ ಸಂಭಾಷಣೆ' ಸಾಧನವಾಗುತ್ತದೆ.

ಇಲಿನಾಯ್ ಸ್ಟೇಟ್ ಯುನಿವರ್ಸಿಟಿಯ ಲಾರಾ ಬರ್ಕ್ ತನ್ನ ಕೆಲವು ಶಾಲಾ ಮಕ್ಕಳನ್ನು 'ಅಭ್ಯಾಸವಸ್ತು'ವನ್ನಾಗಿ (Subject) ಮಾಡಿಕೊಂಡಳು. ಆದರೆ ಸ್ಟಾನ್‌ಫೋರ್ಡ್ ವಿಶ್ವವಿದ್ಯಾಲಯದ ರಾಫೆಲ್ ಡಯಾಝ್ ಪ್ರಯೋಗಶಾಲೆಗೇ ಮಕ್ಕಳನ್ನು ಕರೆಸಿಕೊಂಡ. ಕಳೆದ ಹದಿನೈದು ವರ್ಷಗಳಿಂದಲೂ ಈ ಇಬ್ಬರ ಅಧ್ಯಯನ ಮುಂದುವರಿದೇ ಇದೆ.

ಲಾರಾ 'ಅಭ್ಯಾಸವಸ್ತು'ವನ್ನಾಗಿ ಮಾಡಿಕೊಂಡ ಮಕ್ಕಳು ೫ ರಿಂದ ೧೦ ವರ್ಷಗಳ ವರೆಗಿನವರು. ಎಲ್ಲರೂ ಕೆಳ ಆದಾಯದ ಕುಟುಂಬಗಳವರು. ಅವರಿಗೆ ಅರಿವಾಗದಂತೆ ಅವರ 'ಏಕಾಂತ ವರ್ತನೆ' ಹಾಗೂ ಆ ಅವಧಿಯ ಸ್ವಗತ ಸಂಭಾಷಣೆಗಳನ್ನು ಲಾರಾ ಧ್ವನಿಮುದ್ರಿಸಿಕೊಳ್ಳುವ ವ್ಯವಸ್ಥೆ ಮಾಡಿದ್ದಳು. ಅಲ್ಲದೆ ವರ್ಗಗಳಲ್ಲಿನ ಅವರ ಮಾತು, ಆಟದ ಮೈದಾನದಲ್ಲಿನ ಪ್ರತಿಕ್ರಿಯಾತ್ಮಕ ಶಬ್ದಗಳು, ಊಟ ಮಾಡುವಾಗ-ಚರ್ಚಿಸುವಾಗ-ಮನರಂಜನಾ ಕಾರ್ಯಕ್ರಮಗಳಲ್ಲಿ ಭಾಗವಹಿಸುವಾಗಿನ ಮಾತುಗಳು ಹೀಗೆ ದಿನವಿಡೀ ಈ ಧ್ವನಿಮುದ್ರಣಕಾರ್ಯ ಸಾಗಿಯೇ ಇತ್ತು.

ಇದಕ್ಕೂ ಹತ್ತು ವರ್ಷ ಮೊದಲೇ ಹಾರ್ವರ್ಡ್ ವಿಶ್ವವಿದ್ಯಾಲಯದ ಲಾರೆನ್ಸ್ ಕೋಹಲ್‌ಬರ್ಗ್ ನಡೆಸಿದ ಅಧ್ಯಯನದಲ್ಲಿ "ದೊಡ್ಡವರಾಗುತ್ತ ನಡೆದಂತೆ ಮಕ್ಕಳ 'ಸ್ವಗತ ಸಂಭಾಷಣೆ'ಯ ಜಾಡು ಬದಲಾಗುತ್ತ ಹೋಗುತ್ತದೆ, ಮಧ್ಯಮವರ್ಗೀಯ ಮಕ್ಕಳು ೪ ರಿಂದ ೬ ವರ್ಷದವರಾಗುವವರೆಗೆ ಎಲ್ಲರೂ ಕೇಳುವಂತೆ ದೊಡ್ಡದಾಗಿಯೇ ಸ್ವಗತ ಸಂವಾದದಲ್ಲಿ ತೊಡಗಿರುತ್ತಾರೆ. ಶಾಲೆಗೆ ಹೋಗತೊಡಗಿದಂತೆ ಅವರ 'ಸ್ವಗತ'ದ ಧ್ವನಿಯಲ್ಲಿ ಇಳಿತವನ್ನು ಗುರುತಿಸಬಹುದು. ಬರಬರುತ್ತ ಅದು ಗೊಣಗುವಿಕೆಯ ರೂಪ ತಾಳುತ್ತದೆ. ಆದರೆ ಏಕಾಂತದಲ್ಲಿದ್ದಾಗ ಮಾತ್ರ ಸ್ಪಷ್ಟವಾಗೇ ಕೇಳುವಂತಿರುತ್ತದೆ," ಎಂಬ ಅಂಶವನ್ನು ಒತ್ತಿ ಹೇಳಿದ್ದ.

ಲಾರಾ ಅಧ್ಯಯನಕ್ಕೆ ಬಳಸಿಕೊಂಡ ಮಕ್ಕಳೆಲ್ಲ ಯಾವಾಗಲೂ ಮೆಲುದನಿಯಲ್ಲೇ 'ಸ್ವಗತ'ವಾಡುತ್ತಿದ್ದರು. ಕೋಹಲ್‌ಬರ್ಗ್ ಬಳಸಿಕೊಂಡ ಹುಡುಗರು ಮಧ್ಯಮವರ್ಗದವರು ಎಂಬುದೂ ಇಲ್ಲಿ ಗಮನಿಸಬೇಕಾದ ಸಂಗತಿ. ಅಂದರೆ ಆದಾಯ ಮತ್ತು ಸಾಮಾಜಿಕ ಸ್ಥಾನಮಾನಗಳಿಗೆ ಅನುಗುಣವಾಗಿ ಆಯಾ ವರ್ಗದ ಮಕ್ಕಳ ಏಕಾಂತ ವರ್ತನೆ ಮತ್ತು ಸ್ವಗತದಲ್ಲಿ ಭಿನ್ನತೆ ಕಂಡುಬರುತ್ತದೆ ಎಂಬುದು ಸ್ಪಷ್ಟವಾಗುತ್ತದೆ.

ಲಾರಾ ಬರ್ಕ್ ಅಧ್ಯಯನ ನಡೆಸುತ್ತಿದ್ದ ಹೊತ್ತಿನಲ್ಲೇ ಅತ್ತ ಸ್ಟಾನ್‌ಫೋರ್ಡ್ ವಿಶ್ವವಿದ್ಯಾಲಯದ ರಾಫೆಲ್ ಡಯಾಝ್ ತನ್ನ ಸಹಕಾರಿಗಳೊಂದಿಗೆ ಸ್ವಂತದ ಪ್ರಯೋಗಶಾಲೆಯಲ್ಲಿ ಮೂರರಿಂದ ಆರು ವರ್ಷದವರೆಗಿನ ೩೨ ಮಕ್ಕಳನ್ನು 'ಅಭ್ಯಾಸವಸ್ತು'ವಾಗಿಸಿಕೊಂಡಿದ್ದ. ಆತ ಕೂಡ ಅನುಸರಿಸಿದ್ದು ಹೆಚ್ಚು ಕಡಿಮೆ ಲಾರಾಳ ಮಾರ್ಗವನ್ನೇ.



ಆದರೆ ಒಂದು ವ್ಯತ್ಯಾಸವಿತ್ತು: ಅವರನ್ನೆಲ್ಲ ಪ್ರಯೋಗಶಾಲೆಯ ಒಳಾಂಗಣದಲ್ಲೇ ನಿರೀಕ್ಷಣೆಗಾಗಿ ಇಟ್ಟುಕೊಳ್ಳಲಾಗಿತ್ತು. "ವಯಸ್ಸು ಹೆಚ್ಚಿದಂತೆಲ್ಲ ಅವರ ಸ್ವಗತ ಗೊಣಗುಟ್ಟುವಿಕೆಯ ರೂಪಪಡೆಯುತ್ತದೆ" ಎಂಬುದು ರಾಫೆಲ್‌ನ ಪ್ರಯೋಗದಿಂದಲೂ ಸಿದ್ಧವಾಯಿತು.

ಈ ಅಧ್ಯಯನಗಳ ಸಂದರ್ಭದಲ್ಲಿ ಎಲ್ಲ ಮಕ್ಕಳಿಗೂ ಈ ಚಟ ಇರುವುದಿಲ್ಲ ಎಂಬ ಅಂಶ ಬೆಳಕಿಗೆ ಬಂತು. ವಿಗೋಟ್‌ಸ್ಕಿಯು ಅಭಿಪ್ರಾಯಪಟ್ಟಂತೆ ಒಂದು ವೇಳೆ ಈ 'ಸ್ವಗತ' ಆ ಮಕ್ಕಳಿಗೆ ಮಾರ್ಗದರ್ಶಿಯಾಗುವುದಾದರೆ ಹೆಚ್ಚು ವಟಗುಟ್ಟುವಂಥ ಹುಡುಗರು ಅತ್ಯಂತ ಯಶಸ್ವಿಯಾಗಬೇಕು. ಆದರೆ ರಾಫೆಲ್‌ರ ಪ್ರಯೋಗದಲ್ಲಿ ಹೆಚ್ಚು ಮಾತಾಡಿಕೊಳ್ಳುವಂಥ ಮಕ್ಕಳು ಯಾವುದೋ ಒಂದು ತಪ್ಪು ಮಾಡಿದವರು ಇಲ್ಲವೆ ಕೌಟುಂಬಿಕ ವಾತಾವರಣದಿಂದಾಗಿ ವ್ಯಕ್ತವಾಗಿ ಮಾತಾಡಲಾರದಂಥವರು; ಹೀಗಾಗಿ ಒಂಟಿಯಾಗಿದ್ದಾಗ ವಟಗುಟ್ಟುವವರು. ಇಂಥವರಿಗೆ ತಮ್ಮ ಅಭ್ಯಾಸದಲ್ಲಿ ಏಕಾಗ್ರತೆ ಇಲ್ಲದಿರುವಿಕೆ, ಸರಳ ಲೆಕ್ಕಗಳೂ ಭಯಂಕರವೆನಿಸುವಿಕೆ, ಮಾಸ್ತರರು ಹತ್ತಾರು ಬಾರಿ ಹೇಳಿಕೊಟ್ಟರೂ ಅದು ತಲೆಗೇ ಹೋಗದಿರುವಿಕೆಗಳೇ ಮೊದಲಾದುವು ಕಂಡುಬಂದುವು. ಆದರೆ ಇಂಥ ಮಕ್ಕಳಲ್ಲಿ ಸ್ವಲ್ಪ ಆತ್ಮವಿಶ್ವಾಸ ತುಂಬುವ ಮೂಲಕ ಅವರು ಚುರುಕಾಗುವಂತೆ ಮಾಡಬಹುದೆಂದು ಡಯಾರ್ಝ್‌ನ ಪ್ರಯೋಗ ತೋರಿಸಿಕೊಟ್ಟಿತು. ಹೀಗೆ ಚುರುಕು ಮಾಡಲ್ಪಟ್ಟ ಅಥವಾ ಬುದ್ಧಿಗೆ ಸಾಣೆ ಹಿಡಿಯಲ್ಪಟ್ಟ ಮಕ್ಕಳು ನಂತರವೂ 'ಸ್ವಗತ ಸಂಭಾಷಣೆ'ಯನ್ನು ಮುಂದುವರಿಸಿದುದನ್ನು ಗುರುತಿಸಲಾಯಿತು. ಆದರೆ ಈ 'ಸ್ವಗತ' ಪೂರ್ತಿ ಬದಲಾದದ್ದು. ಅದರಲ್ಲಿ ಏನಿದ್ದರೂ ಅಭ್ಯಾಸದ ಕುರಿತ, ಮಾಸ್ತರರ ಕಲಿಸುವಿಕೆ ಕುರಿತ, ಹೊಸತನ್ನು ಸಾಧಿಸುವ ಕುರಿತ ವಿಚಾರಗಳೇ ತುಂಬಿರುತ್ತಿದ್ದುವು.

ಲಾರಾ ಬರ್ಕ್ ಮಾಡಿದ ಪ್ರಯೋಗದಲ್ಲಿ ಐವತ್ತೇಳು ಮಕ್ಕಳನ್ನು ಪ್ರತ್ಯೇಕವಾಗಿರಿಸಿ ಅವರಿಗೆಲ್ಲ ಗಣಿತ ಬಿಡಿಸಲು ಹೇಳಲಾಯಿತು. ಪ್ರತಿ ಬಾಲಕನೂ ಒಂದು ತಾಸಿನಲ್ಲಿ ಸುಮಾರು ೩೬ ನಿಮಿಷಗಳಷ್ಟು ಕಾಲ ತನ್ನಷ್ಟಕ್ಕೆ ತಾನೇ ಮಾತಾಡಿಕೊಳ್ಳುತ್ತಿದ್ದುದು ಗಮನಕ್ಕೆ ಬಂತು. ಕೆಲವರಂತೂ ಸುತ್ತಲಿನವರ ಮಾತು ಅವರನ್ನು ಏಕಾಗ್ರತೆಯಿಂದ ಹೊರಕ್ಕೆಳೆಯಲೂ ಶಕ್ಯವಾಗದಷ್ಟು ಗಟ್ಟಿಯಾಗಿ 'ಸ್ವಗತ'ದಲ್ಲಿ ತೊಡಗಿದ್ದರು. ಉಳಿದವರು ಮೂರು ಲೆಕ್ಕಬಿಡಿಸುವಷ್ಟರಲ್ಲಿ ಇವರು ಐದನೆಯ ಲೆಕ್ಕಕ್ಕೆ

ಬಂದಿದ್ದರು.

ವಿಗೋಟ್‌ಸ್ಕಿ ಹೇಳಿದಂತೆ ಈ 'ಸ್ವಗತ' ಒಂದು ರೀತಿಯಲ್ಲಿ ಆಯಾ ಮಕ್ಕಳಿಗೆ ನಿರ್ದೇಶನ ನೀಡಿ ಕಾರ್ಯಕ್ಷಮತೆಯನ್ನು ಹೆಚ್ಚಿಸುವಂಥದು. ಇವರ ಸ್ವಗತ ಸುಸಂಬದ್ಧವಾದದ್ದು. ಇನ್ನು ಕೆಲಮಕ್ಕಳದು ಅಸಂಬದ್ಧ ಸ್ವಗತ. ಅವರು ಯಾವೊಂದು ಕೆಲಸವನ್ನೂ ಸರಿಯಾಗಿ ಮಾಡಲು ಅಸಮರ್ಥರು. ಮಾಡಬೇಕಾದ್ದು ಕ್ಲಿಷ್ಟವೆನಿಸತೊಡಗಿದಾಗ ಇಲ್ಲವೆ ಬಗೆಹರಿಯದಾದಾಗ ಉಗುರು ಕಡಿಯುವುದು, ಹಿಡಿದ ಪೆನ್ಸಿಲನ್ನು ಟೇಬಲ್ಲಿಗೆ ಕುಟ್ಟುವುದು ಮುಂತಾದವು ಶುರುವಾಗುತ್ತವೆ. ಆದರೆ ಅಭ್ಯಾಸ ಇಲ್ಲವೆ ನಿರ್ದಿಷ್ಟ ಕೆಲಸಕ್ಕೆ ಸಂಬಂಧಿಸಿದಹಾಗೆ 'ಮಾತಾಡಿಕೊಳ್ಳು'ವಂಥ ಹುಡುಗರಿಗೆ ಆಂತರಿಕ ಹಾಗೂ ಬಾಹ್ಯ ಜಗತ್ತಿನ ಸಂಪರ್ಕ, ಪ್ರಜ್ಞೆ ಇದ್ದೇ ಇರುತ್ತದೆ. ಅಲ್ಲದೆ ಹೀಗಿದ್ದೂ ಅವರು ತನ್ಮಯತೆ ಸಾಧಿಸಬಲ್ಲರು.

ಲಾರಾ ಬರ್ಕ್ 'ಅಭ್ಯಾಸ ವಸ್ತು'ಗಳಾಗಿದ್ದ ಮಕ್ಕಳನ್ನು ಅವರವರ ತಾಯಿಯ ಜತೆಗೆ ಬಿಟ್ಟು ಕೆಲವೊಂದು ಪರಿಣಾಮಗಳನ್ನು ನಿರೀಕ್ಷಿಸುವ ಯತ್ನಕ್ಕಿಳಿದಳು. ಇಲ್ಲಿ ತಿಳಿದುಬಂದ ಒಂದು ಅಂಶವೆಂದರೆ ಅಧಿಕಾರ ಚಲಾಯಿಸುವ ಮನೋಭಾವದ ತಾಯಿಯ ಮಗು ಹೆಚ್ಚು ಪ್ರಮಾಣದಲ್ಲಿ 'ಸ್ವಗತ' ನಡೆಸುತ್ತದೆ ಎಂಬುದು. ಹೀಗೆ ಅಧಿಕಾರ ಚಲಾಯಿಸುವ ತಾಯಿ ತನ್ನ ಮಗುವಿಗೆ ಅಭ್ಯಾಸ ಹೇಳುವಾಗ ಪ್ರತಿಯೊಂದನ್ನು ಒತ್ತಿ ಒತ್ತಿ ಮತ್ತೆ ಮತ್ತೆ ಪುನರಾವರ್ತಿಸಿ ಹೇಳಿ ಮನದಟ್ಟು ಮಾಡಿಸುತ್ತಾಳಷ್ಟೆ. ಮಗು ತಾಯಿಯ ಸಂಪರ್ಕದಿಂದ ದೂರವಿದ್ದು ತನ್ನಷ್ಟಕ್ಕೆ ತಾನು ಅಭ್ಯಾಸ ಮಾಡುತ್ತಿರುವ ಸಂದರ್ಭದಲ್ಲಿ ಕೂಡ ಪ್ರತಿಯೊಂದನ್ನೂ ಮೂರು ಮೂರು ಬಾರಿ ಒತ್ತಿ ಒತ್ತಿ ಹೇಳಿಕೊಂಡು ಬರೆಯುತ್ತಿದ್ದುದು ಹಾಗೂ ಎಲ್ಲಿಯಾದರೂ ತಪ್ಪಿತೆಂದರೆ ತಂತಾನೇ (ತಾಯಿ ಗದರಿಸಿದಂತೆ) ಗದರಿಸಿಕೊಂಡು, 'ಹೀಗಲ್ಲ, ಹೀಗೆ' ಎಂದು ಹೇಳಿಕೊಂಡು ಮುಂದುವರಿಯುತ್ತಿದ್ದುದು ಕಂಡುಬಂತು. ಆ ಮಕ್ಕಳ ಚಲನವಲನ ಹಾಗೂ ಮಾತುಗಳನ್ನು ಅವರಿಗೆ ಅರಿವಾಗದ ಹಾಗೆ ವಿಡಿಯೋ ಮುದ್ರಣ ಮಾಡಿಕೊಂಡರು ಲಾರಾಳ ಸಹಯೋಗಿಗಳು.

ಇನ್ನೂ ಒಂದು ಪ್ರಯೋಗನಡೆಸಿದಳು ಲಾರಾ. ಬುದ್ಧಿಮಾಂದ್ಯ ಮಕ್ಕಳಲ್ಲಿನ 'ಸ್ವಗತ ಸಂಭಾಷಣೆ' ಕುರಿತ ಪ್ರಯೋಗ ಅದು. ಸಹಜವಾಗಿಯೇ ಅವರ ಅಭ್ಯಾಸದ ಗತಿ ತೀರ ಮಂದ. ಆರರಿಂದ ಹನ್ನೆರಡು ವಯೋಮಿತಿಯ ಇಂಥ ೧೯ ಮಕ್ಕಳನ್ನು ಈ ಪ್ರಯೋಗಕ್ಕೆ ಬಳಸಿಕೊಳ್ಳಲಾಯಿತು. ಈ ಮನೋಋುಗ್ಣ ಮಕ್ಕಳು ಮಾತಾಡುವುದು ಕಡಿಮೆ ಎಂದು ಮೇಲ್ನೋಟಕ್ಕೆ ಕಂಡುಬಂದರೂ ಗಣಿತ ಬಿಡಿಸುವಾಗ ಅವರೆಲ್ಲ ಹೆಚ್ಚು ವಾಚಾಳಿಗಳಾದಂತೆನಿಸಿತು. ಅವರಿಗೆ ಚೇತಕ ಮದ್ದುಗಳನ್ನು ನೀಡಿದಾಗ ತಂತಾವೇ ಮಾತಾಡಿಕೊಳ್ಳುವುದು ಜಾಸ್ತಿಯಾಯಿತು. ಏಕಾಗ್ರತೆ ಸಾಧಿಸಲು ಈ ಚೇತಕ ಮದ್ದುಗಳು ಸಹಕಾರಿ. ಔಷಧ ಸೇವಿಸುತ್ತಿರುವಷ್ಟೂ ಕಾಲ ಈ ಮಕ್ಕಳು ಮನೋಋುಗ್ಣರೆಂದು ಆಣೆ-ಪ್ರಮಾಣ ಮಾಡಿ ಹೇಳಬೇಕಾದಷ್ಟು ಚುರುಕಾಗಿದ್ದವು.

ಮಕ್ಕಳಿಗೆ ಅವರವೇ ಆದ ಅನೇಕ ಸಮಸ್ಯೆಗಳಿವೆ. ಈ ಸಮಸ್ಯೆಗಳನ್ನು ಬಿಡಿಸಲು ಅವರಿಗೆ ಹಿರಿಯರ, ತಂದೆ-ತಾಯಂದಿರ ಸಹಕಾರ ಅತ್ಯಗತ್ಯ. ಸಹನಶೀಲತೆ-ಪ್ರೀತಿಗಳು ಇಲ್ಲಿ ಹೆಚ್ಚು ಪರಿಣಾಮಕಾರಿ. ಮಗುವಿನ ವೈಯಕ್ತಿಕ ಅವಶ್ಯಕತೆಯನುಸಾರ ದೊಡ್ಡವರು ನೆರವು ನೀಡಬೇಕು.

ಮಕ್ಕಳ 'ವೈಯಕ್ತಿಕ ಸಂವಾದ' ಅಥವಾ 'ಸ್ವಗತ' ಒಂದು ದೋಷವಲ್ಲ, ಅದನ್ನು ನಿವಾರಿಸುವ ಪ್ರಯತ್ನಕ್ಕೆಂದೂ ಇಳಿಯಬೇಡಿ. ಅವರ ಅರಿವಿಗೆ ಬಾರದಂತೆ ಆ 'ಸಂವಾದ'ವನ್ನಷ್ಟು ಆಲಿಸಿ. ಅಂದರೆ ನಿಮ್ಮ ಮಕ್ಕಳಿಗೆ ಏನು ಬೇಕಾಗಿದೆ, ಅವುಗಳು ಎದುರಿಸುತ್ತಿರುವ ಸಮಸ್ಯೆ ಏನು ಎಂಬುದು ನಿಮಗೆ ಗೊತ್ತಾಗುತ್ತದೆ ಅಥವಾ ನಿಮ್ಮ ಮಗುವಿನ ಯೋಚನೆಯ ಜಾಡು ಯಾವುದು ಎಂಬುದೂ ತಿಳಿಯುತ್ತದೆ. ಆ ವಿಚಾರ ಪ್ರವಾಹಕ್ಕೆ ತಕ್ಕಂತೆ ನೀವು ನಡೆದುಕೊಂಡರೆ ಅದೇ ನೀವು ನಿಮ್ಮ ಮಕ್ಕಳಿಗೆ ನೀಡುವ ದೊಡ್ಡ ಕೊಡುಗೆ.

●

ವಾಸ್ತವ ದರ್ಶನ

# ಗಡಿಯಾಚೆಗೆ ಕನ್ನಡ!

# ಗಡಿಯೀಚೆಗೆ ಮರಾಠಿ?

ಕನ್ನಡ ಭಾಷೆ-ಸಂಸ್ಕೃತಿಗಳ ಉಳಿವು-ಬೆಳವಣಿಗೆಯ ವಿಷಯ ಇಂದು ಎಂದಿಗಿಂತಲೂ ಹೆಚ್ಚು ಪ್ರಚಾರ ಪಡೆಯುತ್ತಿದೆ. ರಾಜ್ಯ ಮಟ್ಟದಲ್ಲೊಂದು ನಿರ್ದೇಶನಾಲಯ, ಪ್ರತಿ ಜಿಲ್ಲೆಗೊಂದು ಜಿಲ್ಲಾ ಕಚೇರಿ ಹಾಗೂ ಅಲ್ಲಲ್ಲ ಒಬ್ಬೊಬ್ಬ ಅಧಿಕಾರಿ. ಪ್ರತಿವರ್ಷ ಈ ಕೆಲಸಕ್ಕಾಗಿಯೇ ಮುಂಗಡ ಪತ್ರದಲ್ಲಿ ಹಣ ಕಾದಿರಿಸಲ್ಪಡುತ್ತದೆ. ಹೌದು. ಇಷ್ಟೆಲ್ಲ ಆದರೂ ಗಡಿನಾಡಲ್ಲಿ, ಅದರಲ್ಲೂ ವಿಶೇಷವಾಗಿ ಕರ್ನಾಟಕ ಮತ್ತು ಮಹಾರಾಷ್ಟ್ರದ ಗಡಿಯಲ್ಲಿ ಕನ್ನಡದ ಸ್ಥಾನಮಾನವೇನು? ಅಲ್ಲಿ ಭಾಷೆ-ಸಂಸ್ಕೃತಿಗಳ ಅಭಿವೃದ್ಧಿಯ ಕೆಲಸ ಎಷ್ಟಾಗಿದೆ? ಎಷ್ಟಾಗುತ್ತಿದೆ? ಉತ್ತರ ಹೇಳುವುದು ಅಷ್ಟು ಸುಲಭವಲ್ಲ. ವರುವರುಷ ಹೆಚ್ಚುತ್ತಿರುವ ಮರಾಠಿ ಶಾಲೆಗಳು ಹಾಗೂ ಕನ್ನಡಿಗರ ಮಕ್ಕಳು ಅಲ್ಲಿ ಓದಲು ಹೋಗುತ್ತಿರುವ ಸಂಗತಿಯೆ ಇದಕ್ಕೆ ಕೈಗನ್ನಡಿ.

ಇಲ್ಲಿ ಗಡಿಯ ಆಚೆ-ಈಚೆನ ವಾಸ್ತವ ದರ್ಶನವಿದೆ.

• ಡಾ. ಅನಿಲ ಕಮತಿ

ಗಡಿಭಾಗದ ಅಭಿವೃದ್ಧಿಗೆ ನಮ್ಮ ಸರಕಾರ ವಿಶೇಷ ಆದ್ಯತೆ ನೀಡುತ್ತದೆ" ಈ ಅರ್ಥಬರುವ ಮಾತುಗಳನ್ನು ಕರ್ನಾಟಕ ಏಕೀಕರಣದ ನಂತರದ ಪ್ರತಿ ಮುಖ್ಯಮಂತ್ರಿಯ ಬಾಯಿಯಿಂದಲೂ ಒಂದಿಲ್ಲೊಂದು ಸಂದರ್ಭದಲ್ಲಿ ನಾವುಗಳೆಲ್ಲ ಕೇಳಿ ಸಿಕೊಳ್ಳುತ್ತಲೇ ಇರುತ್ತೇವೆ. ಸೀಮಾಭಾಗದ ಅಭಿವೃದ್ಧಿಯ ಬಗ್ಗೆ ಆಗಾಗ ನಮ್ಮ ಸರಕಾರಗಳು ಜಿಜ್ಞಾಸೆ ತೋರುತ್ತಲೇ ಬಂದಿವೆ. ಈ ಭಾಗದಲ್ಲಿ ಕನ್ನಡ ಸಂಸ್ಕೃತಿಯ ಪುನರುತ್ಥಾನಕ್ಕಾಗಿ ನಮ್ಮ ಸರಕಾರಗಳು ಮತ್ತು ನಮ್ಮ ಕರ್ನಾಟಕ ಸರಕಾರದ ಕೃಪಾಪೋಷಿತ ಮಂಡಲಿಗಳು, ಪ್ರಾಧಿಕಾರಗಳು, ಅನುಷ್ಠಾನಗಳು, ಪರಿಷತ್ತುಗಳು ವಿಶೇಷ ಕಾರ್ಯ ಯೋಜನೆಗಳನ್ನು ಪತ್ರಿಕೆಗಳಲ್ಲಿ ಪ್ರಕಟಿಸುತ್ತಲೇ ಸಾಗಿವೆ. ನಮ್ಮ ಬೇರೆ ಬೇರೆ ಸರಕಾರಗಳೂ 'ಗಡಿ ಅಭಿವೃದ್ಧಿ ನಿಧಿ' ಮುಂತಾದ ವಿಭಿನ್ನ ಆಕರ್ಷಕ ಹೆಸರುಗಳಡಿಯಲ್ಲಿ ಇಲ್ಲಿಯ ಅಭಿವೃದ್ಧಿಗೆ ವಿಶೇಷ ಒತ್ತು ನೀಡುತ್ತಲೇ ಬಂದಿವೆ. ಕೆಲ ಮುಖ್ಯಮಂತ್ರಿಗಳಂತೂ ಸೀಮಾಭಾಗದ ಅಭಿವೃದ್ಧಿಗೆಂದೇ ಪ್ರತಿ ಶಾಸಕರಿಗೆ ಇಂತಿಷ್ಟು ಇಡಗಂಟನ್ನು ಒದಗಿಸಿದ್ದೂ ಉಂಟು.

ಇದರರ್ಥ ಒಂದು ನಾಡಿನ ಭೌತಿಕ-ಭೌಗೋಲಿಕ, ಸಾಮಾಜಿಕ-ಸಾಂಸ್ಕೃತಿಕ ಏಕತೆಯಲ್ಲಿ ಗಡಿಭಾಗದ ವಿಶೇಷ ಮಹತ್ವವನ್ನು ನಮ್ಮ ಇದುವರೆಗಿನ ಎಲ್ಲಾ ಸರಕಾರದವರೂ ಮನಗಂಡಿದ್ದಾರೆಂದಾಯಿತಲ್ಲವೆ? ಇಷ್ಟೊಂದು ಸರಕಾರಗಳ ವಿಶೇಷ ಪ್ರೀತಿಗೆ ಪಾತ್ರವಾಗಿರುವ ಈ ಸೀಮಾಭಾಗದಲ್ಲಿ ಅಭಿವೃದ್ಧಿ ಕಾರ್ಯಗಳು ಅವ್ಯಾಹತವಾಗಿ ನಡೆದು ಒಳನಾಡಿಗೆ ಹೋಲಿಸಿದರೆ ಇದೊಂದು ನಂದನ ವನದಂತೆ ಕಂಗೊಳಿಸುತ್ತಿರಬಹುದೆಂದು ಕನ್ನಡಿಗರು ಭಾವಿಸಿದರೆ ತಪ್ಪಿಲ್ಲ. ವಸ್ತುಸ್ಥಿತಿ ಹೀಗಿರಬೇಕಾದರೆ ಈ ನಂದನವನದಲ್ಲಿ ನಮ್ಮ ನಾಡಿನ ಮಣ್ಣಿನ ಸುಗಂಧ ಸದಾ ಪಸರಿಸಿರಬಹುದಲ್ಲವೆ? ನಮ್ಮ ಸಂಸ್ಕೃತಿಯ ಸೌರಭ ಇಲ್ಲಿಯ ಗಾಳಿಯಲ್ಲೆಲ್ಲ ಹರಡಿರಬಹುದಲ್ಲವೆ? ಇಲ್ಲಿ ಕನ್ನಡ ಎಂಬ ಸುಂದರ ಪುಷ್ಪಗಳು ಸದಾ ಮುಗುಳ್ನಗುತ್ತ ನಳನಳಿಸುತ್ತಿರಬಹುದಲ್ಲವೆ? ಎಂದು ಈ ನಾಡು ನುಡಿಯನ್ನು ಪ್ರೀತಿಸುವ ಪ್ರತಿಯೊಬ್ಬರೂ ಇಲ್ಲಿಯ ಗಾಳಿಯಲ್ಲಿ ಹರಡಿರಬಹುದಾದ 'ಕನ್ನಡ ಸುಗಂಧ'ವನ್ನು ಆಸ್ವಾದಿಸಲು, ಅಡರಿರಬಹುದಾದ 'ಕನ್ನಡ ಪರಾಗ'ವನ್ನು ಸವಿಯಲು ಸಂಭ್ರಮದಿಂದ ಮೂಗರಳಿಸಿದರೆ ಆಶ್ಚರ್ಯವಿಲ್ಲ.

ಶಬ್ದಗಳೊಂದಿಗೆ ಡೊಂಬರಾಟವಾಡುವುದಕ್ಕೆ ಬದಲು, ಪದಗಳೊಂದಿಗೆ ಚದುರಂಗಕ್ಕೆಳಸುವುದರ ಬದಲು ಬನ್ನಿ-ನಮ್ಮ ನಾಡಿನ ಉತ್ತರದ ಸೀಮಾಪಟ್ಟಿಯಲ್ಲಿ ನಾವೆಲ್ಲರೂ ಸೇರಿ ಒಂದು ಸುತ್ತು ಪ್ರವಾಸ ಹೊರಡೋಣ. ಇದು ನಮ್ಮ ನಾಡಿನ ಎಲ್ಲಾ ಸೀಮೆಗಳ, ಸೀಮಾಭಾಗದ ಪ್ರಾತಿನಿಧಿಕ ಚಿತ್ರಣವಾಗಬಹುದಾದುದರಿಂದ ಪ್ರಪಂಚವನ್ನೆಲ್ಲ ಸುತ್ತು ಬಳಸಿಬರುವುದಕ್ಕೆ ಬದಲು ಗಣೇಶ ಶಿವಪಾರ್ವತಿಯರಿಗೆ ಪ್ರದಕ್ಷಿಣೆ ಹಾಕಿದಂತೆ;

## ನಿತ್ಯಜೀವನದಲ್ಲಿ ಭಾಷೆ

ನೀವುಗಳು ನನ್ನ ಜತೆ ಈ ಪ್ರವಾಸಕ್ಕೆ ಎಳಸುವ ಮುಂಚೆಯೇ ಒಂದು ಸ್ಪಷ್ಟೀಕರಣ: ಈ ಪ್ರಯಾಣದಿಂದ ಮರಳಿದ ನಂತರ ಮಹಾರಾಷ್ಟ್ರ ಏಕೀಕರಣ ಸಮಿತಿಯವರು ಆಪಾದಿಸುವಂತೆ, ರಾಜ್ಯ ವಿಂಗಡನೆಯ ಸಮಯಕ್ಕೆ ಅದೆಷ್ಟೋ ಮರಾಠಿ ಪ್ರದೇಶಗಳು ಕನ್ನಡನಾಡಿನಲ್ಲಿ ಸೇರಿಕೊಂಡಿವೆ ಮತ್ತು ನ್ಯಾಯಯುತವಾದ ಪ್ರದೇಶ ಮಾತ್ರ ಮಹಾರಾಷ್ಟ್ರದೊಳಗಿದೆ ಎಂದು ನಿಮ್ಮದೂ ಪ್ರಾಮಾಣಿಕ ಅಭಿಪ್ರಾಯವಾಗಿ ಮಾರ್ಪಟ್ಟರೆ ಅದಕ್ಕೆ ನಾನು ಜವಾಬ್ದಾರನಲ್ಲ.

ಸಂಕೇಶ್ವರ ಮತ್ತು ಗಡಹಿಂಗ್ಲಜ ಇವು ಗಡಿಯಿಂದ ಸಮಾನಾಂತರದಲ್ಲಿರುವ ಕ್ರಮವಾಗಿ ಕರ್ನಾಟಕ ಮತ್ತು ಮಹಾರಾಷ್ಟ್ರದ ಎರಡು ಪ್ರಮುಖ ಪಟ್ಟಣಗಳು. ಸಂಕೇಶ್ವರದಲ್ಲಿ ನಿಮಗೆ ಕನ್ನಡ-ಮರಾಠಿಗಳೆರಡೂ ಸರಿಸುಮಾರು ಅಷ್ಟೇ ಪ್ರಮಾಣದಲ್ಲಿ ಕೇಳಸಿಗುತ್ತವಾದರೆ ಗಡಹಿಂಗ್ಲಜದ ತುಂಬೆಲ್ಲ ನಿಮ್ಮ ಕಿವಿಗೆ ಬೀಳುವುದು ಕನ್ನಡದ ಕಿಣ್'-ಕಿಣ್'ಯೇ. ಬೀಗಬೇಡಿ. ವಿಪರ್ಯಾಸ ಇನ್ನು ಮುಂದೆ ಪ್ರಾರಂಭವಾಗುತ್ತದೆ. ಸಂಕೇಶ್ವರದ ಪೇಟೆಯಲ್ಲಿ ನಿಮಗೆ 'ದ್ವಿಭಾಷಿ' ಫಲಕಗಳೇ ಎದುರಾಗುತ್ತವೆ. ಹಲಕೆಲವು ಪರಿಶುದ್ಧ ಮರಾಠಿಯಲ್ಲಷ್ಟೇ ಬರೆದವುಗಳು ಕಾಣಸಿಗುತ್ತವೆ, ಕೇವಲ ಕನ್ನಡದವು

ಕಡಿಮೆಯೆ. ಗಡಹಿಂಗ್ಲಜದಲ್ಲಿ ನಿಮಗೆ ಕಣ್ಣಿಗೆ ಅಂಜನ ಹಾಕಿದರೂ ಕನ್ನಡದ ಒಂದು ಅಕ್ಷರ ಕೂಡ ಸಿಗದು. ಸಂಕೇಶ್ವರದ ಬಹುತೇಕ ಕನ್ನಡಿಗ ರಿಗೆಲ್ಲ 'ಉತ್ತಮ, ಗ್ರಾಂಥಿಕ ಮರಾಠಿ'ಯ ಪರಿಚ ಯವಿದೆ. ಆದರೆ ಇದೇ ಊರಿನ ಹೆಚ್ಚಿನ ಮರಾ ಠಿಗರಿಗೆ ವ್ಯವಹಾರ ಯೋಗ್ಯ ಕನ್ನಡದಲ್ಲಿ ಮಾತ ನಾಡಲೂ ಬಾರದು. ಬಹುಶಃ ಇಡೀ ಮಹಾರಾ ಷ್ಟ್ರದಲ್ಲಿ ಕನ್ನಡದ ಬಗ್ಗೆ ಆದರಾಭಿಮಾನಗಳನ್ನು ಇಂದಿನವರೆಗೂ ಅಖಂಡವಾಗಿ ಉಳಿಸಿಕೊಂಡು ಬಂದಿರುವ ಏಕಮಾತ್ರ ಜನಾಂಗವೆಂದರೆ ಗಡ ಹಿಂಗ್ಲಜದ ಕನ್ನಡಿಗರದು. ಆದರೆ ಇವರಾರಿಗೂ ಕನ್ನಡದ ಅಕ್ಷರಜ್ಞಾನ ಅಷ್ಟಕ್ಕಷ್ಟೇ!

ಕೊಂಚ ಉತ್ತರಕ್ಕೆ ಪಯಣಿಸಿ ನಿಪ್ಪಾಣಿಗೆ ಬರೋಣ. ಇಲ್ಲಿ ನಿಮ್ಮ ಪಂಚೇಂದ್ರಿಯಗಳನ್ನೂ ಅಡರುವುದು ತಂಬಾಕಿನ ಖಾಟು ಮತ್ತು ಮರಾ ಠಿಯ ಘಾಟು. ನಿಮ್ಮ ನಾಸಿಕ ಅರಳಿ ನಿಂತರೂ, ಕಣ್ಣು-ಕಿವಿ ತಹತಹಿಸಿದರೂ ಇಲ್ಲಿ ಕನ್ನಡದ ಅನು ಭವ ನಿಮಗಾಗಲಿಕ್ಕಿಲ್ಲ, ಜಿಹ್ವಾಚಾಪಲ್ಯದಿಂದಾಗಿ ಯಾರೊಂದಿಗಾದರೂ ಕನ್ನಡದಲ್ಲಿ ಮಾತನಾಡಿ ದಿರೋ, ಕಾಡಿಗೆ ಹೊಕ್ಕ ಪಂಜರದ ಪ್ರಾಣಿಯ ಗತಿ ನಿಮ್ಮದಾದೀತು. ನಿಮ್ಮ ಏಳೇಳು ಜನ್ಮಗಳ ಪುಣ್ಯದಿಂದ ಕನ್ನಡದ ಸ್ಪರ್ಶ ಸಿಕ್ಕರೆ ಸಾಕು, ನಿಮ್ಮ ರೋಮರೋಮಗಳು ನಿಮಿರಿ ನಿಂತಾವು. ಮನೆ, ಅಂಗಡಿ, ಕಾರ್ಯಾಲಯಗಳೆಲ್ಲದರ ಫಲಕಗಳಲ್ಲಿ ಕನ್ನಡಕ್ಕೆ ಅಡಿಟಿಪ್ಪಣಿಯಷ್ಟು ಸ್ಥಾನವೂ ಇಲ್ಲ, ಇದಕ್ಕೆ ಖಾಸಗಿ, ಸರಕಾರಿ ಎಂಬ ಭೇದ ಭಾವ ವಿಲ್ಲ, ಇದು ಕೇಂದ್ರ ಸರಕಾರಿ ಕಛೇರಿ, ಇದು ರಾಜ್ಯಸರಕಾರದ್ದು ಎಂಬ ತಾರತಮ್ಯವೂ ಇಲ್ಲ.

ಕೇಂದ್ರ ಸರಕಾರದ ಹಿಂದಿ ಹೇರಿಕೆಯ ನೀತಿಯ ವಿರುದ್ಧ ಸದಾ ಪ್ರತಿಭಟಿಸುವ ನಾವು ನಿಪ್ಪಾಣಿಗೆ ಬಂದಾಗ, ಕನ್ನಡದ ಹೆಸರಲ್ಲಿ ರಾಜ್ಯ ವಾಳುತ್ತಿರುವ ನಮ್ಮ ಕರ್ನಾಟಕ ಸರಕಾರದ ಬದ್ಧತೆ ಮತ್ತು ಕನ್ನಡ ನಿಷ್ಠೆಯ ಬಗ್ಗೆಯೇ ಪ್ರಶ್ನಿಸಬೇಕಾಗು ತ್ತದೆ. ಒಂದು ಪಟ್ಟಣಕ್ಕೆ ಹೊರಗಿನಿಂದ ಬರುವ ವರಿಗೆ ನಮ್ಮ ಸಂಸ್ಕೃತಿ-ಸಂಸ್ಕಾರಗಳನ್ನು ತೆರೆದು ತೋರಿಸುವ ಆಯಕಟ್ಟಿನ ತಾಣಗಳೆಂದರೆ ಬಸ್, ರೈಲು ಮತ್ತು ವಿಮಾನ ನಿಲ್ದಾಣಗಳು. ಒಂದು ಊರಿಗೆ ಬರುವ ಪ್ರಯಾಣಿಕರ ನೂರು ಪಟ್ಟು ಜನ ಈ ಊರಿನ ಮುಖಾಂತರ ಹಾಯ್ದುಹೋ ಗುತ್ತಾರೆ. ಇವರುಗಳಿಗೆಲ್ಲ ಆ ಊರಿನ ಸಭ್ಯತೆಯ ಅರಿವಾಗುವುದು ಈ ನಿಲ್ದಾಣದಿಂದ ಅವರು ಹೊರಹಾಕುವ ಒಂದು ಇಣುಕು ನೋಟದಿಂದ ಮಾತ್ರ. ನಿಪ್ಪಾಣಿಗೆ ರೈಲು, ವಿಮಾನ ನಿಲ್ದಾಣಗ ಳಿಲ್ಲ, ಇರುವುದು ಬಸ್ ನಿಲ್ದಾಣವೊಂದೇ. ಈ ನಿಲ್ದಾಣದ ಮುಖ್ಯ ಕಟ್ಟಡದ ಹಣೆಯ ಮೇಲೆ 'ನಿಪ್ಪಾಣಿ'' ಎಂದು ಮೂರಡಿ ಎತ್ತರದ ಕಾಂಕ್ರಿಟ್ ಅಕ್ಷರದಲ್ಲಿ ಮರಾಠಿಯಲ್ಲಿ ಬರೆದಿದ್ದಾರೆ. ಈ ಬಸ್ ಸ್ಟ್ಯಾಂಡ್ ನಿರ್ಮಾಣಕ್ಕೆ ಅಡಿಗಲ್ಲು ಇಟ್ಟಿದ್ದು ಕರ್ನಾ ಟಕ ರಾಜ್ಯೋದಯದ ನಂತರವೇ. ಇದರ ಉದ್ಘಾ ಟನೆ ಜರುಗಿದ್ದು ೧೯೫೮ರ ಮೇ ತಿಂಗಳಲ್ಲಿ. ಕನ್ನಡಮ್ಮನ ದುರ್ದೈವ-ಇದು ಅಂದಿನಿಂದ ಇಂದಿ ನವರೆಗಿನ ಯಾವುವೇ ಸರಕಾರದ ಗಮನಕ್ಕೂ ಬಾರದೇ ಹೋದುದು, ಬಂದರೂ ಇವರ ಮರ್ಮಸ್ಥಾನಕ್ಕೆ ಚುಚ್ಚದಿದ್ದುದು.

ಈ ಸಂದರ್ಭದಲ್ಲಿ ಒಂದು ಘಟನೆ ನೆನಪಾ ಗುತ್ತಿದೆ. ನಾಸಿಕ ನಗರದ ಕನ್ನಡಿಗರ ಸಂಘಟನೆ ಯೊಂದು ಹಲವು ವರುಷಗಳ ಹಿಂದೆ, ಪ್ರಯಾ ಣಿಕರ ಅನುಕೂಲಕ್ಕೆಂದು ಅಲ್ಲಿಯ ಬಸ್ ನಿಲ್ದಾ ಣಕ್ಕೆ ಒಂದು ಬೃಹತ್ ಗೋಡೆ ಗಡಿಯಾರವನ್ನು ದೇಣಿಗೆ ರೂಪದಲ್ಲಿ ನೀಡಲು ಮುಂದಾಯಿತು. ಆದರೆ ಅಲ್ಲಿಯ ಸಂಬಂಧಪಟ್ಟ ಅಧಿಕಾರಿಗಳು ಆ ಗಡಿಯಾರವನ್ನು ಸ್ವೀಕರಿಸಲು ನಿರಾಕರಿಸಿದರಂತೆ. ಕಾರಣವಿಷ್ಟೇ. ಆ ಗಡಿಯಾರದಲ್ಲಿ ಇವರ ಸಂಘ ಟನೆಯ ಹೆಸರು ಇಂಗ್ಲೀಷಿನಲ್ಲಿತ್ತು ಮತ್ತು ಚಿಕ್ಕ ಅಕ್ಷರಗಳಲ್ಲಿ ಕನ್ನಡದಲ್ಲಿತ್ತೇ ಹೊರತು ಮರಾಠಿಯ ಲ್ಲಿರಲಿಲ್ಲ. ಆದರೆ ಇದೇ ನಮ್ಮ ನಿಪ್ಪಾಣಿಯಲ್ಲಿಯ ಬಸ್‌ಸ್ಟ್ಯಾಂಡಿನಲ್ಲಿ ಮರಾಠಿಯಲ್ಲಿ ಮಾತ್ರ ಹೆಸರು ಹೊತ್ತ ಗಡಿಯಾರ, ಫಲಕ, ಫೋಟೋಗಳೆಲ್ಲ ಥಳಥಳಿಸುತ್ತಿವೆ.

ನನ್ನ ಮನದಲ್ಲಿ ಬಹುದಿನಗಳಿಂದ ಪ್ರಶ್ನೆಯಾ ಗಿಯೇ ಉಳಿದುಕೊಂಡು ದಿನದಿನಕ್ಕೆ ಬೃಹದಾಕಾ ರವಾಗಿ ಬೆಳೆಯುತ್ತಿರುವ ಒಂದು ಸಮಸ್ಯೆ

ಎಂದರೆ, ಒಂದೇ ನೆಲದಲ್ಲಿ ಹುಟ್ಟಿ ಒಂದೇ ಸಂಸ್ಕೃತಿಯನ್ನು ಹರಿದುಹಂಚಿಕೊಂಡು ಬೆಳೆದಂಥ ಒಂದೇ ತಾಯ ಮಮತೆಯ ಮಡಿಲಲ್ಲಿ ಹುಟ್ಟಿ ಆಡಿದ ಎರಡು ಭಾಷಿಕರ ಮನೋಭೂಮಿಕೆಯ ಮಧ್ಯೆ ಅದು ಹೇಗೆ ಇಂಥ ಅಜಗಜಾಂತರ? ಎನ್ನುವುದು.

ಗಡಿದಾಟಿ ಕೇವಲ ಐದು ಕಿಲೋ ಮೀಟರ್ ಅಂತರದಲ್ಲಿದೆ ಕಾಗಲ ಎನ್ನುವ ಮಹಾರಾಷ್ಟ್ರದ ಒಂದು ತಾಲೂಕು ಸ್ಥಳ. ಇಲ್ಲಿಯ ಪೇಟೆಯಲ್ಲಿ ಒಂದೊಮ್ಮೆ ಸುತ್ತು ಹಾಕುತ್ತಿದ್ದಾಗ ಒಂದು ಗಮ್ಮತ್ತು ನನ್ನ ಗಮನಸೆಳೆಯಿತು. ಈ ಪಟ್ಟಣದುದ್ದಕ್ಕೂ ನನಗೆ ಒಂದು ಕನ್ನಡದ ಪದವೂ ಕೇಳಬರಲಿಲ್ಲ, ಕಾಣಸಿಗಲಿಲ್ಲ. ಕೇವಲ ಐದೇ ಕಿಲೋಮೀಟರುಗಳ ಅಂತರದಲ್ಲಿ ಇಂಥ ಪರಿವರ್ತನೆ ಕಾಣಸಿಗುವುದಾದರೆ ಮಹಾರಾಷ್ಟ್ರದವರೇನು ನಮ್ಮ ಕನ್ನಡನಾಡಿನೊಂದಿಗೆ [illegible]ರೇಖೆ ಎಳೆದಿದ್ದಾರೋ ಅಥವಾ ಲಕ್ಷ್ಮಣ ರೇಖೆ (ಕನ್ನಡಕ್ಕೆ) ಎಳೆದಿದ್ದಾರೋ ಎಂದು ಆಶ್ಚರ್ಯಪಡುತ್ತಲೇ ಇಲ್ಲಿಯ ಬಸ್‌ಸ್ಟ್ಯಾಂಡಿಗೆ ಬಂದೆ. ಅಲ್ಲಿ ಒಂದು ಬಸ್ಸಿನಿಂದ ಇಳಿದ ಸುಮಾರು ೩೦-೪೦ ಗಂಡುಹೆಣ್ಣುಗಳೆಲ್ಲ ಕನ್ನಡದಲ್ಲಿಯೇ ಮಾತನಾಡುತ್ತ ಪೇಟೆಯತ್ತ ಹೆಜ್ಜೆ ಹಾಕತೊಡಗಿದರುವು. ಮೊದಲಿಗೆ ನಾನು ಅವರೇನೋ ಕನ್ನಡನಾಡಿನ ಹಳ್ಳಿಯಿಂದ ಬಂದವರೋ, ವಿಜಾಪುರ ಜಿಲ್ಲೆಯಿಂದ ಗುಳೆ ಎದ್ದು ಬಂದವರೋ ಇರಬೇಕೆಂದುಕೊಂಡೆ. ಆದರೆ ಇವರ ಆಡುಗನ್ನಡದ ಗತ್ತು ಸಂಪೂರ್ಣ ಭಿನ್ನವಾಗಿದ್ದುದನ್ನು ಕಂಡು ಕುತೂಹಲ ತಾಳದೆ ಇವರ ಮಾತುಕೇಳಿ ಬರುವಷ್ಟು ಅಂತರವಿರಿಸಿಕೊಂಡು ಇವರನ್ನು ಹಿಂಬಾಲಿಸಿದೆ.ಇಲ್ಲಿ ಇನ್ನೂ ಎರಡು ಸಂಗತಿಗಳು ನನ್ನ ಗಮನ ಸೆಳೆದುವು. ಇವರು ತಮ್ಮ ಮಧ್ಯೆ ಕನ್ನಡದಲ್ಲಿಯೇ ಮಾತನಾಡುತ್ತಿದ್ದರೂ, ಕಾಗಲ ಪೇಟೆ ಜನರೊಂದಿಗೆ ಮರಾಠಿ ಬಳಸುತ್ತಿದರು. ಸುತ್ತಲಿನ ಹಳ್ಳಿಗಳಿಂದ ತರಕಾರಿ ಮಾರಾಟಕ್ಕೆಂದು ಬಂದವರೊಂದಿಗೆ ಮತ್ತೆ ಕನ್ನಡ. ನಂತರ ತಿಳಿದು ಬಂದಿದ್ದಿಷ್ಟೆ: ಸುಮಾರು ಮೂರ್‍ನಾಲ್ಕು ದಶಕಗಳ ಹಿಂದೆ ಕನ್ನಡವೇ ಇಲ್ಲಿಯ ಮಣ್ಣಿನ ಭಾಷೆ. ಕಾಗಲದ ಸಂಸ್ಥಾನಿಕರು ಮರಾಠಿಗರಾಗಿದ್ದುದರಿಂದ ಉಚ್ಚ ಸ್ತರದಲ್ಲಿ ನಾಗರಿಕ ಭಾಷೆ ಮರಾಠಿಯಾಯಿತಾದರೂ ಶ್ರೀಸಾಮಾನ್ಯನ ಬಳಕೆಯ ಭಾಷೆ ಕನ್ನಡವೇ. ಆದರೆ ಇತ್ತೀಚಿನ ದಿನಗಳಲ್ಲಿ ಕನ್ನಡ ಎಷ್ಟೊಂದು ತೀವ್ರವಾಗಿ ನಶಿಸಿಹೋಗುತ್ತಿದೆಯೆಂದರೆ ಈ ಪಟ್ಟಣದ ಪೇಟೆ ಜನರಿಗೆ ಕನ್ನಡ ಗೊತ್ತೇ ಇಲ್ಲ. ಈ ಹಳ್ಳಿಗರಲ್ಲಿಯ ಮತ್ತೊಂದು ವೈಶಿಷ್ಟ್ಯ ನನ್ನ ಗಮನಸೆಳೆಯಿತು. ಈ ವಯಸ್ಕರೆಲ್ಲ ತಮ್ಮ ಮಧ್ಯೆ ಕನ್ನಡದಲ್ಲಿಯೇ ಮಾತಾಡಿಕೊಳ್ಳುತ್ತಿದ್ದರೂ, ತಮ್ಮ ಚಿಕ್ಕ ಮಕ್ಕಳೊಂದಿಗೆ ಮರಾಠಿಗೆ ಬದಲಾಯಿಸುತ್ತಿದ್ದರು. ಇದಕ್ಕೆ ಅವರೇ ಹೇಳಿದ ಕಾರಣ- 'ಇವರ ಶಿಕ್ಷಣವೆಲ್ಲ ಮರಾಠಿಯಲ್ಲಿ, ಅದಕ್ಕೆ ತೊಂದರೆಯಾಗಬಾರದಲ್ಲವೆ? ಮಕ್ಕಳನ್ನು ಎರಡೆರಡು ಭಾಷೆಗೆ ತೆರೆದುಕೊಂಡರೆ, ಯಾವುದೊಂದೂ ಉತ್ತಮವಾಗಿರದು!" ಎಂದು. ನಾನು ಅವಡುಗಚ್ಚಿದೆ. ಇನ್ನೊಂದು ಪೀಳಿಗೆಯವರೆಗೆ ತನ್ನ ಸೌರಭ ಬೀರಲು ಈ ಮಣ್ಣಿನಲ್ಲಿಯೂ ಕನ್ನಡದ ಸುಗಂಧ ಉಳಿಯದು!

---

**ಇಲ್ಲಿ ಊಟ ಮರಾಠಿಯಾದರೆ ಆಗಾಗ ನೆಂಜಿಕೊಳ್ಳಲಾದರೂ ಕನ್ನಡ ದೊರೆತರೆ ಅದು ನಿಮ್ಮ ಸೌಭಾಗ್ಯ.**

---

ಅಕ್ಕೋಳ ಎನ್ನುವುದು ಕರ್ನಾಟಕದ ಒಂದು ಗ್ರಾಮ. ಉತ್ತಮ ಗುಣಮಟ್ಟದ ತಂಬಾಕಿಗಾಗಿ ಪ್ರಸಿದ್ಧಿ ಪಡೆದ ಈ ಗ್ರಾಮದ ತುಂಬೆಲ್ಲ ಮರಾಠಿಯದೇ ಸಾಮ್ರಾಜ್ಯ. ಮನೆ ಮಾತು, ವ್ಯವಹಾರದ ಭಾಷೆ, ಬೋರ್ಡು, ವೃತ್ತ ಪತ್ರಿಕೆ, ಶಿಕ್ಷಣ, ಸರಕಾರಿ, ಸರಕಾರೇತರ ಕಾಗದ ಪತ್ರಗಳಲ್ಲೆಲ್ಲ ಮರಾಠಿಯದೇ ಪಾರುಪತ್ಯ. ಇಲ್ಲಿ ಊಟ ಮರಾಠಿಯಾದರೆ ಆಗಾಗ ನೆಂಜಿಕೊಳ್ಳಲಾದರೂ ಕನ್ನಡ ದೊರೆತರೆ ಅದು ನಿಮ್ಮ ಸೌಭಾಗ್ಯ.

ದತ್ತವಾಡ, ಮಹಾರಾಷ್ಟ್ರದ ಒಂದು ಗ್ರಾಮ. ಇಂದಿಗೂ ಇಲ್ಲಿಯ ರಸ್ತೆಗಳಲ್ಲಿ ನಿಂತು ಕಿವಿ ನಿಮಿರಿಸಿ ಕೇಳಿದರೆ, ಮನೆ-ಅಂಗಡಿಗಳ ಮುಂಗಟ್ಟುಗಳಲ್ಲಿ ಕುಳಿತು ಅತ್ತಿತ್ತ ಲಕ್ಷ್ಯಹರಿಸಿದರೆ ಎಲ್ಲೆಡೆ

ಕನ್ನಡದ್ದೇ ಚಲಾವಣೆ. ಅಜ್ಜ ಮೀಸೆ ತಿರುವಿ ಬಡಾಯಿ ಕೊಚ್ಚುವುದೂ ಕನ್ನಡದಲ್ಲಿ, ಮೊಮ್ಮಗ ಚಡ್ಡಿ ಹಸಿ ಮಾಡಿಕೊಂಡು ಅಳುವುದೂ ಕನ್ನಡ ದಲ್ಲಿ; ನಲ್ಲೆ ಮುನಿಸಿಕೊಂಡು ಮುಸಿ-ಮುಸಿ ಮಾಡುವುದೂ ಕನ್ನಡದಲ್ಲಿ, ನಲ್ಲ ಲಲ್ಲೆಗೆರೆಯು ವುದೂ ಕನ್ನಡದಲ್ಲಿ, ಅಜ್ಜಿಯ ಬೀಸುವ ಕಲ್ಲಿನ ಪದವೂ ಕನ್ನಡದ್ದೇ, ಕವಣೆ ಬೀಸಿ ಆಳುಮಗ ಹಾಕುವ ಕೇಕೆ ಕನ್ನಡದ್ದೇ. ಯುವತಿಯರ ಬಳೆಗಳ ಕಿಣ್-ಕಿಣ್, ಷೋಡಶಿಯರ ಮಲ್ಲಿಗೆಯಂಥ ಮುಗಳ್ನಗೆಗಳೆಲ್ಲ ಅಡ್ಡಕನ್ನಡದ್ದೇ. ಆದರೂ ಇಲ್ಲಿಯ ಪರಿಸರದಲ್ಲಿ ಕನ್ನಡದ ಒಂದಕ್ಷರವೂ ನಿಮಗೆ ಕಾಣಸಿಗದು. ಈ ಊರಿಗೆ ಒಂದು ಕನ್ನಡ ದಿನಪತ್ರಿಕೆ, ನಿಯತಕಾಲಿಕವೂ ಬರುವುದಿಲ್ಲ. ಇಲ್ಲಿಯ ಈ ಪೀಳಿಗೆಯ ಜನಕ್ಕೆ ಮೂಲಾಕ್ಷರ ಜ್ಞಾನವೂ ಇಲ್ಲ. ಕಾರದಗ ಎನ್ನುವುದು ಸುಮಾರು ದತ್ತವಾಡದಷ್ಟೇ ದೊಡ್ಡದಾದ ಹಳ್ಳಿ. ಅಲ್ಲಿಗೂ-ಇಲ್ಲಿಗೂ ಬಲು ಸಾಮ್ಯ. ಇಲ್ಲಿಯ ಪ್ರೌಢಶಾಲೆಯಲ್ಲಿ ಓದುವ ಒಟ್ಟು ಐನೂರು ವಿದ್ಯಾರ್ಥಿಗಳಲ್ಲಿ ಕೇವಲ ಐವತ್ತು ಮಾತ್ರ ಕನ್ನಡ ದವು-ಇವುಗಳಲ್ಲಿಯ ಬಹುಪಾಲು ಇಲ್ಲಿ ಸರಕಾರಿ ಹಾಸ್ಟೇಲ್‌ನಲ್ಲಿ ನೆಲೆಸಿರುವ ಪರವೂರಿನ ಹೈಕಳು. ಇಲ್ಲಿಯೂ ಕನ್ನಡ ಪತ್ರಿಕೆಗಳು, ಬಾರವು, ಕನ್ನಡ ಮಾತನಾಡಿದರೂ ಕನ್ನಡದ ಅಕ್ಷರಜ್ಞಾನವಿಲ್ಲ. ಆದರೆ ಅಲ್ಲಿಗೂ ಇಲ್ಲಿಗೂ ಒಂದೇ ವ್ಯತ್ಯಾಸವೆಂ ದರೆ ಕಾರದಗ ಕರ್ನಾಟಕದಲ್ಲಿದೆ; ಕನ್ನಡ ಸರಕಾರದ ಛತ್ರಛಾಯೆಯಲ್ಲಿ ಬೆಳೆದು ದೊಡ್ಡದಾಗುತ್ತಿದೆ.

ಗಡಿ-ಗಾತ್ರ; ಭೂನೆಲೆ-ಭಾಷಿಕರ ಭಾಷೆಯ ಪ್ರಾಬಲ್ಯಗಳ ವಿಷಯಗಳಲ್ಲಿ ಒಂದೇ ಮಟ್ಟದಲ್ಲಿ ರುವ ಕೆಲ ಹಳ್ಳಿ-ಪಟ್ಟಣಗಳನ್ನು ತುಲನೆಮಾಡಿ ನೋಡಿದಿರಿ. ಇಂಥ ನೂರಾರು ನಂಬಲಸಾಧ್ಯ ಜೀವಂತ ಉದಾಹರಣೆಗಳ ನಡುವೆ ಮಿರಜ್ ಎಂಬ ಪಟ್ಟಣ ಮಾತ್ರ ಅಪವಾದವೆಂಬಂತೆ ಢಾಳಾಗಿ ಎದ್ದುಕಾಣುತ್ತದೆ. ಅಂದರೆ ಇಲ್ಲಿ ಕನ್ನಡ ಊರ್ಧ್ವಮುಖವಾಗಿದೆಯೋ? ಉತ್ತರ ಕರ್ನಾಟಕ ಮತ್ತು ದಕ್ಷಿಣ ಮಹಾರಾಷ್ಟ್ರದೊಳಗಿನ ಪ್ರಮುಖ ವೈದ್ಯಕೀಯ ಕೇಂದ್ರವೆಂದು ಖ್ಯಾತಿವೆತ್ತ ನೆಲದಲ್ಲಿ ಮರಾಠಿ ನೆಲೆಕಳೆದುಕೊಳ್ಳುತ್ತಿದ್ದು, ಕನ್ನಡ ಪ್ರವರ್ಧ ಮಾನ ಸ್ಥಿತಿಯಲ್ಲಿದೆಯೋ? ನಿಶ್ಚಿತವಾಗಿಯೂ ಇಲ್ಲ.

ಕನ್ನಡನಾಡು ಉದಯವಾದಾಗ ನಾವು ಕಳೆದು ಕೊಂಡ ಕೆಲ ಕನ್ನಡದ ನೆಲೆಗಟ್ಟುಗಳಲ್ಲಿ ಒಂದಾದ ಮಿರಜ್‌ನಲ್ಲಿ ಇಂದಿಗೂ ಕೆಲ ಆಸ್ಪತ್ರೆಗಳ ಬೋರ್ಡುಗಳು ಕನ್ನಡದಲ್ಲೂ ಕಾಣಸಿಗುತ್ತವೆ. ವೈದ್ಯರ ಚೀಟಿಯ ಮೇಲೆ ಕನ್ನಡದ ಅಚ್ಚಾದ ಅಕ್ಷರಗಳೂ ನೋಡಸಿಗುತ್ತವೆ. ಇದು ಹೇಗೆ ಸಾಧ್ಯ? ಕಳೆದ ಮೂರುವರೆ ದಶಕಗಳಲ್ಲಿ ಮಹಾ ರಾಷ್ಟ್ರದಲ್ಲೆಲ್ಲೆಡೆ ಅವ್ಯಾಹತವಾಗಿ ಸಾಗಿ ಬಂದಿರುವ ಮಹಾರಾಷ್ಟ್ರ ಸರಕಾರ ಪ್ರಾಯೋಜಿತ- 'ಕನ್ನಡ ಕಸ ಕೀಳುವ' ಅಘೋಷಿತ ಆಂದೋಲನ ಇಲ್ಲಿಗೆ ತಲುಪಿಲ್ಲವೇ?

ತನ್ನ ಭಾಷೆಗೆ ನಿಷ್ಠೆ ತೋರುವಲ್ಲಿ ಆಲಸ್ಯ, ಅಚಾತುರ್ಯ ಪ್ರದರ್ಶಿಸಲು ಅದೇನು ಕರ್ನಾಟಕ ಸರ್ಕಾರವೆ?

ಈ ಬೋರ್ಡು ಫಲಕಗಳ ವಿಷಯದಲ್ಲೂ ನಿಮಗೊಂದು ಅಂತರ ಕಣ್ಣಿಗೆ ರಾಚುವಷ್ಟು ಸ್ಪಷ್ಟವಾಗಿ ಕಾಣಸಿಗುತ್ತದೆ. ಅದೆಂದರೆ ಇಲ್ಲಿಯ ಆಸ್ಪತ್ರೆಗಳ ಬೋರ್ಡುಗಳಲ್ಲಿ ಮಾತ್ರ ಕನ್ನಡದ ಅಕ್ಷರಗಳು ಕಾಣಸಿಗುತ್ತವೆಯೇ ಹೊರತು ಅಂಗಡಿ-ಆಫೀಸುಗಳ ಫಲಕಗಳಲ್ಲಿ ಕನ್ನಡಕ್ಕೆ ಸ್ಥಾನ ವಿಲ್ಲ. ಯಾಕೆ ಈ ವ್ಯತ್ಯಾಸ? ಮಿರಜದ ಹೆಚ್ಚಿನ ಮೂಲನಿವಾಸಿಗಳು ಕನ್ನಡಿಗರೇ. ಇಲ್ಲಿರುವ ಹೆಚ್ಚಿನ ತಜ್ಞ ವೈದ್ಯರೂ ಕನ್ನಡಿಗರೇ. ಎಷ್ಟೋ ಜನ ಕನ್ನಡನಾಡಿನಿಂದ ವೃತ್ತಿ ನಿಮಿತ್ತ ಇಲ್ಲಿಗೆ ಬಂದು ನೆಲೆಸಿದವರು. ಹಾಗಿದ್ದರೆ ತಮ್ಮ ಭಾಷೆಯ ಅಭಿ ಮಾನದಿಂದ ಈ ವೈದ್ಯರು ತಮ್ಮ ಬೋರ್ಡಿನಲ್ಲಿ ಕನ್ನಡ ಬಳಸಿದ್ದಾರೆಯೇ? ಹಾಗೆಂದು ದಯವಿಟ್ಟು ಭಾವಿಸಬೇಡಿ. ಇಲ್ಲಿಯ ವೈದ್ಯಕೀಯ ಕ್ಷೇತ್ರದಲ್ಲಿ ತುರಸಿನ ಸ್ಪರ್ಧೆ. ಇಲ್ಲಿಗೆ ಬರುವ ಮುಕ್ಕಾಲು ಪಾಲು ರೋಗಿಗಳು ಕನ್ನಡ ನಾಡಿನವರೇ. ಆದು ದರಿಂದ ಮಾತ್ರ ಕನ್ನಡದ ಮೇಲೆ ಅಷ್ಟಿಷ್ಟು ಪ್ರೀತಿ; ಈ ಕನ್ನಡದ ರೋಗಿಗಳನ್ನು ತಮ್ಮೆಡೆಗೆ ಈ ರೀತಿ ಸೆಳೆದುಕೊಳ್ಳಬಹುದೆಂಬ ಆಸೆಯೇ ಹೊರತಾಗಿ

ತಮ್ಮ ತಾಯ್ನಾಡಿನ ಮೇಲಿನ ಆದರಾಭಿಮಾನದಿಂದ ಈ ಅಕ್ಷರಗಳು ಮೂಡಿ ನಿಂತಿಲ್ಲ.

ಇದಕ್ಕೊಂದು ದೃಷ್ಟಾಂತ- ಇಲ್ಲಿಯ ಈ ವೈದ್ಯರುಗಳ ಫಲಕಗಳಲ್ಲಿ ಕನ್ನಡದ ಅಕ್ಷರಗಳಿವೆ ಎಂಬುದೊಂದೇ ಸಮಾಧಾನ. ಇವು ಕನ್ನಡದ ಲಿಪಿಗಳೇ ಎಂದು ಕಂಡುಕೊಳ್ಳಲು ನಿಮಗೆ ಕನಿಷ್ಠ ಕಾಲುಗಂಟೆ ತಗುಲೀತು. ಇನ್ನು ಈ ಲಿಪಿಗಳಲ್ಲಿ ಏನು ಬರೆದಿದ್ದಾರೆ ಎಂಬುದನ್ನು ತಿಳಿದುಕೊಳ್ಳಲು ಪ್ರಾಕೃತ, ಹಳೆಗನ್ನಡವಲ್ಲದೇ ಇನ್ನೂ ಕೆಲ ದ್ರಾವಿಡ ಭಾಷೆಗಳ ಜ್ಞಾನವಿರಬೇಕಾದುದು ಅತ್ಯವಶ್ಯ. ಅಷ್ಟು ವಿರೂಪ-ಕುರೂಪವಾಗಿವೆ ಈ ಅಕ್ಷರಗಳು.

ಒಂದು ದಿನ ಇದೇ ವಿಷಯವನ್ನೆತ್ತಿಕೊಂಡು ಮೂರುಜನ ವೈದ್ಯ ಮಿತ್ರರುಗಳನ್ನು ಭೆಟ್ಟಿಯಾಗಿ ಮಾತು-ಮಾತಿಗೆ ಸೇರಿಸಿ, "ಈ ಅಕ್ಷರಗಳನ್ನೊಂದಿಷ್ಟು ಸುಧಾರಿಸಿಕೊಳ್ಳಬಾರದೇ?" ಎಂದು ಪ್ರಸ್ತಾಪಿಸಿದೆ. ಇದಕ್ಕೆ ಬಂದ ಪ್ರತಿಕ್ರಿಯೆಗಳು ಕನ್ನಡಿಗರ ಭಾಷಾ ಪ್ರೇಮಕ್ಕೆ ಸಂಕೇತದಂತಿದ್ದವು: "ಅದಕ್ಕೇನಂತೆ ಬಿಡಿ ಈಗ," ಎಂಬ ಉಡಾಫೆ ಒಬ್ಬರದು.

"ನಾವು ಕನ್ನಡದಲ್ಲಿ ಬರೆಸಿದ್ದೇವೆಂಬ ಸಮಾಧಾನ ನಮಗೆ ಮತ್ತು ನಮ್ಮ ರೋಗಿಗಳಿಗಾದರೆ ಆಯಿತಲ್ಲ, ಅವು ಎಂತಿದ್ದರೇನಪ್ಪಾ?" ಮಂಗಳೂರು ಕಡೆಯವರೊಬ್ಬರ ಸಮಾಧಾನ.

"ಮಿರಜದ ಪೇಂಟರುಗಳಿಗೆ ಗೊತ್ತಿರುವುದೇ ಇಂಥ ಅಕ್ಷರಗಳು" ಎಂಬ ನಾಟಕೀಯ ಅಸಹಾಯಕತೆ ಒಬ್ಬರದಾದರೆ, "ಅಲ್ಲಾ, ನಿಮ್ಮದೂ ಅತಿ ಆಯ್ತೆಪಾ; ಯಾವದ್ಕೂ ಇಷ್ಟು ಕೂಲಂಕಷ ಆದರ ಹೇಂಗ? ಇಷ್ಟೊಂದ ಸೆಂಟಿಮೆಂಟಲ್ ಆಗಬಾರ್ದೇನ್ರಪಾs" ಎಂಬ ಬುದ್ಧಿವಾದ ಮಗದೊಬ್ಬನದು.

'ಅಲ್ಲಯ್ಯಾ, ಯಾವನೋ ಒಬ್ಬ ಎಡಬಿಡಂಗಿ ನಿಮ್ಮ ತಾಯಿಯ ಹೆಸರನ್ನು ವಿಕೃತಗೊಳಿಸಿ ಕೂಗಿದರೆ ನಿಮಗೆ ಹ್ಯಾಗನ್ನಿಸುತ್ತದೆ? ಇಲ್ಲಿ ಸ್ವತಃ ನೀವೇ ನಿಮ್ಮ ತಾಯಿಯನ್ನು ವಿವಸ್ತ್ರಗೊಳಿಸಿ ವಿಕಾರಗೊಳಿಸಿ ಉಡಾಫೆ ಹೊಡೆಯುತ್ತಿದ್ದೀರಲ್ಲ, ನಿಮಗೇನನ್ನಬೇಕು?' ಎಂದು ಕಿರುಚಾಡಬೇಕೆನ್ನಿಸಿತು. ಆದರೂ ಸುಮ್ಮನಾದೆ- ಈಗಲೇ ಸೆಂಟಿಮೆಂಟಲ್ (ಫೂಲ್) ಎಂದಿದ್ದಾರೆ; ಇನ್ನು ಹುಚ್ಚರ ವಾರ್ಡಿಗೆ ನನ್ನನ್ನು ಸೇರಿಸಿಯಾರೆಂದು ಸುಮ್ಮನಾದೆ.

ಇದಕ್ಕೆ ವ್ಯತಿರಿಕ್ತವಾಗಿ ಕನ್ನಡ ಬಾರದ ಇಲ್ಲಿಯ ಮರಾಠಿಭಾಷಿಕ ವೈದ್ಯರು ವ್ಯವಹಾರಕ್ಕೆ ಉಪಯೋಗವಾಗುವಷ್ಟು, ಮಾತನಾಡುವ ಮಟ್ಟಿಗೆ ಕನ್ನಡ ಕಲಿಯಲೆಂದೇ ಕ್ಲಾಸುಗಳಿಗೆ ಸೇರಿಕೊಂಡಿದ್ದಾರೆ. ಒಂದೇ ಸೂರಿನಡಿ ಒಂದೇ ಕೆಲಸ ಮಾಡುತ್ತಿರುವ ಇವರಿಬ್ಬರ ಮನೋಭೂಮಿಕೆಯಲ್ಲಿ ಎಷ್ಟು ಅಂತರ ನೋಡಿ- ಅವರು ಕಾರ್ಯವಾಸಿ ಈ ಭಾಷೆಯ ಶಬ್ದ ಮಾತ್ರ ಕಲಿಯಲು ತಯಾರು; ಇವರು ತಮ್ಮ ತಾಯನ್ನು ಬೀದಿಗೆ ನಿಲ್ಲಿಸಲೂ ಹೇಸರು. ಒಂದೇ ಮರದ ಎರಡು ಟೊಂಗೆಗಳ ಹಣ್ಣಿನ ರುಚಿಯಲ್ಲಿ ಅದು ಹೇಗೆ ಇಷ್ಟೊಂದು ವ್ಯತ್ಯಾಸ?

ಇಲ್ಲೆಲ್ಲ ಅಲೆದಾಡಿದ ಕಿವುಡ-ಕುರುಡರಿಗೂ ಶ್ರುತವಾಗುವ ಒಂದು ನಿತ್ಯಸತ್ಯವೆಂದರೆ ಗಡಿಯಾಚೆಗೆ ಮತ್ತು ಗಡಿಯೀಚೆಗೆ ನೆಲೆಸಿರುವ ಎಲ್ಲಾ ಮರಾಠಿಗರಿಗೂ ತಮ್ಮ ಭಾಷೆ ಮರಾಠಿ, ತಮ್ಮ ನಿತ್ಯ ಜೀವನದ, ಇಲ್ಲಿಯ ಜನಜೀವನದ ಒಂದು ಅಂಗವೇ ಆಗಿದೆ ಮತ್ತು ಈ ಸೀಮಾಭಾಗದ ಒಟ್ಟು ಕನ್ನಡಿಗರಿಗೆ ಕನ್ನಡ ಒಂದು ಭಾಷೆಯಾಗಿ ಮಾತ್ರ, ಸಂಪರ್ಕ ಮಾಧ್ಯಮದ ಕೇವಲ ಒಂದು ಸಾಧನ ಮಾತ್ರವಾಗಿ ಉಳಿದುಕೊಂಡಿದೆ.

**ಸೀಮಾಭಾಗದ ಕನ್ನಡಿಗರು ತಮ್ಮ ಎಲ್ಲ ವ್ಯವಹಾರವನ್ನೂ ಮಾತೃಭಾಷೆಯಲ್ಲಲ್ಲ, ಮರಾಠಿಯಲ್ಲಿಯೇ ಮಾಡುತ್ತಾರೆ.**

ಮಹಾರಾಷ್ಟ್ರದಲ್ಲೆಲ್ಲ ವ್ಯಾವಹಾರಿಕ ಭಾಷೆ ಮರಾಠಿ. ಇಲ್ಲಿ ನೀವು ಪೇಟೆಗೆ ಹೋದರೆ ಮರಾಠಿಯಲ್ಲಿಯೇ ಸೋಪು ಕೇಳಬೇಕು. ಸಂತೆಯಲ್ಲಿ ಸೊಪ್ಪು ಮರಾಠಿಯಲ್ಲಿಯೇ ದೊರೆಯುತ್ತದೆ. ನೀವು ಅಲ್ಲಿಯ ಒಂದು ಕಚೇರಿಗೆ ಹೋದರೆ ಜವಾನ ಮುಸಲ್ಮಾನನಾಗಿದ್ದರೂ ಜವಾಬು ಮರಾಠಿಯಲ್ಲಿಯೇ, ಗುಮಾಸ್ತ ತಮಿಳು ಸಂಜಾತನಾಗಿದ್ದರೂ ಗಿಂಬಳ ಮರಾಠಿಯಲ್ಲಿಯೇ, ಸಾಹೇಬ

ಕ್ರಿಶ್ಚಿಯನ್ ಆಗಿದ್ದರೂ ನೀವು ಮರಾಠಿಯಲ್ಲಿಯೇ ಸಲಾಮು ಹಾಕುತ್ತೀರಿ. ಅಂದರೆ ಇದರರ್ಥ ಇಲ್ಲಿ ಇಂಥ ಲಿಖಿತ ಸರಕಾರಿ ನಿಯಮವಿದೆ ಎಂದೇನೂ ಅಲ್ಲ, ಯಾವುದೋ ಉಗ್ರಗಾಮಿ ಸಂಘಟನೆ ಇಂಥ ಕಟ್ಟಳೆ ಹೊರಡಿಸಿದೆ ಎಂತಲೂ ಅಲ್ಲ, ಎಲ್ಲ ಅತ್ಯಂತ ಸಹಜವಾಗಿ ಈ ಕ್ರಿಯೆ ನಡೆದು ಹೋಗುತ್ತದೆ. ಆದರೆ ನಮ್ಮಲ್ಲಿ ಯಾವುದೋ ಒಂದು ರೇಲ್ವೆ ಸ್ಟೇಶನ್ನಿನಲ್ಲೋ ಬಸ್‌ಸ್ಟ್ಯಾಂಡಿನಲ್ಲೋ ನೀವು ಇಳಿದಿರಾದರೆ ಅದು ಗಡಿನಾಡೇ ಇರಲಿ, ನಡುನಾಡೇ ಇರಲಿ-ರಿಕ್ಷಾದವನ ಜತೆ ಆತ ಕನ್ನಡದಲ್ಲಿ ಕೇಳಿದರೂ ನಿಮ್ಮ ಹರಕು ಮುರುಕು ಉರ್ದುವಿನಲ್ಲೇ ನೀವು ಉತ್ತರಿಸುತ್ತೀರಿ. ಅಂಗಡಿಯವ ಮಾರ್ವಾಡಿಯಾಗಿದ್ದರೆ ನಿಮ್ಮ ತೇಪೆ ಹಾಕಿದ ಹಿಂದಿ ಪ್ರಸ್ತುತಪಡಿಸುತ್ತೀರಿ, ತರಕಾರಿಯವರ ಜತೆ ಮರಾಠಿಯಲ್ಲಿ ಎಳಸುತ್ತೀರಾದರೆ, ಥ್ರೀಸ್ಟಾರ್, ಫೈವ್‌ಸ್ಟಾರ್ ಹೊಟೇಲಿಗೆ ಹೋದಾಕ್ಷಣ ಅಲ್ಲಿಯ ವೇಟರ್‌ನಿಂದ ಹಿಡಿದು ಮ್ಯಾನೇಜರ್‌ವರೆಗೆ ನೀವು ಇಂಗ್ಲೀಷಿನಲ್ಲಿಯೇ ಘಳಘಳಿಸುತ್ತೀರಿ. ಅಲ್ಲಿ ಎಲ್ಲಾ ಜಾತಿ, ಧರ್ಮದವರೂ, ವಿವಿಧ ದೇಶ-ಪ್ರದೇಶಗಳಿಂದ ಬಂದು ನೆಲೆಸಿದವರೂ ಆ ನೆಲದ ಭಾಷೆಯಲ್ಲಿ ವ್ಯವಹರಿಸಬಲ್ಲರು. ವ್ಯವಹರಿಸದೇ ನಿರ್ವಾಹವಿಲ್ಲ. ಇಲ್ಲಿ ಶತಶತಮಾನಗಳಿಂದ ಇದೇ ನೆಲದಲ್ಲಿ ನೆಲೆಸಿರುವ ಮರಾಠಿಗರಿಗೂ ಕನ್ನಡ ಬಾರದು. ತಲೆತಲಾಂತರದಿಂದ ಇಲ್ಲಿಯೇ ಬಾಳಿ ಬದುಕುತ್ತಿರುವ ಕೆಲ ಮುಸ್ಲಿಂ ಬಾಂಧವರಿಗೆ ಕನ್ನಡದ ಕನಿಷ್ಠ ಪರಿಜ್ಞಾನವೂ ಇಲ್ಲ. ಎಲ್ಲಕ್ಕೂ ಮಿಗಿಲಾದ ವಿಶೇಷವೆಂದರೆ ಇದೆಲ್ಲ ನಮಗೆಂದೂ ವಿಚಿತ್ರವಾಗಿ ಕಂಡೇಇಲ್ಲ.

ಇಲ್ಲಿ ತನ್ನ ಇಡೀ ಸೇವಾಜೀವನವನ್ನೆಲ್ಲ ಕರ್ನಾಟಕ ಸರಕಾರಕ್ಕೆ ಧಾರೆ ಎರೆದು ನಮ್ಮ ಸಾಹೇಬರ ಸಾಹೇಬರಾಗಿ ಮೆರೆದ ಕನ್ನಡ ಬಾರದ ನೂರಾರು ಐ.ಎ.ಎಸ್. ಅಧಿಕಾರಿಗಳನ್ನು ಹೆಸರಿಸಬಹುದು. ನಮ್ಮ ರಾಜ್ಯದ ಮುಖ್ಯಮಂತ್ರಿಯಿಂದ ಹಿಡಿದು ಮೂಕ ಮಂತ್ರಿಗಳ ತನಕ ಪ್ರತಿಯೊಬ್ಬರೂ-'ಈ ರಾಜ್ಯದ ಆಡಳಿತ ಕನ್ನಡದಲ್ಲಿಯೇ' ಎಂದು ಭಾಷಣ ಮಾಡಿದ್ದು ಮರೆಯಲಾರದಷ್ಟು ಸಾರಿ. ಮೇಜು ಗುದ್ದಿದ್ದು ಎಣಿಸಲಾಗದಷ್ಟು ಬಾರಿ. ಆದರೆ ಇದೇ ಕರ್ನಾಟಕ ಸರಕಾರದ ಛತ್ರದಡಿ ಕನ್ನಡ ಓದಲು-ಬರೆಯಲು ಬಾರದ, ಕನ್ನಡದಲ್ಲಿ ಮಾತನಾಡುವಷ್ಟೂ ಪರಿಜ್ಞಾನವಿರದ ನೌಕರರು ಚಪರಾಸಿಗಳಾಗಿ, ಗುಮಾಸ್ತರಾಗಿ, ಗೌರವಾನ್ವಿತ ಅಧಿಕಾರಿಗಳಾಗಿ ತಮ್ಮ ಅಮೂಲ್ಯ ಸೇವೆ ಸಲ್ಲಿಸಿದವರು ಅದೆಷ್ಟೋ ಜನ.

ಕನ್ನಡ ಆಡಳಿತ ಭಾಷೆಯಾಗುವಲ್ಲಿ ಐ.ಎ.ಎಸ್. ಅಧಿಕಾರಿಗಳೇ ಪ್ರಮುಖ ಅಡ್ಡಿ ಎಂಬ ಅರ್ಥಬರುವ ಮಾತುಗಳನ್ನು ನಮ್ಮ ಆಡಳಿತಗಾರರಿಂದಲೂ ಕನ್ನಡದ ಹೋರಾಟಗಾರರಿಂದಲೂ ಅಲ್ಲಲ್ಲಿ ಕೇಳುತ್ತಲೇ ಬಂದಿದ್ದೇವೆ. ಇದರಲ್ಲಿ ಸತ್ಯಾಂಶ ಇರುವುದು ದಿಟವಾದರೂ ಇದಕ್ಕೆ ವ್ಯತಿರಿಕ್ತವಾದ ಪ್ರಸಂಗವೊಂದನ್ನಿಲ್ಲಿ ನೀಡುತ್ತಿದ್ದೇನೆ. ಈ ಹಿಂದೊಮ್ಮೆ ಭವ್ಯ ಕಾರ್ಯಕ್ರಮವೊಂದಕ್ಕೆ ಆಹ್ವಾನಿತನಾಗಿದ್ದೆ. ವೇದಿಕೆಯಲ್ಲಿದ್ದವರು ಬೆಳಗಾವಿ ಜಿಲ್ಲೆಯ ಜಿಲ್ಲಾಧಿಕಾರಿಗಳು, ಜಿಲ್ಲಾ ಪರಿಷತ್ ಮುಖ್ಯಕಾರ್ಯದರ್ಶಿಗಳು, ಒಬ್ಬಿಬ್ಬರು ಸಾಂಸದರು, ಕೆಲಜನ ಶಾಸಕರು ಮತ್ತೆ ಕೆಲ ಪ್ರಮುಖರು. ಜಿಲ್ಲಾಧಿಕಾರಿಗಳು ಮತ್ತು ಮುಖ್ಯ ಕಾರ್ಯದರ್ಶಿಗಳು ಸ್ವಚ್ಛವಾದ ಕನ್ನಡದಲ್ಲಿ ಸ್ಫುಟವಾಗಿ ತಮಗೆ ಹೇಳಬೇಕಾದುದನ್ನು ಹತ್ತತ್ತು ನಿಮಿಷಗಳಲ್ಲಿ ಹೇಳಿ ಮುಗಿಸಿದರು. ಇವರಿಬ್ಬರೂ ತರುಣ ಐ.ಎ.ಎಸ್. ಅಧಿಕಾರಿಗಳು-ಒಬ್ಬರು ಪಂಜಾಬ್ ಕೇಡರ್‌ನಿಂದ ಬಂದವರಾದರೆ ಇನ್ನೊಬ್ಬರು ಬಿಹಾರ್ ಕೇಡರ್‌ನವರು. ನಂತರ ಮಾತನಾಡಲು ನಿಂತ ಶಾಸಕರು ನಿರರ್ಗಳವಾಗಿ ಅರ್ಧಗಂಟೆಯವರೆಗೆ ಮರಾಠಿಯಲ್ಲಿ ಕೊರೆದರು. (ಮರೆಯದಿರಿ- ಈ ಶಾಸಕರು ಮಹಾರಾಷ್ಟ್ರ ಏಕೀಕರಣ ಸಮಿತಿಯವರಲ್ಲ) ಆ ಇಬ್ಬರು ಅಧಿಕಾರಿಗಳಿಗೆ ನಾಲ್ಕಾರು ವರುಷಗಳಲ್ಲಿ ಕಲಿಯಲು ಸಾಧ್ಯವಾದದ್ದು, ಇಲ್ಲಿಯೇ ಹುಟ್ಟಿ, ಇಲ್ಲಿಯೇ ಬೆಳೆದು, ಕನ್ನಡಿಗರ ಮತಗಳಿಂದಲೇ ಕರ್ನಾಟಕದ ಶಾಸಕಗಿರಿಯನ್ನು ಚಪ್ಪರಿಸುತ್ತಿರುವ ಈ ಶಾಸಕರಿಗೆ ಹೇಗೆ ಸಾಧ್ಯವಾಗಲಿಲ್ಲ? ಕನ್ನಡ ಕಲಿಯುವ ಅವಶ್ಯಕತೆಯನ್ನು ನಮ್ಮಂಥ ಮೂರ್ಖ ಮತದಾರರು ಅವರಿಗೆ ಮನಗಾಣಿಸಿ ಕೊಡದೇ

ಹೋದುದರಿಂದ!

ಇಂದು ಮಹಾರಾಷ್ಟ್ರದಲ್ಲಿ, ತಮಿಳುನಾಡಿನಲ್ಲಿ ವಸ್ತುಸ್ಥಿತಿ ಹೇಗಿದೆ ಎಂದರೆ ಅಲ್ಲಿ ಹೋಗಿ ನೆಲೆಸಿರುವ ಹೊರನಾಡಿನವರು ಅಲ್ಲಿಯ ವಿಧಾನ ಸಭೆ ಅಥವಾ ಲೋಕಸಭೆಗೆ ಸ್ಪರ್ಧಿಸಬಯಸಿದರೆ, ಅವರು ಮಾಡಬೇಕಾದ ಮೊದಲ ಕೆಲಸ ಅಲ್ಲಿಯ ಮಣ್ಣಿಗೆ, ಅಲ್ಲಿಯ ಭಾಷೆಗೆ, ಆ ಮಣ್ಣಿನ ಸಂಸ್ಕೃತಿಗೆ ತಮ್ಮ ನಿಷ್ಠೆ-ಬದ್ಧತೆಗಳನ್ನು ಬಹಿರಂಗ ವಾಗಿ ಪ್ರಕಟಿಸಬೇಕಷ್ಟೇ ಅಲ್ಲ ಅದನ್ನು ಸಂದೇಹಾ ತೀತ ಎನ್ನುವಂತೆ ಸಾಬೀತುಗೊಳಿಸಬೇಕು. ಹೀಗೆ ಸಾಬೀತುಪಡಿಸಲು ಬಹುಪಾಲು ಜನ ಆಯ್ದು ಕೊಂಡ ಸುಲಭ ವಿಧಾನವೆಂದರೆ-ನಿಮ್ಮ ಕ್ಷೇತ್ರದಲ್ಲಿ ನೀವೊಂದು ಕನ್ನಡ ವಿರೋಧಿ ಜಾಥಾ ಆಯೋ ಜಿಸುವುದು, ಅದರ ನೇತೃತ್ವವನ್ನು ಸ್ವತಃ ನೀವೇ ವಹಿಸುವುದು- ಆರ್ಥಾತ್ ಅಲ್ಲಿ ದೊಂಬಿ, ಲೂಟಿ ಗಳೇನಾದರೂ ಘಟಿಸಿದರೆ, ನೀವು ಸ್ವಭಾಷಾಬಾಂ ಧವರನ್ನು ಲೂಟಿ ಮಾಡಬೇಕಾದುದು ನಿಮ್ಮ ಕರ್ಮವೇ. ರಾಜಕೀಯದ ಚದುರಂಗದಾಟದಲ್ಲಿ ಇದೆಲ್ಲ ಸಹಜವಾಗಿ ಬರಿಗಣ್ಣಿಗೆ ಕಾಣಬಹುದಾ ದರೂ, ಕನ್ನಡಿಗರೇ ಬಹುಸಂಖ್ಯೆಯಲ್ಲಿರುವ ಕ್ಷೇತ್ರ ಗಳಲ್ಲೂ ಇಂಥ ಘಟನೆಗಳು ಘಟಿಸುತ್ತಲಿರುವುದು ದಿಗಿಲು ಹುಟ್ಟಿಸುವಂಥದು. ಇಲ್ಲಿ ಭಾಷೆಯ ಭಾವುಕತೆಯನ್ನೇ ಬಂಡವಾಳವಾಗಿಸಿಕೊಂಡು ಶಾಸಕರಾದ, ಆಗುತ್ತಿರುವ ಮರಾಠಿಗರ, ತಮಿಳರ ಪಟ್ಟಿ ದೊಡ್ಡದಿದೆ. ಅಲ್ಲಿ-ನಿಮ್ಮ ಭಾಷೆಯನ್ನೇ ಮೊದಲು ಬಹಿರಂಗವಾಗಿ ವಸ್ತ್ರಾಪಹರಣಕ್ಕೆ ಗುರಿ ಪಡಿಸುವ ಅನಿವಾರ್ಯತೆ ಇದೆ. ಅಲ್ಲಿ- 'ನನ್ನ ಮಾತೃಭಾಷೆ ಕನ್ನಡ' ಎಂದು ಬಹಿರಂಗವಾಗಿ ಹೇಳಿದ ಒಂದೇ ಒಂದು ಸಾರ್ವಜನಿಕ ಜೀವನದ ವ್ಯಕ್ತಿಯ ಹೆಸರೂ ಕೇಳಸಿಗದು, ಇಲ್ಲಿ- ಈ ನೆಲಕ್ಕೆ ದ್ರೋಹ ಬಗೆಯುತ್ತೇನೆಂಬ ಏಕಮಾತ್ರ 'ಧೀರೋ ದಾತ್ತ' ಧ್ಯೇಯ ಪ್ರಕಟಿಸಿಯೇ ಶಾಸಕಗಿರಿ ಗಿಟ್ಟಿಸಿದ ವರಿದ್ದಾರೆ. ಕನ್ನಡಕ್ಕೆ ಧಿಕ್ಕಾರ ಕೂಗುತ್ತಲೇ ವಿಧಾನ ಸೌಧದ ಕಟ್ಟೆ ಹತ್ತಿದವರಿದ್ದಾರೆ; 'ನನಗೆ ಕನ್ನಡ ಬಾರದು' ಎಂದು ಹೆಮ್ಮೆಯಿಂದಲೆಂಬಂತೆ ಹೇಳಿ ಕೊಳ್ಳುತ್ತಲೇ ಮಂತ್ರಿಗಿರಿಯನ್ನು ಸವಿದವರು ಎಲ್ಲಾ ಪಕ್ಷಗಳಲ್ಲೂ ಕಾಣಸಿಗುತ್ತಾರೆ.

ಸರಿಸುಮಾರು ನಾಲ್ಕು ದಶಕಗಳ ಕರ್ನಾಟಕದ ಇತಿಹಾಸದಲ್ಲಿ ಬಹುಶಃ ಕನ್ನಡದ ಪರಿಜ್ಞಾನವಿರದ ವರು, ಬಹುಶಃ ಕನ್ನಡ-ಸಂಸ್ಕೃತಿ ಇಲಾಖೆ ಮತ್ತು ಮುಖ್ಯಮಂತ್ರಿ ಪದ ಇವೆರಡನ್ನು ಹೊರತುಪಡಿಸಿ, ಇನ್ನುಳಿದ ಎಲ್ಲಾ ಪದವಿಗಳನ್ನೂ ಪಡೆದ, ಎಲ್ಲಾ ಖಾತೆಗಳನ್ನೂ ನಿರ್ವಹಿಸಿದ ಸತ್ಯವನ್ನು ಪುರಾವೆಗ ಳೊಂದಿಗೆ ಶ್ರುತಪಡಿಸೋಣ. ಹಾಗಿದ್ದರೆ ಇವೆರಡೇ 'ಅಧಿಕಾರ ಪೀಠಗಳು' ಕನ್ನಡಿಗರು ಉದಾರರು, ಧಾರಾಳರು ಎಂಬ ಹೆಗ್ಗಳಿಕೆಗೆ ಯಾಕೆ ಕಳಂಕ ತರಬೇಕು? ನಾವೆಲ್ಲ ಒಗ್ಗೂಡಿ ತನಗೆ ಕನ್ನಡ ಬಾರದೆಂದು ಬಡಾಯಿ ಕೊಚ್ಚಿಕೊಳ್ಳುವವರನ್ನು ಸಮಯ ಕೂಡಿ ಬಂದಾಗ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಮಂತ್ರಿಗಿರಿಗೇರಿಸಲು ಶ್ರಮಿಸೋಣ! ಭಾಷೆ, ಮತ, ಪಂಥಗಳಿಗೆಲ್ಲ ಹೊರತಾದ ನಾಡ ನಮ್ಮದು ಎಂದು ಶ್ರುತಪಡಿಸಲು ಇಲ್ಲಿಯ ಮುಖ್ಯ ಮಂತ್ರಿ ಪದವೂ ಹೊರತಾಗಿಲ್ಲ ಎಂದು ಸೋದಾ ಹರಣವಾಗಿ ಸಿದ್ಧಗೊಳಿಸುವಲ್ಲಿ ಒಕ್ಕಟ್ಟಿನಿಂದ ಪ್ರಯತ್ನಿಸೋಣ!

**ಅಲ್ಲಿ ನಿಮ್ಮ ಭಾಷೆಯನ್ನೇ ಮೊದಲು ಬಹಿರಂಗವಾಗಿ ವಸ್ತ್ರಾಪಹರಣಕ್ಕೆ ಗುರಿಪ ಡಿಸುವ ಅನಿವಾರ್ಯತೆ ಇದೆ.**

### ಆಡಳಿತ ಭಾಷೆ

ಮಹಾರಾಷ್ಟ್ರದಲ್ಲೆಲ್ಲಡೆ ಸಿಂಧುದುರ್ಗದಿಂದ ರಾಯಗಡದವರೆಗೆ, ಕೊಲ್ಹಾಪುರದಿಂದ ನಾಗಪುರ ದವರೆಗೆ, ಮುಂಬಯಿಯಿಂದ ಲಾತೂರದವರೆಗೆ ಹೀಗೆ ಈ ಇಡೀ ರಾಜ್ಯದಲ್ಲಿ, ರಾಜ್ಯ ಸರಕಾರಿ ಕಚೇರಿಗಳಲ್ಲಿ ಮತ್ತು ಹೆಚ್ಚಿನ ಕೇಂದ್ರ ಸರಕಾರದ ಕಚೇರಿಗಳಲ್ಲೂ ನಿಮಗೆ ಬೇಕಾದ ಕಾಗದ ಪತ್ರಗಳು ಮರಾಠಿಯಲ್ಲಿ ದೊರಕುತ್ತವೆ. ಇದಕ್ಕೆ ಗಡಿನಾಡು, ಒಳನಾಡು ಎಂಬ ಭೇದವಿಲ್ಲ, ಹಳ್ಳಿ-ಪಟ್ಟಣಾಗ ಳೆಂಬ ತಾರತಮ್ಯವಿಲ್ಲ. ಆದರೆ ನಮ್ಮಲ್ಲಿ ನೀವು ಯಾವ ಭಾಷೆಯಲ್ಲಿ ನಿಮ್ಮ ಅಹವಾಲನ್ನು ಬರೆದಿ ರುತ್ತೀರಿ ಎಂಬುದರ ಮೇಲೆ ನಿಮ್ಮ ಶಿಕ್ಷಣ,

ಸಂಸ್ಕಾರಗಳನ್ನು ಅಳಿಯಲಾಗುತ್ತದೆ, ನಿಮ್ಮ ವ್ಯಕ್ತಿತ್ವವನ್ನು ಶ್ರೇಣೀಕರಿಸಲಾಗುತ್ತದೆ. ಇಂದಿಗೂ ಹಳ್ಳಿಯ ಅಮಾಯಕನಿಗೂ ಇಂಗ್ಲೀಷಿನ ಪರಿಪತ್ರವನ್ನೇ ಕೈಗೆ ನೀಡಿ ಕಳುಹಲಾಗುತ್ತಿದೆ. ಗಡಿ ಭಾಗದಲ್ಲಿ ಸಂಬಂಧಿಸಿದ ಎರಡೂ ಭಾಷೆಗಳಲ್ಲಿಯ ಅಹವಾಲುಗಳನ್ನು ಸ್ವೀಕರಿಸಲಾಗುತ್ತದೆ. 'ತಮ್ಮ ಪರಿಪತ್ರವನ್ನು ಕನ್ನಡದಲ್ಲಿ ನೀಡಿ' ಎಂದು ವಿನಂತಿಸಿಕೊಂಡರೂ, 'ನನಗೆ ಕನ್ನಡ ಬಾರದು' ಎಂದು ನಿಮ್ಮ ಮುಖಕ್ಕೆ ಉಗಿದಂತೆ ಹೇಳಿ, ಮರಾಠಿಯಲ್ಲಿ ನಿಮಗೆ ಬೇಕಾದ ಪರಿಪತ್ರ ನೀಡುವ ಘನ ಕರ್ನಾಟಕ ಸರಕಾರದ ಘನ ನೌಕರರು ಅದೆಷ್ಟೋ ಜನ. ಅಲ್ಲಿ ಕನ್ನಡದಲ್ಲಿಯೇ ಅಕ್ಷರಾಭ್ಯಾಸಮಾಡಿ, ಪದವಿ ಪಡೆದು, ಕನ್ನಡ ಪ್ರದೇಶದಲ್ಲಿಯೇ ಅಧಿಕಾರವಹಿಸಿಕೊಂಡಾಗಲೂ, ಕನ್ನಡದಲ್ಲಿ ಬರುವ ಅಹವಾಲುಗಳನ್ನು, ಅವರ ಮುಖಕ್ಕೆ ಎಸೆಯಬೇಕಾದ ಅನಿವಾರ್ಯತೆ ಇದೆ.

ಕರ್ನಾಟಕದಲ್ಲಿ ಆಡಳಿತದಲ್ಲೆಲ್ಲ ಕನ್ನಡ ಎಂದು ದಶಕಗಳಿಂದ ವರುಷ ವರುಷವೂ ಗ್ರಾಮ ಪ್ರಜಾಪಿತನಿಂದ ರಾಜಪುರೋಹಿತನವರೆಗೆ ಹಲವಾರು ಬಾರಿ, ವಿಭಿನ್ನ ಸ್ತರಗಳಲ್ಲಿ ಮಂತ್ರ ಉದ್ಧರಿಸಿದ್ದೇ ಉದ್ಧರಿಸಿದ್ದು. ಆದರೆ ಮಂತ್ರಕ್ಕಿಂತ ಉಗುಳೇ ಹೆಚ್ಚು. ಈ ವಿಷಯಕ್ಕೆ ಮಹಾರಾಷ್ಟ್ರದಲ್ಲಿ ಮೌನಯಜ್ಞ, ಮಂತ್ರಕ್ಕೆ ಅವಕಾಶವಿಲ್ಲದ ಮೇಲೆ ಉಗುಳಿಗೆಲ್ಲಿಯ ಆಸ್ಪದ?"

## ವಾಣಿಜ್ಯ

ಒಂದು ಕಾಲವಿತ್ತು. ಮೆಣಸಿನಕಾಯಿಗೆ ದೊಡ್ಡ ಮತ್ತು ಉತ್ತಮ ಮಾರುಕಟ್ಟೆಯೆಂದರೆ ನಿಪ್ಪಾಣಿ. ಮಹಾಲಿಂಗಪುರ ಬೆಲ್ಲದ ಅತಿ ದೊಡ್ಡ ವ್ಯಾಪಾರಿ ಕೇಂದ್ರ. ಇದು ಮುಂಬಯಿಯ ಕರ್ನಾಟಕದ ಈ ಭಾಗ ಬೇರ್ಪಡುವುದಕ್ಕೂ ಮುಂಚೆ ಮತ್ತು ಬೇರ್ಪಟ್ಟ ನಂತರದ ಪ್ರಾರಂಭದ ವರುಷಗಳಲ್ಲಿ. ಇಂದು? ಇನ್ನುಳಿದ ಪ್ರದೇಶಗಳನ್ನು ಒತ್ತಟ್ಟಿಗಿಡಿ. ಮಹಾಲಿಂಗಪುರದ ಕೂಗಳತೆಯಲ್ಲಿ ತಯಾರಾಗುವ ಬೆಲ್ಲವೂ ಸಾಂಗಲಿ ಪೇಟೆಗೆ ಹೋಗುತ್ತಿದೆ. ಸಂಕೇಶ್ವರದಲ್ಲಿ ಸುಂದರ ಗೇಟಿನ ಮೇಲೆ 'ಕಿತ್ತೂರ ಚನ್ನಮ್ಮ ಮಾರುಕಟ್ಟೆ' ಎಂಬ ಫಲಕವೇನೋ ರಾರಾಜಿಸುತ್ತಿದೆ. ಒಳಗೆಲ್ಲ ಹಾಳುಸುರಿಯುತ್ತಿರುವ ಭಯಾನಕ ಮೌನ. ಅಂದು ನೂರಾರು ಮೈಲಿ ದೂರದಿಂದ ಸಂಕೇಶ್ವರಕ್ಕೆ ಬರುತ್ತಿದ್ದ ಮೆಣಸಿನ ಕಾಯಿ ಮೂಟೆಗಳು, ಇಂದು ಕಿತ್ತೂರ ಚನ್ನಮ್ಮ ಮಾರುಕಟ್ಟೆಯ ಎದುರಿನಿಂದಲೇ ಸಂಕೇಶ್ವರ ದಾಟಿ ಗಡಹಿಂಗ್ಲಜಕ್ಕೆ ಹೋಗುತ್ತಿರುವುದನ್ನು ಅಸಹಾಯಕತೆಯಿಂದ ನೋಡುತ್ತ ನಿಲ್ಲುವ ಪರಿಸ್ಥಿತಿ ಕನ್ನಡಿಗನದಾಗಿದೆ. ನಿಪ್ಪಾಣಿಯಲ್ಲಿ ಅಂದಿನ ಆ ಪೇಟೆಯ ಅವಶೇಷವೂ ಉಳಿದಿಲ್ಲ.

ಒಂದೆರಡು ದಶಕಗಳಲ್ಲಿಯೇ ಪರಿಸ್ಥಿತಿ ಇಷ್ಟೊಂದು ಪಲ್ಲಟವಾಗಲು ಏನು ಕಾರಣ? ಇಂದು ಇಡೀ ಕರ್ನಾಟಕದ ಸೀಮಾಪಟ್ಟಿಯಲ್ಲಿ ಕೃಷಿ ಹುಟ್ಟುವಳಿಗಳ ಒಂದೇ ಒಂದು ಪ್ರಮುಖ ಮಾರುಕಟ್ಟೆಯೂ ಇಲ್ಲದಂಥ ದಯನೀಯ ಸ್ಥಿತಿಗೆ ಯಾರು ಹೊಣೆ?

ಇದುವರೆಗಿನ ಕರ್ನಾಟಕದ ಎಲ್ಲಾ ಸರಕಾರಗಳು ಮತ್ತು ಅವುಗಳ ಅವಾಸ್ತವಿಕ ದೃಷ್ಟಿಕೋನ. ಕರ್ನಾಟಕದಲ್ಲಿ ಇಂದು ಸುಮಾರು ಎಲ್ಲ ಕೃಷಿ ಹುಟ್ಟುವಳಿಗಳ ಮೇಲೆಯೂ ಶೇಕಡಾ ೨ ರಿಂದ ೪ ರಷ್ಟು ಕರಾಕರಣಿ ಇದ್ದರೆ, ಮಹಾರಾಷ್ಟ್ರ ರಾಜ್ಯ ಸರಕಾರ ಹೆಚ್ಚಿನಂಶ ಒಕ್ಕಲುತನ ಉತ್ಪನ್ನಗಳಿಗೆ ತೆರಿಗೆಯಿಂದ ವಿನಾಯಿತಿ ನೀಡಿದೆ. ಹೀಗಾಗಿ ಇಂದು ಈ ಭಾಗದ ಕನ್ನಡಿಗರಿಗೆ ತಮ್ಮ ದಿನ ನಿತ್ಯದ ಬಳಕೆಗೆ ದವಸಧಾನ್ಯ ಬೇಕಾದರೆ ನಮ್ಮ ಗಣಿಗಳಿಂದ ಅದಿರು ಸಾಗಿಸಿ, ಅಲ್ಲಿಂದ ಮತ್ತೆ ಅದೇ ತವರನ್ನು ತವರಿಗೆ ತಂದಂಥ-ಪರಿಸ್ಥಿತಿಯಿದೆ.

ಈ ವಿಷಯದ ಬಗ್ಗೆ ಈ ಭಾಗದ ಅನೇಕ ವಾಣಿಜ್ಯ ಸಂಸ್ಥೆಗಳು ಸರಕಾರದ ಗಮನ ಸೆಳೆದರೂ, ಆಯಾ ಗಡಿಗಳಲ್ಲಿ ನೆರೆರಾಜ್ಯದ ತೆರಿಗೆ ನೀತಿಗೆ ಅನುರೂಪವಾದಂಥ, ವಾಸ್ತವ ಪರಿಸ್ಥಿತಿಗೆ ಪೂರಕವಾಗಿದ್ದು ನಮ್ಮ ರಾಜ್ಯದಲ್ಲಿಯ ವ್ಯಾಪಾರ-ವಹಿವಾಟಿಗೆ ಪ್ರೋತ್ಸಾಹಕವಾಗುವಂಥ ತೆರಿಗೆ ನೀತಿಯನ್ನು ಜಾರಿಗೆ ತರಬೇಕೆಂದು ಒತ್ತಾಯಿಸುತ್ತಲೇ ಬಂದಿದ್ದರೂ ನಮ್ಮ ರಾಜ್ಯ ಸರಕಾರಕ್ಕಿದು ಸರಿಯಾದ ಬೇಡಿಕೆ ಎನ್ನಿಸಲೇ ಇಲ್ಲ.

ಇಂದು ಮಹಾರಾಷ್ಟ್ರದ ಸೀಮಾಭಾಗದ ಮಾರುಕಟ್ಟೆಗಳಿಗೆ ಹೋಗಿ ನೋಡಿ. ಹಮಾಲರು, ಚಕ್ಕಡಿಯಿಟ್ಟವರು, ತಳ್ಳುಗಾಡಿಯವರೆಲ್ಲ ಕನ್ನಡಿಗರೇ, ಇವರೆಲ್ಲ ಇಲ್ಲಿಂದ ಉದ್ಯೋಗ ಅರಸಿ ಗುಳೆ ಎದ್ದು ಹೋದವರೇ.

### ಶಿಕ್ಷಣ

ಇಂದಿನ ಶಿಕ್ಷಣವೇ ಒಂದು ನಾಡಿನ ಮುಂದಿನ ಪೀಳಿಗೆಯ ಸಂಸ್ಕಾರವನ್ನು ನಿರ್ಣಯಿಸುತ್ತದೆ. ಅದರ ನಾಡಿಸ್ಪಂದನವನ್ನೇ ಬದಲಿಸುವ ಶಕ್ತಿ ಶಿಕ್ಷಣಕ್ಕಿದೆ.

ಈ ಕಾರಣಕ್ಕೆಂದೇ ಕೆಲ ಸರಕಾರಗಳು ಅಧಿಕಾರವಹಿಸಿಕೊಂಡಾಕ್ಷಣ ಶಾಲೆಯ ಪಠ್ಯಪುಸ್ತಕಗಳಿಗೆ ತಾನು ನಂಬಿದ 'ಇಜಂ'ನ ಬಣ್ಣ ಬಳಿಯಲು ಮೊದಲುಮಾಡುತ್ತವೆ. ಪಠ್ಯಕ್ರಮಗಳಲ್ಲಿ ತನ್ನ ನೀತಿ-ಧೋರಣೆಗಳನ್ನು ಬಿಂಬಿಸಲು ಕ್ರಮ ತೆಗೆದುಕೊಳ್ಳುತ್ತವೆ ಎಂಬುದನ್ನು ಇತಿಹಾಸದ ಅನೇಕ ಪುಟಗಳಲ್ಲಿ ಕಾಣುತ್ತೇವೆ.

ನಮ್ಮ ಕರ್ನಾಟಕದ ಇದುವರೆಗಿನ ಸರಕಾರಗಳು ಇಂಥದೊಂದು ಪ್ರತಿಷ್ಠಿತ ಸ್ಥಾನವನ್ನು ನೀಡಿ, ಕನಿಷ್ಟಪಕ್ಷ ತನ್ನ ಭಾಷೆ-ಸಂಸ್ಕೃತಿಯನ್ನಾದರೂ ಪಠ್ಯದಲ್ಲಿ ಬಿಂಬಿಸಲು ಪ್ರಯತ್ನಿಸಿವೆಯೇ? ಇಂಥದೊಂದು ಶಿಕ್ಷಣನೀತಿ ನಮ್ಮ ನಾಡಿನಲ್ಲಿದೆಯೇ?

ಅಕ್ಕಿವಾಟ ಮತ್ತು ಮಲಿಕವಾಡ ಎಂಬುವು ಕ್ರಮವಾಗಿ ಮಹಾರಾಷ್ಟ್ರ ಮತ್ತು ಕರ್ನಾಟಕದ ಎರಡು ಹಳ್ಳಿಗಳು. ಇವೆರಡರಲ್ಲಿ ಭಾಷಾ ವಿಷಯದಲ್ಲಿ ಸಾಮ್ಯ ಬಹಳವಾದುದರಿಂದ ಈ ತುಲನಾತ್ಮಕ ಅಭ್ಯಾಸಕ್ಕೆ ಇವುಗಳನ್ನೇ ಆಯ್ದುಕೊಳ್ಳಲಾಯಿತು. ಗಡಿಯಿಂದ ಸುಮಾರು ಒಂದೇ ಅಂತರದಲ್ಲಿ ನೆಲೆಸಿರುವ ಈ ಊರುಗಳ ಜನಸಂಖ್ಯೆಯೂ ಸರಿಸುಮಾರು ಅಷ್ಟೇ. ಅಕ್ಕಿವಾಟದಲ್ಲಿ ಕನ್ನಡ ಭಾಷಿಕ ಜೈನ ಸಮಾಜದ (ಇಲ್ಲಿ ಕನ್ನಡಕ್ಕೆ ಇಂದಿಗೂ 'ಜೈನೀಭಾಷೆ'ಯೆಂದೇ ಕರೆಯುವ ಅಮಾಯಕರಿದ್ದಾರೆ.) ಪ್ರಾಬಲ್ಯವಾದರೆ, ಮಲಿಕವಾಡದಲ್ಲಿ ಮರಾಠಿಭಾಷಿಕ ಮರಾಠಾ ಸಮಾಜ ಬಹುಸಂಖ್ಯೆಯಲ್ಲಿದೆ.

ಅಕ್ಕಿವಾಟದಲ್ಲಿ ಈ ಶತಮಾನದ ಆದಿಯಿಂದಲೂ ಇದ್ದುದು ಕನ್ನಡ ಶಾಲೆಯೊಂದೇ. ಮುಂದೆ ಉರ್ದು ಶಾಲೆ ಸೇರಿಕೊಂಡಿತು. ಐವತ್ತರ ಆದಿ

**ಕರ್ನಾಟಕ ಮತ್ತು ಮಹಾರಾಷ್ಟ್ರಗಳೆರಡು ರಾಜ್ಯಗಳ ಸರಕಾರಗಳು ರಾಜ್ಯವಿಂಗಡನೆಯ ನಂತರ ತಳೆದಿರುವ ಶಿಕ್ಷಣನೀತಿಯ ಸ್ಪಷ್ಟ ಚಿತ್ರ ನೀಡಬಲ್ಲಂಥ ಎರಡು ಹಳ್ಳಿಗಳ ತುಲನಾತ್ಮಕ ಚಿತ್ರ ಇಲ್ಲಿದೆ.**




| ವರ್ಷ | ಉರ್ದು | ಕನ್ನಡ | ಮರಾಠಿ |
|---|---|---|---|
| ೧೯೩೦ | ೧೫ | ೬೦ | -- |
| ೧೯೪೦ | ೨೧ | ೮೬ | -- |
| ೧೯೫೦ | ೩೭ | ೧೦೫ | -- |
| ೧೯೬೦ | ೫೯ | ೩೪೧ | ೧೪೮ |
| ೧೯೭೦ | ೬೬ | ೩೭೬ | ೨೬೨ |
| ೧೯೭೫ | ೭೪ | ೧೨೭ | ೩೪೦ |
| ೧೯೮೦ | ೮೧ | --- | ೪೯೬ |
| ೧೯೮೫ | ೮೫ | --- | ೫೩೦ |
| ೧೯೮೯ | ೮೪ | --- | ೭೨೦ |

ಅಕ್ಕಿವಾಟದ ಪ್ರಾಥಮಿಕ ಶಾಲೆಗಳ ಒಟ್ಟು ವಿದ್ಯಾರ್ಥಿ ಸಂಖ್ಯೆ



“ಗಡಿನಾಡಲ್ಲಿ ಕನ್ನಡ ಅಭಿವೃದ್ಧಿ ಯೋಜನೆಗಾಗಿ ಏಳೇಳು ಜನ್ಮ ಶ್ರಮಿಸುವೆ”

ಭಾಗದಲ್ಲಿ ಖಾಸಗಿ ಮರಾಠಿ ಪ್ರಾಥಮಿಕ ಶಾಲೆಯನ್ನು ಪ್ರಾರಂಭಿಸಲಾಯಿತಾದರೂ, ಅದು ಸರಕಾರಿ ಶಾಲೆಯಾಗಿ ಪರಿವರ್ತನೆಗೊಂಡಿದ್ದು ರಾಜ್ಯ ಪುನರ್ವಿಂಗಡನೆಯ ನಂತರವೇ. ನಂತರದ ದಿನಗಳಲ್ಲಿಯ ಕ್ಷಿಪ್ರ ಬೆಳವಣಿಗೆಗಳು ಗಮನಾರ್ಹವಾದವು. ೧೯೫೭ರಲ್ಲಿ ಪ್ರಾರಂಭಿಸಲಾದ ಮರಾಠಿ ಶಾಲೆಯ ವಿದ್ಯಾರ್ಥಿಗಳ ಸಂಖ್ಯೆ ೧೯೬೦-೬೧ ರಷ್ಟೊತ್ತಿಗೆ ಅಂದರೆ ಕೇವಲ ಮೂರೇ ಮೂರು ವರುಷಗಳಲ್ಲಿ ಕನ್ನಡ ಶಾಲೆಯ ವಿದ್ಯಾರ್ಥಿಗಳ ಒಟ್ಟು ಸಂಖ್ಯೆಯ ಅರ್ಧದಷ್ಟಕ್ಕೆ (ಕನ್ನಡ ೩೪೧, ಮರಾಠಿ-೧೪೮) ಬಂದು ನಿಂತಿತು. ಕನ್ನಡವನ್ನು ಹಿಮ್ಮೆಟ್ಟಿಸಲು ಮರಾಠಿ ಶಾಲೆಗೆ (೧೯೭೨-೭೩) ಕೇವಲ ಹದಿನಾರು ವರುಷಗಳು ಸಾಕಾದುವೆಂದರೆ ೧೮ ವರ್ಷದಷ್ಟೊತ್ತಿಗೆ ಕನ್ನಡದ ದುಪ್ಪಟ್ಟು ವಿದ್ಯಾರ್ಥಿಗಳು ಶಾಲೆಸೇರಿಕೊಳ್ಳತೊಡಗಿದರು. ೧೯೭೯-೮೦ರಲ್ಲಿ ವಿಧ್ಯುಕ್ತವಾಗಿ ಕನ್ನಡ ಶಾಲೆ ಕಣ್ಣು ಮುಚ್ಚಿತು.

ಆದಿಯಿಂದಲೂ ಮಲಿಕವಾಡದಲ್ಲಿರುವುದು ಮರಾಠಿ ಶಾಲೆಯೊಂದೇ. ಇಲ್ಲೊಂದು ಕನ್ನಡ ಶಾಲೆ ತೆರೆಯಲು ನಮ್ಮ ಕರ್ನಾಟಕ ಸರಕಾರಕ್ಕೆ ೩೩ ವರುಷಗಳು (೧೯೮೯) ತಗುಲಿದವು. ಇಂದು ಇಲ್ಲಿ ಸುಮಾರು ನಾನ್ನೂರರಷ್ಟು ಮರಾಠಿ ವಿದ್ಯಾರ್ಥಿಗಳಿದ್ದರೆ, ಕನ್ನಡ ವಿದ್ಯಾರ್ಥಿಗಳ ಸಂಖ್ಯೆ ನಲವತ್ತಕ್ಕೂ ಮುಟ್ಟಿಲ್ಲ.

ರಾಜ್ಯ ವಿಂಗಡನೆಯ ನಂತರ ಹತ್ತಾರು ವರುಷಗಳವರೆಗೆ ಅಕ್ಕಿವಾಟದ ಮರಾಠಿ ಶಾಲೆಗಳಲ್ಲಿ ವಿದ್ಯಾರ್ಥಿಗಳಿಗೆ ಮರಾಠಿ ಭಾಷಾ ವಿಷಯವನ್ನು ಕನ್ನಡದ ಮುಖಾಂತರ (ಮಕ್ಕಳಿಗೆ ‘ನಾರಳ’ ಶಬ್ದದ ಅರ್ಥ ತಿಳಿಸಿ ಹೇಳುವಾಗ ‘ತೆಂಗಿನಕಾಯಿ’ ಎಂದು ಹೇಳುತ್ತಿದ್ದರಂತೆ) ಅನಿವಾರ್ಯತೆ ಇತ್ತು. ಇಂದು ಅಲ್ಲಿಯ ಪರಿಹರೆಯದ ಹೈಕಳಿಗೆ ಕನ್ನಡ ಮಾತನಾಡಲೂ ಬಾರದು. ಇಂಥ ಮನಃಪರಿವರ್ತನೆ ತಂದ ಶ್ರೇಯ ಮಹಾರಾಷ್ಟ್ರ ಸರಕಾರಕ್ಕೆ ಸಲ್ಲಬೇಕಾದರೆ, ಮಲಿಕವಾಡದ ರಚನೆಯಲ್ಲಿ ಯಾವುದೇ ಬದಲಾವಣೆ ತಾರದೇ, ಅದನ್ನು ‘ಜೈಸೇಥೇ’ ಕಾಯ್ದುಕೊಂಡ ಸಂಪೂರ್ಣ ಶ್ರೇಯಸ್ಸು ಕರ್ನಾಟಕ ಸರಕಾರದ್ದು. ಯಾಕೆಂದರೆ ಇಂದಿಗೂ ಮಲಿಕವಾಡದ ಶೇಕಡಾ ೯೦ ರಷ್ಟು ಜನಕ್ಕೆ ಕನಿಷ್ಟ ಕನ್ನಡದ ಜ್ಞಾನವೂ ಇಲ್ಲ. ಅದರ ಅವಶ್ಯಕತೆಯನ್ನೂ ನಾವು ಅವರ ಮನದ ಮೇಲೆ ಮೂಡಿಸಿಲ್ಲ.

ಇಂಥ ಕ್ಷಿಪ್ರ ಕ್ರಾಂತಿ ಮಹಾರಾಷ್ಟ್ರ ಸರಕಾರಕ್ಕೆ ಹೇಗೆ ಸಾಧ್ಯವಾಯಿತು? ಅಲ್ಲಿಯ ಕನ್ನಡಿಗರು ನೀಡಿದ ವಿವರಣೆಯನ್ನೇ ಕೇಳಿಕೊಳ್ಳಿ: ಮೊದಮೊದಲು ಕನ್ನಡ ಶಾಲೆಗಳಿಗೆ ಸರಕಾರ ‘ನಿಧಾನವಿಷ’ ನೀಡತೊಡಗಿತು. ಶಿಕ್ಷಕರ ಕೃತಕ ಕೊರತೆ ನಿರ್ಮಿಸಲಾಯಿತು. ಶಿಥಿಲ ಕಟ್ಟಡಗಳ ರಿಪೇರಿ ಮಾಡಿಸಲಿಲ್ಲ. ಮರಾಠಿ ಭಾಷಿಕರಿಗೆ ಮಾತ್ರ ನೌಕರಿ ಎಂಬ ಅಲಿಖಿತ ನಿಯಮವನ್ನು ಜಾರಿಗೆ ತರತೊಡಗಿತು. ನಾಲ್ಕಾರು ವರುಷಗಳವರೆಗೆ ಪಠ್ಯಪುಸ್ತಕಗಳನ್ನೇ ಮುದ್ರಿಸಲಿಲ್ಲ. ಇನ್ನೂ ಹೀಗೆ ಏನೇನೋ! ಆದರೆ ಇದಕ್ಕೆಲ್ಲ ಪ್ರತಿಭಟನೆ ವ್ಯಕ್ತಪಡಿಸಿದವರು ಬೆರಳೆಣಿಕೆಯಷ್ಟು. ಗೊಣಗಿದವರು ನಗಣ್ಯವೆನ್ನಿಸುವಷ್ಟು. ಉಳಿದವರು- ನಾವು ಈ ನಾಡಿನಲ್ಲಿರುವುದರಿಂದ ಈ ನಾಡಿನ ಭಾಷೆ ಕಲಿಯಬೇಕು ಎಂಬ ನಿರ್ಣಯಕ್ಕೆ ಬಂದರಾದುದರಿಂದಲೇ ಇದಕ್ಕೆ ಮನಃಪರಿವರ್ತನೆ ಎಂದದ್ದು.

ನಮ್ಮಲ್ಲಿ ಇಂದು ಗಡಿ ತಾಲೂಕುಗಳಲ್ಲಿ ಒಂದು ಸುತ್ತುಹಾಕಿ. ಕನ್ನಡ ಶಾಲೆಗಳಿಗಿಂತ ಸುಮಾರು ಎಲ್ಲಾ ಮರಾಠಿ ಶಾಲೆಯ ಕಟ್ಟಡಗಳೂ ಸುಸ್ಥಿತಿಯಲ್ಲಿವೆ. ಒಂದರಿಂದ ಐದು ತರಗತಿಗಳ

ವರೆಗೆ ಒಟ್ಟು ಐದೂಕ್ಲಾಸು ಸೇರಿ ಇರುವ ಮೂರು ವಿದ್ಯಾರ್ಥಿಗಳಿಗಾಗಿ ಮರಾಠಿ ಪ್ರಾಥಮಿಕ ಶಾಲೆಗೆ ಐದು ಶಿಕ್ಷಕರಿರುವ ಉದಾಹರಣೆಯನ್ನು ಕೊಡುಗೈ ದೊರೆ ಕರ್ನಾಟಕ ಪ್ರಾಂತದಲ್ಲಿ ಕಾಣಬಹುದು. ಶಿಕ್ಷಕ-ವಿದ್ಯಾರ್ಥಿಗಳ ಸಂಖ್ಯೆಯ ಅನುಪಾತದಲ್ಲಿರುವ ವೈಪರೀತ್ಯದಿಂದಾಗಿ ಕನ್ನಡ ಶಾಲೆಗಳನ್ನು ಕುರಿದೊಡ್ಡಿಗಳೆಂದು ಕರೆಯಬಹುದಷ್ಟೇ. ಅಲ್ಪಸಂಖ್ಯಾತ ಭಾಷಿಕರೆಂಬ ವಿಧಿಯಡಿಯಲ್ಲಿ ಇಲ್ಲಿಯ ಅನೇಕ ಶಾಲೆ-ಕಾಲೇಜುಗಳಿಗೆ ಸರಕಾರಿ ಅನುದಾನದಂಥ ವಿಷಯಕ್ಕೆ ವಿಶೇಷ ರಿಯಾಯಿತಿ ದೊರೆಯುತ್ತಲೇ ಇದೆಯಾದರೆ, ಅಲ್ಲಿಯ ಕನ್ನಡಶಾಲೆಗಳಿಗೆ ಒಂದೊಂದಾಗಿ ಬೀಗಮುದ್ರೆ ಜಡಿಯಲಾಗುತ್ತದೆ.

ಒಟ್ಟಿನಲ್ಲಿ ಗಡಿಯಾಚೆಗೆ ಮರಾಠಿಗೆ ರಾಜಮನ್ನಣೆಯಾದರೆ, ಗಡಿಯೀಚೆಗೆ ವಿಶೇಷ ಮನ್ನಣೆ. ಇದು ಸರಕಾರಿ ಮತ್ತು ಸಾರ್ವಜನಿಕ ಎರಡೂ ದೃಷ್ಟಿಕೋನಗಳೂ ಹೌದು. ಕನ್ನಡ ಅಲ್ಲಿಯೂ-ಇಲ್ಲಿಯೂ ಅನಾಥವೇ.

ವಸ್ತುಸ್ಥಿತಿ ಹೀಗಿರುವಾಗ ಇಲ್ಲಿ ಕನ್ನಡ ಬದುಕಲು ಸಾಧ್ಯವೆ? ಕನ್ನಡಿಗರ ಬಾಳು ಹಸನಾಗಲು ಸಾಧ್ಯವೆ? ಕರ್ನಾಟಕದ ಗಡಿಗಳು (ಅಂದು ಕಾವೇರಿಯಿಂದಮಾ ಗೋದಾವರಿಯವರೆಗೆ, ಇಂದು ಕೃಷ್ಣೆಯ ತಟಕ್ಕೆ ಬಂದು ನಿಂತಿರುವ) ಇನ್ನು ಮುಂದೆಯೂ ಕುಗ್ಗುತ್ತಲೇ ಇರದಿರಲು ಸಾಧ್ಯವೇ

ಕನ್ನಡ-ಕನ್ನಡಿಗ-ಕರ್ನಾಟಕಕ್ಕೆ ಅಳಿವು-ಉಳಿವಿನ ಪ್ರಶ್ನೆಯೆಂದು ಪರಿಗಣಿಸಲೇಬೇಕಾದ ಕಾಲವಿದು.

---

## ಯಶದ ಗುಟ್ಟು

ಅಮೆರಿಕದ ಅತ್ಯಂತ ಸ್ಮರಣೀಯ ಅಧ್ಯಕ್ಷರಲ್ಲಿ ಒಬ್ಬರೆನಿಸಿದ ಜೆಫರ್‌ಸನ್ನರು ತಮ್ಮ ಯಶಸ್ಸಿಗೆ ತಾವು ನೆರೆನಂಬಿ ಆಚರಣೆಗೆ ತಂದ ಹತ್ತು ನೀತಿ ನಿಯಮಗಳೇ ಕಾರಣ ಎಂದು ತಿಳಿದಿದ್ದರು. ಅವರು ತಮ್ಮ ಹಿತೈಷಿ ಸ್ಮಿತ್ ಎನ್ನುವವರಿಗೆ ಬರೆದ ಪತ್ರವೊಂದರಲ್ಲಿ ಈ ನೀತಿಸಂಹಿತೆಯನ್ನು ಉಲ್ಲೇಖಿಸಿದ್ದರು. ಅವು ಇಂತಿದ್ದವು:

ಇಂದು ಮಾಡಬಹುದಾದುದನ್ನು ನಾಳೆಗೆ ಮುಂದೂಡಬಾರದು.

ನೀನೇ ಮಾಡಬಹುದಾದುದಕ್ಕೆ ಇನ್ನೊಬ್ಬರನ್ನು ಅವಲಂಬಿಸಬಾರದು.

ನಿನ್ನದೇ ಹಣವಾದರೂ ಅದನ್ನು ಗಳಿಸುವ ಮುನ್ನ ವೆಚ್ಚ ಮಾಡಬಾರದು.

ನಿನಗೆ ಬೇಡವಾದುದು ಅದು ಎಷ್ಟೇ ಅಗ್ಗವಾಗಿರಲಿ, ಸುಂದರವಾಗಿರಲಿ, ಪ್ರೀತಿಪಾತ್ರವೆನಿಸಲಿ ಅದನ್ನು ಕೊಳ್ಳಬಾರದು.

ಹಸಿವು, ತೃಷೆ ಹಾಗೂ ರೋಗಗಳಿಗಿಂತ ಅಹಂ, ಜಂಬ ಹಾಗೂ ಅಸೂಯೆಗಳು ಹೆಚ್ಚು ದುಬಾರಿಯಾಗುತ್ತವೆ ಎಂಬುದನ್ನು ಮರೆಯಬಾರದು.

ಕಡಿಮೆ ಉಂಡೆನು ಎಂದು ಪರಿತಪಿಸಬಾರದು.

ಮನಃಪೂರ್ವಕವಾಗಿಕೆಲಸಮಾಡುವಾಗಬರುವತೊಂದರೆತಾಪತ್ರಯಗಳನ್ನುಕಡೆಗಣಿಸಬೇಕು.

ಎಂದೂ ನಾವು ಕಂಡಿರದ ಪೀಡೆಗಳಿಂದ ನಮಗೆ ತರತರದ ನೋವು ಬರುವ ಕಾರಣ ಅವನ್ನು ಉದಾಸೀನಮಾಡಬೇಕು.

ಬಹುತೇಕ ಎಲ್ಲ ಸಮಸ್ಯೆಗಳನ್ನೂ ಸರಿಯಾದ ಕಾರ್ಯಾಚರಣೆಯಿಂದ ಪರಿಹರಿಸಬಹುದು ಎಂಬುದನ್ನು ನೆನಪಿಡಬೇಕು.

ಕೋಪ ಬಂದಾಗ ಮಾತಾಡುವ ಮೊದಲು ಹತ್ತು ಎಣಿಸಬೇಕು. ತುಂಬಾ ಕೋಪಬಂದಾಗ ನೂರು ಎಣಿಸಬೇಕು.

• ಕೆ. ವೆಂಕಣ್ಣಾಚಾರ್

---

# ನೆನಪು ನರಳಿಸಿತು

ಸುಮಾರು ವರ್ಷಗಳ ಹಿಂದಿನ ಮಾತು. ನಮ್ಮ ಊರಿಗೆ ವಸತಿಯ ಬಸ್ಸು ಆಲಮಟ್ಟಿ ಡ್ಯಾಂ ಸ್ಟೇಷನಿಂದ ರಾತ್ರಿ ಹತ್ತು ಗಂಟೆಗೆ ಹೊರಟರೆ ಮತ್ತೆ ಬೆಳಗಿನವರೆಗೆ ಯಾವುದೇ ಪ್ರಯಾಣದ ವ್ಯವಸ್ಥೆಯಿರಲಿಲ್ಲ. ರಾತ್ರಿಯಲ್ಲಿ ಹಾದಿ ದರೋಡೆಕೋರರ ಹಾವಳಿಯೂ ಅತಿಯಾಗಿತ್ತು. ಹೀಗಾಗಿ ಜನ ರಾತ್ರಿ ವಸತಿ ಬಸ್ಸನ್ನು ತಪ್ಪಿಸಿಕೊಂಡರೆ ತುಂಬ ಭಯಪಡುತ್ತಿದ್ದರು. ನಾನೊಮ್ಮೆ ರಾತ್ರಿಯ ಬಸ್ಸನ್ನು ಕಾರಣಾಂತರಗಳಿಂದ ತಪ್ಪಿಸಿಕೊಂಡೆ. ಇನ್ನೇನು, ಬೆಳಗಿನವರೆಗೆ ಅಲ್ಲಿಯೇ ಬಸ್ ಸ್ಟ್ಯಾಂಡಿನಲ್ಲಿ ಉಳಿದು ಮುಂಜಾನೆ ಬೇನಾಳಕ್ಕೆ ಹೋದರಾಯಿತೆಂದು ಮಲಗಲು ಜಾಗ ಹುಡುಕುತ್ತಿದ್ದೆ. ಅಷ್ಟರಲ್ಲಿ ನನ್ನಂತೆಯೆ ಬಸ್ಸು ತಪ್ಪಿಸಿಕೊಂಡ, ನಮ್ಮೂರಿನವರೇ ಆದ ಎಂಟ್ಹತ್ತು ಜನರ ಒಂದು ಗುಂಪೇ ಅಲ್ಲಿ ಸೇರಿ, "ಛಳಿಯಲ್ಲಿ ರಾತ್ರಿಯನ್ನು ಕಳೆಯುವದಕ್ಕಿಂತ ನಡೆದೇ ಊರಿಗೆ ಹೊರಟರೆ ಒಂದು ಗಂಟೆಯಲ್ಲಿ ಮನೆ ಸೇರುತ್ತೇವೆ," ಎಂದು ನನ್ನನ್ನೂ ಒಳಗೊಂಡು ಎಲ್ಲರನ್ನೂ ಹುರಿದುಂಬಿಸಿದರು. ಗುಂಪಿನಲ್ಲಿ ಹೆಂಗಸರೂ ಮಕ್ಕಳೂ ಇದ್ದರು. ನಾನೂ ಅವರೊಂದಿಗೆ ಹೊರಟೆ.

ಅರ್ಧ ದಾರಿ ಕಳೆದಿರಬಹುದು. ಒಬ್ಬ ಕಟ್ಟುಮಸ್ತಾದ ಅಪರಿಚಿತ ಧುತ್ತೆಂದು ನಮ್ಮೆಲ್ಲರಿಗೆದುರಾಗಿ ಬೀಡಿ ಹಚ್ಚಿಕೊಳ್ಳಲು ಕಡ್ಡಿ ಪೆಟ್ಟಿಗೆ ಕೇಳಿದ. ಮೊದಲೇ ಹೆದರಿಕೆಯಿಂದ 'ಗಡ-ಗಡ' ನಡುಗುತ್ತ ಹೊರಟ ನಮ್ಮ ಗುಂಪು ಇನ್ನಷ್ಟು ಹೆದರಿತು. "ಯಾರ ಹತ್ತಿರವೂ ಕಡ್ಡಿ ಪೆಟ್ಟಿಗೆ ಇಲ್ಲ," ಎಂದೆವು. "ಓಹೋ ಹಾಗೋ, ನೀವು ಹಾಗೇ ಕೊಡುವವರಲ್ಲ, ನಿಮಗೆಲ್ಲ ಲತ್ತೆಯ ಪೆಟ್ಟು ಬೇಕೇನೋ?" ಎಂದವನೇ ಜೋರಾಗಿ ಸಿಳ್ಳು ಹಾಕಿದ. ತಕ್ಷಣ ಸುಮಾರು ಎಂಟ್ಹತ್ತು ಜನ ಯುವಕರು ರಸ್ತೆ ಬದಿಯ ತಗ್ಗುಗಳಿಂದ ಎದ್ದು ಬಂದು ತಮ್ಮ ಕೈಯಲ್ಲಿಯ ದೊಣ್ಣೆಗಳನ್ನು ಎಲ್ಲರ ಸುತ್ತಲೂ ಹಿಡಿದು ದಾರಿಗಟ್ಟಿದರು. ಗಟ್ಟಿಯಾಗಿ ಉಸಿರು ಬಿಟ್ಟರೆ ಹೊಡೆದು ಹಾಕಿಯಾರು ಎಂದು ಎಲ್ಲರೂ ಸುಮ್ಮನಾದೆವು. ಆಗ ಆ ಕಟ್ಟುಮಸ್ತಾದ ಆಸಾಮಿ ಎಲ್ಲರ ಜೇಬುಗಳಿಗೆ ಕೈ ಹಾಕಿ ಹಣ, ಒಡವೆ, ವಾಚುಗಳನ್ನೆಲ್ಲ ಕಿತ್ತುಕೊಂಡು ಕೊನೆಗೆ ಒಬ್ಬನ ಜೇಬಿನಿಂದ ಬೆಂಕಿ ಪೆಟ್ಟಿಗೆ ತೆಗೆದುಕೊಂಡ. ಇನ್ನೇನು ಹೊರಡಬೇಕೆಂಬಷ್ಟರಲ್ಲಿಯೇ ಆ ಗುಂಪಿನಲ್ಲೊಬ್ಬ ತನ್ನ ಬೀಡಿಯನ್ನು ಹಚ್ಚಿಕೊಳ್ಳಲು ಕಡ್ಡಿ ಗೀರಿದ ಬೆಳಕಿನಲ್ಲಿ ನನ್ನ ಮುಖ ಕಂಡ. ತಕ್ಷಣವೇ, "ಅಯ್ಯೋ ಯಪ್ಪಾ, ಡಾಕ್ಟರ್ ಸಾಹೇಬರೇನ್ರಿ? ತಪ್ಪಾತ್ರೀ. ಜೀವಾ ಉಳಿಸಿದ ನಿಮ್ಮ ಉಪಕಾರಾ, ರೊಕ್ಕಾ ಕೇಳಲಾರದ ನಿಮ್ಮ ಭಿಡೆ ನಮ್ಮ ಮ್ಯಾಲೆ ಭಾಳಾ ಐತ್ರಿ, ಅಂಥಾದರಾಗ ನಿಮ್ಮನ್ನ ದೋಚೇದ್ರ ದೇವರು ಮೆಚ್ಚಾಕಿಲ್ರಿ," ಎನ್ನುತ್ತಾ ತನ್ನ ಗುಂಪಿನವರಿಗೆ ನಮ್ಮ ಗುಂಪಿನವರಿಂದ ಕಿತ್ತುಕೊಂಡದ್ದನ್ನೆಲ್ಲ ಹಿಂದಿರುಗಿಸಿ ಕ್ಷಮೆ ಕೇಳಲು ಹೇಳಿದ. ಹಾಗೆ ಮಾಡಿ ಹಿಂದಿರುಗುವಾಗ, "ಯಪ್ಪಾ, ಹಿಡೀರಿ ನಿಮ್ಮ ಉದ್ದರಿ ರೊಕ್ಕಾ" ಎಂದು ತನ್ನ ಜೇಬಿನಿಂದ ಒಂದು ನೂರರ ನೋಟನ್ನು ನನ್ನ ಜೇಬಿನಲ್ಲಿ ತುರುಕಿದ. ಕತ್ತಲಲ್ಲಿ ಅವರೆಲ್ಲ ಮಾಯವಾದರು. ನನ್ನ ಜೊತೆಯಲ್ಲಿದ್ದವರಿಗೆಲ್ಲ ಆನಂದ, ಆಶ್ಚರ್ಯ! ಅಂತೂ ಇಂತೂ ಮನೆ ಸೇರಿದೆ.

ಪಡೆದ ಹಣವನ್ನೇ ಕೊಡದ ಸಭ್ಯರ ಸೋಗಿನ ನಾಗರಿಕರು ಇರುವಾಗ ಕಾಡಿನ ಮಧ್ಯರಾತ್ರಿಯಲ್ಲಿ ಕಳ್ಳನೊಬ್ಬ ತನ್ನ ಬಾಕಿಯನ್ನು ಕೊಟ್ಟು ಋಣಮುಕ್ತನಾದ ಪರಿ ಅಚ್ಚರಿ ತರಿಸಿದ ನೆನಪಿಗೆ ಈವರೆಗೂ ಆ ನೂರರ ನೋಟನ್ನು ಹಾಗೆಯೇ ಕಾದಿಟ್ಟುಕೊಂಡಿದ್ದೇನೆ.

• ಡಾ. ಯಲಗುರೇಶ ಸಂಕನಾಳ

---

ನಾನು ಭಾರತೀಯ ವಾಯುಸೇನೆಯಲ್ಲಿ ಕೆಲಸದಲ್ಲಿರುವವ. ನನ್ನ ತರಬೇತಿಯು ಬೆಳಗಾವಿ ಜಿಲ್ಲೆಯ ಸಾಂಬ್ರಾದಲ್ಲಿ ಹದಿಮೂರು ತಿಂಗಳು ನಡೆಯಿತು. ತರಬೇತಿಯನ್ನು ಮುಗಿಸಿದ ಬಳಿಕ ನನ್ನನ್ನು ಉತ್ತರ ಪ್ರದೇಶದ ಬರೇಲಿಗೆ ವರ್ಗಾಯಿಸಲಾಯಿತು. ಅದಕ್ಕಾಗಿ ನಾನು ನನ್ನ ಸ್ನೇಹಿತರೊಡನೆ ಕೂಡಿ ಮೀಟರ್‌ಗೇಜ್ ರೈಲಿನ ಮೂಲಕ

ಮೀರಜ್ ತಲುಪಿದೆ. ಅಲ್ಲಿ ಇಡೀ ರಾತ್ರಿ ಕಳೆಯ ಬೇಕಾಯಿತು. ಮರುದಿನ ಮುಂಜಾನೆ ನಾವು ಅಲ್ಲಿಂದ ನಿಜಾಮುದ್ದೀನ್ ಜಂಕ್ಷನ್‌ಗೆ ಪ್ರಯಾಣಿಸಬೇಕಾಗಿತ್ತು. ಗಾಡಿ ಬಂದಾಗ ಇತರರಿಗಿಂತ ಸ್ವಲ್ಪ ಬಲಿಷ್ಠವಾದ ನಾನು ಜನರನ್ನು ಹಿಂದೆ ತಳ್ಳಿ, ಬೋಗಿಯಲ್ಲಿ ನುಗ್ಗಿ, ನನ್ನ ಲಗೇಜ್ ಇಟ್ಟು, ಏಳೆಂಟು ಸ್ಥಾನಗಳನ್ನು ಆಕ್ರಮಿಸಿದೆ. ಜನರ ಗದ್ದಲ ಸ್ವಲ್ಪ ಜಾಸ್ತಿ ಇತ್ತು. ಆದರೂ ಯಾರಿಗೂ ನಾನು ಅಲ್ಲಿ ಕುಳಿತುಕೊಳ್ಳಲು ಬಿಡಲಿಲ್ಲ. ಆಗ ಸ್ವಲ್ಪ ವಯಸ್ಸಾದವರಂತೆ ಕಾಣುತ್ತಿದ್ದವರೊಬ್ಬರು ನನ್ನ ಹತ್ತಿರ ಬಂದು ಕುಳಿತುಕೊಳ್ಳಲು ನೋಡಿದರು. ಆದರೆ ನಾನದಕ್ಕೆ ಆಸ್ಪದ ಕೊಡದೆ ಚೆನ್ನಾಗಿ ಬೈಯ್ದು ಕಳಿಸಿದೆ. ಅವರು ಏನೂ ಹೇಳದೇ ಹೊರಟು ಹೋದರು.

ನಾನು ಹಜರತ್ ನಿಜಾಮುದ್ದೀನ್ ನಿಲ್ದಾಣ ತಲುಪಿದಾಗ ಎಲ್ಲ ಸ್ನೇಹಿತರು ಸ್ಟೇಶನ್ನಿನಿಂದ ಹೊರಗೆ ಹೋದರು. ಅವರನ್ನು ಕರೆದೊಯ್ಯಲು ವಾಹನ ಬರುವುದಿತ್ತು. ನಾನು ಹೊಸದಿಲ್ಲಿಗೆ ಪ್ರಯಾಣಿಸಬೇಕಾಗಿತ್ತು. ಅಷ್ಟರಲ್ಲಿ ವಿದ್ಯುತ್ತಿನಿಂದ ನಡೆಯುವ ಲೋಕಲ್ ಟ್ರೇನ್ ಬಂದೇಬಿಟ್ಟಿತು. ನಾನು ನನ್ನ ಸೂಟ್‌ಕೇಸ್ ಹಾಗೂ ಏರ್‌ಬ್ಯಾಗ್ ಅನ್ನು ಇಡುವಷ್ಟರಲ್ಲಿ ಟ್ರೇನು ಹೊರಟಿತು. ನನ್ನ ಟ್ರಂಕು ಇನ್ನೂ ಹೊರಗೇ ಇತ್ತು. ನನಗೆ ಏನು ಮಾಡಲೂ ತೋಚದಾಯಿತು. ಆಗ ಒಬ್ಬರು ಟ್ರೇನಿನಿಂದ ಇಳಿದು ಓಡಿಬಂದು, ನನ್ನ ಟ್ರಂಕನ್ನು ಎತ್ತಿ ಟ್ರೇನಿನಲ್ಲಿ ಇಟ್ಟು, ನನ್ನನ್ನೂ ಒಳಗೆಳೆದುಕೊಂಡರು. ನನಗೆ ಸಹಾಯ ಮಾಡಿದ ಮಹಾನುಭಾವರಿಗೆ ಧನ್ಯವಾದ ಹೇಳಲು ತಲೆ ಎತ್ತಿದಾಗ ಮಿರಜದಲ್ಲಿ ಸೀಟಿಗಾಗಿ ನಾನು ಜಗಳ ಮಾಡಿದ ವ್ಯಕ್ತಿಯೇ ಅವರಾಗಿದ್ದರು. ನಾನು ಆಶ್ಚರ್ಯ ಚಕಿತನಾದೆ. ಹೊಸದಿಲ್ಲಿಯಲ್ಲಿ ನನ್ನ ಲಗೇಜನ್ನು ಇಳಿಸಿಕೊಟ್ಟು, ಕೂಲಿಯನ್ನು ಕರೆದು ದರವನ್ನೂ ಗೊತ್ತುಪಡಿಸಿ ಕೊಟ್ಟರು. ನನ್ನ ತಪ್ಪಿಗಾಗಿ ಅವರಲ್ಲಿ ಕ್ಷಮೆ ಕೇಳಬೇಕು ಎನ್ನುವಾಗಲೇ ಅವರು ನನ್ನ ಬೆನ್ನು ಚಪ್ಪರಿಸಿ, ಮುಗುಳ್ನಕ್ಕು ಹೊರಟು ಹೋದರು. ಹೌದು, ಕ್ಷಮೆಗಿಂತ ದೊಡ್ಡ ಗುಣ ಎಲ್ಲಿಯಾದರೂ ಉಂಟೆ?

• ಜಗದೀಶ ಕೆ.ಬಿ.

---

## ಇಮ್ಮಡಿ ಪುಲ....

ಬಾದಾಮಿಯ ಚಾಲುಕ್ಯರ ದೊರೆ 'ದಕ್ಷಿಣಾ ಪಥೇಶ್ವರ' ಬಿರುದಾಂಕಿತ ಇಮ್ಮಡಿ ಪುಲಕೇಶಿಯ ಕುರಿತು ಖಂಡಿತ ಇಲ್ಲಿ ಬರೆಯುತ್ತಿಲ್ಲ. ಇದು ಕರ್ನಾಟಕಕ್ಕೆ ಸಂಬಂಧಿಸಿದ್ದೂ ಅಲ್ಲ. ಮಹಾರಾಷ್ಟ್ರದ ಜನಮನ ಸೂರೆಗೈದ ಬಹುಮುಖಿ ವ್ಯಕ್ತಿತ್ವವೆನಿಸಿದ ಪು.ಲ. ದೇಶಪಾಂಡೆಯವರಿಗೆ ಸಂಬಂಧಿಸಿದಂತೆ ಇಲ್ಲಿ ಉಲ್ಲೇಖವಿದೆ. ಆದರೆ ಇಲ್ಲೂ ಒಂದು ವಿಷಯವನ್ನು ಸ್ಪಷ್ಟಗೊಳಿಸುವುದು ವಿಹಿತ. ಇದು 'ಇಮ್ಮಡಿ ಪು.ಲ....' ಕುರಿತ ಕಿರುಬರಹ.

ವ. ಬುವಾ ಮರಾಠಿಯ ಪ್ರಸಿದ್ಧ ಲೇಖಕ. ಮೊನ್ನೆ ಮೊನ್ನೆ ೭೧ರಲ್ಲಿ ಕಾಲಿರಿಸಿರುವ ಇವರು ತಮ್ಮ ಗ್ರಂಥರಚನೆಯಲ್ಲಿ ಸೆಂಚುರಿ ಬಾರಿಸಿದ್ದಾರೆ. ಅವರ ೧೧೪ ಪುಸ್ತಕಗಳೂ ಶುದ್ಧ ಪರಿಶುದ್ಧ ಹಾಸ್ಯಕ್ಕೇ ಮೀಸಲಾದಂಥವು. ಮಹಾರಾಷ್ಟ್ರದ ಮಧ್ಯಮವರ್ಗೀಯರಿಗೆ ವ. ಬುವಾ ಅಂದರೆ ಜೀವ. ಹೀಗಾಗಿ ಅವರನ್ನು ಅಲ್ಲಿ "ಬಡವರ ಪು.ಲ." ಎಂದೇ ಕರೆಯುವ ವಾಡಿಕೆ. ಆದರೆ ನಾವು ಮಾತ್ರ 'ಇಮ್ಮಡಿ ಪು.ಲ.' ಎಂದೇ ಸಂಬೋಧಿಸಬಯಸುತ್ತೇವೆ.

ಮುಂಬಯಿಯ ವಿಜೆಟಿಐನಲ್ಲಿ ಸಾಮಾನ್ಯ ಕಾರಕೂನರಾಗಿ ದುಡಿದು ನಿವೃತ್ತರಾದ ಬುವಾ ಎಂದಿಗೂ ವ್ಯಾವಹಾರಿಕ ಲೆಕ್ಕಾಚಾರದ ವ್ಯಕ್ತಿಯಲ್ಲ.

ಪು.ಲ. ದೇಶಪಾಂಡೆಯವರಂತೆಯೆ ಇವರ ಹಾಸ್ಯ ಭಾಷಣಗಳಿಗೂ ಅಲ್ಲಿ ಜನ ಮುಗಿಬೀಳುತ್ತಾರೆ. ಅವರ ಏಕವ್ಯಕ್ತಿ ಪ್ರದರ್ಶನ, ಏಕಪಾತ್ರಾಭಿನಯಗಳೂ ಅಷ್ಟೇ ಜನಮನ್ನಣೆಗಳಿಸಿವೆ. ಅಂದ ಹಾಗೆ ಪಂಢರಪುರದಲ್ಲಿ ಹುಟ್ಟಿದ ಬುವಾ ಅವರದು ಸಂತನಂಥ ಬದುಕು.

(ಕೃಪೆ: 'ಟೈಮ್ಸ್ ಆಫ್ ಇಂಡಿಯಾ' ಮುಂಬಯಿ)

ತಂತ್ರಜ್ಞಾನ

# ಹಲೋ ಕಂಪ್ಯೂಟರ್!

## ಹುಬ್ಬಳ್ಳಿಯ ಹುಡುಗರೂ ಅದನ್ನು ಮಾಡಿದ್ದಾರೆ!


• ಎಸ್ ರಾಜೇಶ್

ಹಾಗೂ

• ಎ.ಜೆ. ಹಿರೇಮಠ


'ಖುಲ್ ಜಾ ಸಿಮ್ ಸಿಮ್'

ಎಂದ ಕೂಡಲೇ ಭಾರಿ ಗಾತ್ರದ ಬಂಡೆ ತಂತಾನೆ ಪಕ್ಕಕ್ಕೆ ಸರಿದು ಒಳಹೋಗಲು ದಾರಿ ಮಾಡಿಕೊಡುವ ಅದ್ಭುತ ಕಲ್ಪನೆಯ ಆಲಿಬಾಬಾನ ಕಥೆ ಯಾರಿಗೆತಾನೆ ಗೊತ್ತಿಲ್ಲ? ಹತ್ತಾರು ಜನ ಸೇರಿದರೂ ಅಲುಗಿಸಲಾಗದ ಬಂಡೆ ಕೇವಲ ಕೆಲವು ಮಾಂತ್ರಿಕ ಪದಗಳನ್ನು ಆಲಿಸಿ ಪಕ್ಕಕ್ಕೆ ಸರಿಯುವಂತೆ ಮಾಡುವ ಕವಿಕಲ್ಪನೆ ಇಂದು



ಕೇವಲ ಕಲ್ಪನೆಯಾಗುಳಿದಿಲ್ಲ. ಕಂಪ್ಯೂಟರಿನಿಂದಾಗಿ ಹಿಂದೆ ಕೇವಲ ಕಲ್ಪನಾಲೋಕದಲ್ಲಿ ಕಾಣಬಹುದಾದುದ್ದನ್ನು ಇಂದು ವಾಸ್ತವಲೋಕದಲ್ಲಿ ಅನುಭವಿಸಬಹುದಾಗಿದೆ. ಅಲಿಬಾಬಾನ ಕಥೆಯಲ್ಲಿಯ ಬಂಡೆಗೆ ಕೇವಲ ನಾಲ್ಕೇ ಪದಗಳ ಪರಿಜ್ಞಾನವಿತ್ತು. ಆದರೆ ಕಂಪ್ಯೂಟರಿನ ಮಾತು ಹಾಗಲ್ಲ. ಇದು ಸಾಧ್ಯವಾದದ್ದು ಶಬ್ದಾಭಿಜ್ಞಾನ ವ್ಯವಸ್ಥೆಯ (Intelligent speech recogniser) ಆವಿಷ್ಕಾರದಿಂದಾಗಿ.

ಕಂಪ್ಯೂಟರಿನ ಮೊದಲ ಮಾದರಿಯಿಂದ ಇತ್ತೀಚಿನ ಮಾದರಿಯವರೆಗೂ ಆದೇಶವನ್ನು ಕೀ ಬೋರ್ಡ್ ಮೂಲಕವೇ ಕೊಡಬೇಕಾಗಿತ್ತು. ಕಂಪ್ಯೂಟರಿಗೆ ಅರ್ಥವಾಗುವಹಾಗೆ ಆದೇಶಕೊಡಬೇಕೆಂದರೆ ಆದೇಶಗಳನ್ನು ಕೊಡುವಾತ ಮೊದಲು ಕಂಪ್ಯೂಟರ್ ಭಾಷೆಗಳನ್ನು ಕಲಿಯಬೇಕು. ಬದಲು ಇದಾವುದರ ಗೊಂದಲವೂ ಇಲ್ಲದೆ ಒಬ್ಬ ವ್ಯಕ್ತಿಯೊಡನೆ ಸಂಭಾಷಿಸುವಂತೆ ನೇರವಾಗಿ ಕಂಪ್ಯೂಟರ್ ಜೊತೆ ಮಾತಾಡುವಂತಿದ್ದರೆ! ನಾವು ಉಚ್ಚರಿಸಿದ ಪದ ಅದಕ್ಕೆ ಅರ್ಥವಾಗುವಂತಿದ್ದರೆ! ಶಬ್ದಾಭಿಜ್ಞಾನ ವ್ಯವಸ್ಥೆಯಿಂದಾಗಿ ಈ "ರೆ" ಪ್ರಪಂಚಕ್ಕೆ ವಿದಾಯ ಹೇಳುವಕಾಲ ಈಗ ಬಂದಿದೆ.

ಇದರ ಉಪಯೋಗಗಳು ಅಪರಿಮಿತ. ಉದಾಹರಣೆಗೆ ಬ್ಯಾಂಕಿನಿಂದ ಹಣ ತೆಗೆಯಬೇಕಾಗಿದೆ ಎಂದಿಟ್ಟುಕೊಳ್ಳಿ. ಆಗ ನೀವೇನು ಮಾಡುತ್ತೀರಿ? ಉತ್ತರ ಸ್ಪಷ್ಟ. ಗುಮಾಸ್ತನ ಮುಂದೆ ನಿಲ್ಲುತ್ತೀರಿ. ಆತ ಪಾಸ್‌ಬುಕ್, ನಿಮ್ಮ ಸಹಿ ಇತ್ಯಾದಿಗಳನ್ನು ಪರಿಶೀಲಿಸುತ್ತಾನೆ. ಅಪ್ಪಿತಪ್ಪಿ ರುಜುವಿನಲ್ಲಿ ಸ್ವಲ್ಪ ವ್ಯತ್ಯಾಸವಾಗಿದ್ದರೆ ನೀವು ಬುದ್ಧಿಯನ್ನೆಲ್ಲ ಖರ್ಚು ಮಾಡಿ, ಅಕೌಂಟ್ ಹೊಂದಿರುವವರು ನೀವೇ ಎನ್ನುವುದನ್ನು ಆತನಿಗೆ ಮನಗಾಣಿಸಿ, ಗಂಟೆಗಟ್ಟಲೇ ಸಮಯವನ್ನು ವ್ಯಯಿಸಿದ ನಂತರ ಹಣ ತರುತ್ತೀರಿ. ಈಗ ಗುಮಾಸ್ತೆಯ ಬದಲು ಶಬ್ದಾಭಿಜ್ಞಾನ ವ್ಯವಸ್ಥೆ ಅಳವಡಿಸಿದ ಕಂಪ್ಯೂಟರನ್ನು ಬ್ಯಾಂಕಿನಲ್ಲಿ ಇಡಲಾಗಿದೆ ಎಂದಿಟ್ಟುಕೊಳ್ಳಿ. ಆಗ ನೀವು ಕಂಪ್ಯೂಟರಿನ ಮುಂದೆ ನಿಮ್ಮ ಅಕೌಂಟ್ ನಂಬರ್ ಹಾಗೂ ಬೇಕಾದ ಮೊತ್ತ ಹೇಳುತ್ತೀರಿ. ಕಂಪ್ಯೂಟರ್ ಕೂಡಲೆ ತನ್ನ ಜ್ಞಾಪಕಕೋಶದಲ್ಲಿ (Memory cells) ಈ ಮೊದಲೇ ಸೇರಿಸಲಾದ ನಿಮ್ಮ ಧ್ವನಿಸಂಕೇತಕ್ಕೆ ಈಗಿನ ನಿಮ್ಮ ಧ್ವನಿಯ ಜೊತೆ ತಾಳೆ ನೋಡುತ್ತದೆ. ನಿಮ್ಮ ಧ್ವನಿ ತಾಳೆಯಾದರೆ ನಿಮಗೆ ಕೂಡಲೇ ಹಣ ಸಂದಾಯವಾಗುತ್ತದೆ. ಚಲನ್ ಬರೆಯುವ, ಸಹಿಮಾಡುವ ಕಾರ್ಯಗಳಿಗೆಲ್ಲ ಇಲ್ಲಿ ಎಡೆ ಇಲ್ಲವಾದ್ದರಿಂದ ನಿಮಿಷಾರ್ಧದಲ್ಲಿ ವ್ಯವಹಾರ ಮುಗಿದು ಹೋಗುತ್ತದೆ. ಎಲ್ಲ ವ್ಯವಹಾರಗಳು ನೇರ ಹಾಗು ಸರಳ.

ಮತ್ತೊಂದು ಉದಾಹರಣೆ; ಒಬ್ಬ ಕಿವುಡನೊಡನೆ ಸಂಭಾಷಿಸಬೇಕೆಂದರೆ ಆತನಿಗೆ ಹೇಳಬೇಕಾದುದನ್ನೆಲ್ಲ ಕಾಗದದ ಮೇಲೆ ಬರೆದು ತೋರಿಸಬೇಕಾಗುತ್ತದೆ. ಅದರ ಬದಲು ಕಂಪ್ಯೂಟರಿನ ಮುಂದೆ ಹೇಳಬೇಕಾದುದನ್ನೆಲ್ಲ ಹೇಳಿದರೆ ಕಂಪ್ಯೂಟರ್ ಅದನ್ನು ಯಥಾವತ್ತಾಗಿ ಪರದೆಯ ಮೇಲೆ ಮೂಡಿಸುತ್ತದೆ. ಅದನ್ನು ಓದಿ ಆ ಕಿವುಡ ನಾವು ಹೇಳುವುದನ್ನು ಸುಲಭವಾಗಿ ತಿಳಿದುಕೊಳ್ಳುತ್ತಾನೆ. ಬರೆಯುವ ಶ್ರಮ ಇಲ್ಲಿಲ್ಲ.

ಹಾಗಾದರೆ ಈ ಶಬ್ದಾಭಿಜ್ಞಾನ ವ್ಯವಸ್ಥೆ ಎಂದರೆ ಏನು? ಅದು ಹೇಗೆ ಕಾರ್ಯ ನಿರ್ವಹಿಸುತ್ತದೆ?

ಭಾವನೆಯ ಅಭಿವ್ಯಕ್ತಿಗೆ ಮಾತೇ ಮುಖ್ಯವಾದ ಬಂಡವಾಳ. ಒಬ್ಬ ವ್ಯಕ್ತಿ ಮತ್ತೊಬ್ಬನ ಜೊತೆ ವಿಚಾರವಿನಿಮಯ ಮಾಡಬೇಕೆಂದರೆ ಮಾತಿನಂತಹ ಸಮರ್ಥ ಮಾಧ್ಯಮ ಮತ್ತೊಂದಿಲ್ಲ. ಅದೇ ರೀತಿ ಒಬ್ಬ ವ್ಯಕ್ತಿ ಒಂದು ಯಂತ್ರದ ಜೊತೆ ಮಾತಾಡಿ ಕಾರ್ಯ ಸಾಧಿಸುವಂತಾದರೆ- ಯಂತ್ರ, ಮಾನವನ ಸಂಬಂಧ ನಿಕಟವಾಗುತ್ತದೆ. ಮತ್ತು ಉದ್ದೇಶಿತ ಕಾರ್ಯ ಬಹಳ ಸರಳ ಹಾಗೂ ಸುಲಭವಾಗಿ ನೆರವೇರುತ್ತದೆ.

ಶಬ್ದಾಭಿಜ್ಞಾನ ಅರ್ಥಾತ್ ಐಎಸ್‌ಆರ್ ವ್ಯವಸ್ಥೆಯಲ್ಲಿ ಮೊದಲು ಕಂಪ್ಯೂಟರಿಗೆ ನಮ್ಮ ಕಾರ್ಯ ಸಾಧನೆಗೆ ಅನುಕೂಲವಾಗುವಂತಹ ಮಾತುಗಳನ್ನು ಕಲಿಸಲಾಗುತ್ತದೆ. ಉದಾಹರಣೆಗೆ ಒಬ್ಬ ತಾಯಿ ತನ್ನ ಮಗುವಿಗೆ ಮಾತಾಡಲು ಕಲಿಸುತ್ತಾಳೆ ಎಂದಿಟ್ಟುಕೊಳ್ಳೋಣ. ತಾಯಿ ಪ್ರತಿಯೊಂದು ಪದವನ್ನೂ ಅರ್ಥಸಹಿತವಾಗಿ ಹಲವಾರು ಬಾರಿ ಮಗುವಿನ ಮುಂದೆ ನುಡಿಯಬೇಕಾಗುತ್ತದೆ. ಮಗು

ವಿನ ಕಲಿಕೆ ಈ ಪದಗ್ರಹಣದ ಮೂಲಕ ಸಾಗುತ್ತದೆ. ಅನಂತರ ಮಗು ತಾನೆ ಸ್ವತಂತ್ರವಾಗಿ ಆ ಭಾಷೆಯ ಪದಗಳನ್ನು ಉಚ್ಚರಿಸುವ ಹಾಗೂ ಅದರ ಅರ್ಥವನ್ನು ಗ್ರಹಿಸುವ ಶಕ್ತಿಯನ್ನು ಪಡೆಯುತ್ತದೆ. ಕಂಪ್ಯೂಟರಿನ ವ್ಯವಸ್ಥೆ ಕೂಡ ಇದಕ್ಕಿಂತ ಭಿನ್ನವಾಗಿಲ್ಲ, ಅದು ಕೂಡ ಕಾರ್ಯ ಸಾಧನೆಗೆ ಅನುಕೂಲವಾಗುವಂತಹ ನಿರ್ದಿಷ್ಟ ಪದಗಳನ್ನು ಕಲಿತು, ಅನಂತರ ಅದನ್ನು ಗ್ರಹಿಸುವ ಮಟ್ಟಕ್ಕೆ ತಲುಪುತ್ತದೆ. ಅದರಲ್ಲಿ ಕಲಿಯುವಿಕೆ ಹಾಗೂ ಗ್ರಹಿಸುವಿಕೆ ಎಂಬ ಎರಡು ವಿಧಿಗಳಿವೆ. ಇವುಗಳನ್ನು ಸ್ಥೂಲವಾಗಿ ಪರಿಶೀಲಿಸೋಣ.

೧) **ಕಲಿಯುವಿಕೆ:** ಈ ವಿಧಿಯಲ್ಲಿ ಕಂಪ್ಯೂಟರಿನಿಂದ ಪ್ರಯೋಜನ ಪಡೆಯುವವರು ಅದರ ಮುಂದೆ ಉದ್ದೇಶಿತ ಪದಗಳನ್ನು ಹಲವಾರು ಬಾರಿ ಉಚ್ಚರಿಸಬೇಕು. ನಂತರ ಕಂಪ್ಯೂಟರು ಆ ಪದವನ್ನು ತನ್ನ ಜ್ಞಾಪಕಕೋಶದಲ್ಲಿ ಸೇರಿಸಿಕೊಳ್ಳುತ್ತದೆ. ಈ ರೀತಿ ಕಂಪ್ಯೂಟರಿಗೆ ಸಾವಿರಾರು ಪದಗಳನ್ನು ಕಲಿಸಬಹುದು. ಕಂಪ್ಯೂಟರು ಈ ಎಲ್ಲಾ ಪದಗಳನ್ನು ಅರ್ಥ ಸಹಿತವಾಗಿ ತನ್ನ ಜ್ಞಾಪಕಕೋಶಗಳಲ್ಲಿ ಸಂಗ್ರಹಿಸಿಕೊಳ್ಳುತ್ತದೆ.

೨) **ಗ್ರಹಿಸುವಿಕೆ:** ಈ ವಿಧಿಯಲ್ಲಿ ಕಂಪ್ಯೂಟರನ್ನು ಉಪಯೋಗಿಸುವವರು ಅದಕ್ಕೆ ಆದೇಶವಿತ್ತಾಗ ಕಂಪ್ಯೂಟರು ತನ್ನ ಜ್ಞಾಪಕಕೋಶಗಳಲ್ಲಿ ಆ ಪದಕ್ಕಾಗಿ ಹುಡುಕಾಡಿ ಅದೇನೆಂದು ಅರ್ಥ ಮಾಡಿಕೊಳ್ಳುತ್ತದೆ, ಆ ಆದೇಶವನ್ನು ಪರದೆಯ ಮೇಲೆ ಮೂಡಿಸುತ್ತದೆ, ಹಾಗೂ ಉದ್ದೇಶಿತ ಕಾರ್ಯವನ್ನು ನಿರ್ವಹಿಸುತ್ತದೆ.

ಕಂಪ್ಯೂಟರು ಹೀಗೆ ಕಾರ್ಯ ನಿರ್ವಹಿಸಬೇಕಾದರೆ ಅದಕ್ಕೆ ಕೆಲವೊಂದು ಸಾಧನಗಳ ಅಗತ್ಯ ಇದೆ. ನಾವು ಕಂಪ್ಯೂಟರಿನ ಮುಂದೆ ಉಚ್ಚರಿಸುವ ಶಬ್ದ ಕಂಪ್ಯೂಟರಿನ ಜ್ಞಾಪಕಕೋಶಗಳಲ್ಲಿ ಸೇರಬೇಕಾದರೆ ಮೊದಲು ನಮ್ಮ ಧ್ವನಿತರಂಗಗಳು ಕಂಪ್ಯೂಟರನ್ನು ಸೇರಬೇಕು. ಆದರೆ ಕಂಪ್ಯೂಟರಿಗೆ ಈ ತರಂಗಗಳು ನೇರವಾಗಿ ಅರ್ಥವಾಗುವುದಿಲ್ಲವಾದ್ದರಿಂದ ಪದೋಚ್ಚಾರದಿಂದ ಜನಿಸುವ ತರಂಗಗಳನ್ನು ಕಂಪ್ಯೂಟರಿಗೆ ಅರ್ಥವಾಗುವ ರೀತಿಯಲ್ಲಿ ಪರಿವರ್ತಿಸಬೇಕಾಗುತ್ತದೆ. ಹೀಗೆ ಪರಿವರ್ತಿಸಿದ ಸಂಕೇತಗಳಿಗೆ ಯುಗಳ ಸಂಕೇತ (Binary code) ಎಂದು ಹೆಸರು.

ಕಂಪ್ಯೂಟರು "ಕಲಿಯುವಿಕೆಯ ವಿಧಿ"ಯಲ್ಲಿರುವಾಗ ನಾವು ಅದರ ಮುಂದೆ ನಿಂತು "ಕಸ್ತೂರಿ" ಎನ್ನುತ್ತೇವೆ ಎಂದಿಟ್ಟುಕೊಳ್ಳೋಣ. ಕಂಪ್ಯೂಟರ್ ಈ ಪದದ ಉಚ್ಚಾರದಿಂದ ಉಂಟಾದ ಧ್ವನಿ ತರಂಗವನ್ನು ಪರಿವರ್ತಿಸಿ ಅದಕ್ಕೆ ಸಮಾನಾಂತರವಾದ ಸಂಕೇತವನ್ನು ತಯಾರಿಸಿ ತನ್ನ ಜ್ಞಾಪಕಕೋಶದಲ್ಲಿರಿಸಿಕೊಳ್ಳುತ್ತದೆ. ನಾವು ಪ್ರತಿಯೊಂದು ಪದವನ್ನು ಉಚ್ಚರಿಸಿದಾಗ ಅದಕ್ಕೆ ಅರ್ಥವಾಗುವ ಹಾಗೆ ಯುಗಳ ಸಂಕೇತಗಳಿಗೆ ಪರಿವರ್ತಿಸಲ್ಪಟ್ಟು ಅವು ಕಂಪ್ಯೂಟರ್ ಜ್ಞಾಪಕಕೋಶಗಳನ್ನು ತಲುಪುತ್ತವೆ. ಒಂದು ಉಚ್ಚರಿತ ಪದ ಇನ್ನೊಂದಕ್ಕಿಂತ ಭಿನ್ನವಾಗಿರುವುದರಿಂದ ಪರಿವರ್ತಿತವಾದ ಸಂಕೇತಗಳೂ ಭಿನ್ನವಾಗಿಯೆ ಇದ್ದು ಅವು ಕಂಪ್ಯೂಟರಿನ ವಿಭಿನ್ನ ಜ್ಞಾಪಕಕೋಶಗಳಲ್ಲಿ ಸಂಗ್ರಹಿಸಲ್ಪಟ್ಟಿರುತ್ತವೆ.

ಅನಂತರ ಕಂಪ್ಯೂಟರ್ ಗ್ರಹಿಸುವ ವಿಧಿಯಲ್ಲಿ (Recognitionmode) ಕೆಲಸ ಮಾಡುವಾಗ ಅದರ ಮುಂದೆ ನಾವು "ಕಸ್ತೂರಿ" ಎಂದು ಉಚ್ಚರಿಸಿದರೆ ಆ ಪದಕ್ಕೆ (ಧ್ವನಿತರಂಗಕ್ಕೆ) ಸಮಾಂತರವಾದ

ಶಬ್ದಾಭಿಜ್ಞಾನ ವ್ಯವಸ್ಥೆಯಲ್ಲಿನ ವಿವಿಧ ವಿಭಾಗಗಳು



ಸಂಕೇತವನ್ನು ತಯಾರಿಸಿ, ಅದನ್ನು ತಾನು ಹಿಂದೆ ಕಲಿತ ಪದದ ಸಂಕೇತದ ಜೊತೆಗೆ ತಾಳೆಮಾಡಿ ನೋಡುತ್ತದೆ. ಎರಡರಲ್ಲಿ ಹೊಂದಾಣಿಕೆಯಿದ್ದಾಗ ಮಾತ್ರ ಕಂಪ್ಯೂಟರಿಗೆ ಆ ಪದ 'ಕಸ್ತೂರಿ' ಎಂದು ತಿಳಿಯುತ್ತದೆ. ಈ ರೀತಿ ಸಂಕೇತಗಳನ್ನು ತಾಳೆ ಮಾಡಿ ಪದಗಳ ಗುರುತಿಸುವ ವಿಧಾನಕ್ಕೆ ಡೀ-ಕೋಡಿಂಗ್ (De-coding) ಎಂಬ ಹೆಸರು.

ಶಬ್ದಾಭಿಜ್ಞಾನ ವ್ಯವಸ್ಥೆಯಲ್ಲಿನ ವಿವಿಧ ವಿಭಾಗಗಳು ಹೀಗೆ ಕೆಲಸ ನಿರ್ವಹಿಸುತ್ತವೆ:

೧) ಉಚ್ಚರಿಸಿದ ಪದಗಳನ್ನು ಗ್ರಹಿಸಲು ಮೈಕ್ರೋಫೋನ್ ಬಳಸಲಾಗುತ್ತದೆ. ಅದು ಧ್ವನಿ ತರಂಗಗಳನ್ನು ವಿದ್ಯುತ್ ತರಂಗಗಳನ್ನಾಗಿ ಪರಿವರ್ತಿಸುತ್ತದೆ.

೨) ಪದೋಚ್ಚಾರದಿಂದ ಹುಟ್ಟಿಕೊಂಡ ಧ್ವನಿ ತರಂಗಗಳು ಅಷ್ಟೊಂದು ಶಕ್ತಿಯುತವಾಗಿರುವುದಿಲ್ಲ; ಆದ್ದರಿಂದ ಅವುಗಳನ್ನು ಮೊದಲು ಆಂಪ್ಲಿಫೈಯರ್‌ಗಳ ಮೂಲಕ ಹಾಯಿಸಿ ಬಲಯುತಗೊಳಿಸಲಾಗುತ್ತದೆ.

೩) ಕೇವಲ ಧ್ವನಿ ತರಂಗಗಳು ಮಾತ್ರ ಮುಂದಿನ ವಿಭಾಗವನ್ನು ಮುಟ್ಟುವಂತೆ ಮಾಡಲು ಬ್ಯಾಂಡ್‌ಪಾಸ್‌ಫಿಲ್ಟರ್‌ನ್ನು ಉಪಯೋಗಿಸಲಾಗುತ್ತದೆ. (50 Hz-3.4 Khz) ಇದು ಇತರೆ ನಿರುಪಯುಕ್ತ ತರಂಗಗಳು ಮುಂದಿನ ವಿಭಾಗಕ್ಕೆ ತಲುಪದಂತೆ ತಡೆಯುತ್ತದೆ.

೪) ಈ ವಿದ್ಯುತ್ ತರಂಗಗಳನ್ನು ಕಂಪ್ಯೂಟರಿಗೆ ಅರ್ಥವಾಗುವ ಹಾಗೆ ಯುಗಳ ಸಂಕೇತಗಳಲ್ಲಿ ಪರಿವರ್ತಿಸಲು ಈ ವಿಭಾಗವನ್ನು ಉಪಯೋಗಿಸುತ್ತೇವೆ.

೫) ಹೀಗೆ ಪರಿವರ್ತಿಸಲ್ಪಟ್ಟ ಪದಗಳನ್ನು ತನ್ನ ಜ್ಞಾಪಕಕೋಶದಲ್ಲಿರಿಸಿ, ಅವಶ್ಯಕತೆಯುಂಟಾದಾಗ ಅವುಗಳನ್ನು ಬಳಸುವ ಮೂಲಕ ಉಪಕರಣಗಳನ್ನು ನಿಯಂತ್ರಿಸಲು ಕಂಪ್ಯೂಟರನ್ನು ಬಳಸಲಾಗುತ್ತದೆ.

ಶಬ್ದಾಭಿಜ್ಞಾನ ವ್ಯವಸ್ಥೆಯಲ್ಲಿ ಹಲವು ವಿಧ:

ಏಕವ್ಯಕ್ತಿ ನಿಯಂತ್ರಿತ ವ್ಯವಸ್ಥೆಯಿರುವಲ್ಲಿ ಕಂಪ್ಯೂಟರು ಕೇವಲ ಒಬ್ಬ ವ್ಯಕ್ತಿಯ ಧ್ವನಿಯನ್ನು ಮಾತ್ರ ಗುರುತಿಸುತ್ತದೆ ಹಾಗೂ ಆ ವ್ಯಕ್ತಿಯ ಆದೇಶದಂತೆ ಮಾತ್ರ ಕೆಲಸಮಾಡುತ್ತದೆ.

ಸಮೂಹ ನಿಯಂತ್ರಿತ (Multispeaker) ವ್ಯವಸ್ಥೆಯಿರುವಲ್ಲಿ ಕಂಪ್ಯೂಟರ್ ಒಂದು ನಿರ್ದಿಷ್ಟ ಗುಂಪಿನ ವ್ಯಕ್ತಿಗಳ ಧ್ವನಿಯನ್ನು ಗುರುತಿಸುತ್ತದೆ ಹಾಗೂ ಆ ವ್ಯಕ್ತಿಗಳ ಆದೇಶವನ್ನು ಮಾತ್ರ ಪಾಲಿಸುತ್ತದೆ.

ಇದೂ ಅಲ್ಲದೆ ಕಂಪ್ಯೂಟರಿಗೆ ತಿಳಿಯುವ ಭಾಷೆಯಲ್ಲಿ ಯಾರು ಮಾತನಾಡಿದರೂ ಅವರ ಆದೇಶವನ್ನು ಪಾಲಿಸುವ ವ್ಯವಸ್ಥೆಯಿರುವ ಇನ್ನೊಂದು ಪ್ರಕಾರವೂ ಉಂಟು.

ಈ ಶಬ್ದಾಭಿಜ್ಞಾನ ವ್ಯವಸ್ಥೆಯಿಂದ ಸಾಕಷ್ಟು ಪ್ರಯೋಜನಗಳು ಉಂಟು.

೧) ಮಿಲಿಟರಿಯಲ್ಲಿ: ಹೆಸರೇ ಸೂಚಿಸುವಂತೆ ಶಬ್ದಾಭಿಜ್ಞಾನ ವ್ಯವಸ್ಥೆಯಲ್ಲಿ ಕಾರ್ಯಸಾಧನೆಗೆ ಮುಖ್ಯವಾದದ್ದು ಧ್ವನಿ. ಧ್ವನಿತರಂಗಗಳು ವ್ಯಕ್ತಿಯಿಂದ ವ್ಯಕ್ತಿಗೆ ಬದಲಾಗುತ್ತವೆ. ಒಬ್ಬ ವ್ಯಕ್ತಿಯ ಧ್ವನಿಯನ್ನು ಇನ್ನೊಬ್ಬ ಎಷ್ಟೇ ಸಮರ್ಥವಾಗಿ ಅನುಕರಿಸಿದರೂ ಮೂಲ ವ್ಯಕ್ತಿಯ ನೈಜ ಧ್ವನಿ ತರಂಗಗಳನ್ನು ಅನುಕರಿಸಲು ಸಾಧ್ಯವೇ ಇಲ್ಲ ಎನ್ನುವುದನ್ನು ಮರೆಯಕೂಡದು. ದೇಶದ ರಹಸ್ಯಗಳನ್ನು ಈ ವ್ಯವಸ್ಥೆಯ ಮೂಲಕ ಒಬ್ಬ ಪ್ರಮುಖ ವ್ಯಕ್ತಿ (ಉದಾ: ಮಿಲಿಟರಿ ಕಮಾಂಡರ್) ಶೇಖರಿಸಿಟ್ಟರೆ, ಆ ವ್ಯಕ್ತಿಯ ಧ್ವನಿಯನ್ನು ಅರ್ಥಾತ್ ಧ್ವನಿತರಂಗಗಳನ್ನು ಕಂಪ್ಯೂಟರು ನಿಖರವಾಗಿ ಗುರುತಿಸಿಟ್ಟಿರುತ್ತದೆ. ಅನಂತರ ಆ ವ್ಯಕ್ತಿಯ ಕರೆಗೆ ಮಾತ್ರ ಕಂಪ್ಯೂಟರ್ ಓಗೊಡುತ್ತದೆ. ಬೇರೆ ಯಾವುದೇ ವ್ಯಕ್ತಿ ಎಷ್ಟೇ ಪ್ರಯತ್ನಿಸಿದರೂ ಈ ಕಂಪ್ಯೂಟರು ಬಾಯಿ ಬಿಡುವುದಿಲ್ಲ.

೨) ಅಂಗವಿಕಲರಿಗೆ: ಈ ಉಪಕರಣವು ಅಂಗವಿಕಲರಿಗೆ ವರವಾಗಬಹುದು. ದೊಡ್ಡ ಉದ್ದಿಮೆಗಳಲ್ಲಿ ಯಂತ್ರ ಚಾಲನೆ ಮಾಡಲು ಸಾಧ್ಯವಾಗದಿರುವುದರಿಂದ ಅಂಗವಿಕಲರು ಈ ವ್ಯವಸ್ಥೆಯನ್ನು ಉಪಯೋಗಿಸಿ, ಈ ಮೊದಲೇ ತರಬೇತಿ ಕೊಟ್ಟ ಶಬ್ದಗಳನ್ನು ಉಚ್ಚರಿಸುವ ಮೂಲಕ ಯಂತ್ರಗಳನ್ನು ಕಂಪ್ಯೂಟರ್ ಮುಖಾಂತರ

ನಿಯಂತ್ರಿಸಬಹುದು.

ಕಣ್ಣಿಲ್ಲದವರು ತಮ್ಮೆಲ್ಲ ಕಾರ್ಯಗಳಿಗೆ ಇನ್ನೊಬ್ಬರನ್ನು ಆಶ್ರಯಿಸಬೇಕು. ಅಂಥವರಿಗೆ ಈ ಉಪಕರಣದಿಂದ ತುಂಬಾ ಅನುಕೂಲವಿದೆ. ಮನೆಯಲ್ಲಿ ಈ ವ್ಯವಸ್ಥೆ ಅಳವಡಿಸಿದ ಅಂಥ ವ್ಯಕ್ತಿ ಬಾಗಿಲ ಮುಂದೆ ನಿಂತು 'ಬಾಗಿಲು ತೆಗೆ' ಎಂಬ ಆದೇಶ ನೀಡಿದರೆ ಸಾಕು, ಬಾಗಿಲು ತಂತಾನೆ ತೆಗೆದುಕೊಳ್ಳುತ್ತದೆ!

೩) ವಿಮಾನಯಾನದಲ್ಲಿ: ವಿಮಾನಗಳ ನಿಯಂತ್ರಣದಲ್ಲಿ ವೈಮಾನಿಕನ ಕೈ ಕಾಲುಗಳು ಸದಾ ನಿರತವಾಗಿರುವದರಿಂದ ಹೆಚ್ಚಿನ ನಿಯಂತ್ರಣಕ್ಕಾಗಿ, ಈ ಉಪಕರಣವನ್ನು ಉಪಯೋಗಿಸಬಹುದು.

೪) ವಿದ್ಯುತ್ ಉಪಕರಣಗಳ ನಿಯಂತ್ರಣದಲ್ಲಿ: ಯಾವುದೇ ದೊಡ್ಡ ಉದ್ದಿಮೆಗಳಲ್ಲಿ ವಿದ್ಯುತ್ ಉಪಕರಣಗಳನ್ನು ಈ ಮೂಲಕ ನಿಯಂತ್ರಿಸಬಹುದು. ಅಪಘಾತದ ಸೂಚನೆ ಕಂಡುಬಂದಾಗ ಕೇವಲ ಶಬ್ದ ಉಚ್ಚರಿಸುವ ಮೂಲಕ ಯಂತ್ರಗಳನ್ನು ತಕ್ಷಣ ನಿಯಂತ್ರಿಸಿ ಮುಂದೆ ಉಂಟಾಗಬಹುದಾದ ಹಾನಿಯನ್ನು ತಡೆಗಟ್ಟಬಹುದಾಗಿದೆ.

ಇಂತಹ ಶಬ್ದಾಭಿಜ್ಞಾನ ವ್ಯವಸ್ಥೆಯನ್ನು ರೂಪಿಸುವಲ್ಲಿ ಹುಬ್ಬಳ್ಳಿಯ ಬಿ.ವ್ಹಿ.ಬಿ. ಇಂಜನಿಯರಿಂಗ್ ಕಾಲೇಜಿನ ಇಲೆಕ್ಟ್ರಾನಿಕ್ಸ್ ಅಂತಿಮ ಬಿ.ಇ. ವಿದ್ಯಾರ್ಥಿಗಳಾದ ಐ.ಜಿ. ಹಿರೇಮಠ, ವಿ.ಜಿ.ಹಿರೇಮಠ, ಜಿ.ಎಸ್. ಅನಗವಾಡಿ ಮತ್ತು ಜೆ.ಆರ್. ಕೊಟ್ಟೂರಶೆಟ್ಟಿಯವರು ಸಫಲರಾಗಿದ್ದಾರೆ. ಇದಕ್ಕೆ ಮಾರ್ಗದರ್ಶಕರಾದವರು ಅಲ್ಲಿಯೇ ಅಧ್ಯಾಪಕರಾದ ಪ್ರೀತಮ್‌ಕುಮಾರ್ ಅವರು. ಈ ಸಾಧನ ತಯಾರಿಸಲು ತಗಲಿದ ವೆಚ್ಚ ಕಂಪ್ಯೂಟರನ್ನು ಹೊರತುಪಡಿಸಿ ಬರಿ ಎರಡುಸಾವಿರ ರೂಪಾಯಿಗಳು. ಅವಕಾಶ ಹಾಗೂ ಉತ್ತಮ ಮಾರ್ಗದರ್ಶನ ದೊರೆತರೆ ನಮ್ಮ ವಿದ್ಯಾರ್ಥಿಗಳು ಇನ್ನೂ ಏನೇನನ್ನು ಸಾಧಿಸಲಿಕ್ಕಿಲ್ಲ! ●

---

## ಕಪ್ಪೆಯ ತ್ಯಾಗ

ದಕ್ಷಿಣ ಅಮೆರಿಕದ ಈಕ್ವೆಡೋರಿನ ಅರಣ್ಯಗಳಲ್ಲಿ ಎಪಿಪಡೋ ಬೇಟ್ಸ್ ಟ್ರೆಸಿಲರ್ ಎಂಬ ವಿಶಿಷ್ಟ ಜಾತಿಯ ಕಪ್ಪೆಗಳಿದ್ದು ಅವುಗಳ ಚರ್ಮದಿಂದ ಎಪಿಬೆಟಡೈನ್ ಎಂಬ ನೋವು ನಿರೋಧಕವನ್ನು ತೆಗೆಯಲಾಗುತ್ತದೆ. ಯು.ಎಸ್.ಎ.ಯ ಮೇರಿ ಲ್ಯಾಂಡಿನ ಬೆಕೆಸ್ಡಾ ರಾಷ್ಟ್ರೀಯ ಆರೋಗ್ಯ ಸಂಸ್ಥೆಯ ಜಾನ್ ಡೇಲಿ ಅವರ ಪ್ರಕಾರ ಇದು ಮಾರ್ಫೈನ್‌ಗಿಂತ ೨೦೦ಪಟ್ಟು ಶಕ್ತಿಶಾಲಿಯಾಗಿರುತ್ತದೆ. ಆದರೆ ಇದರ ತಯಾರಿಕೆಯಲ್ಲಿ ಒಂದು ಅತ್ಯಂತ ನೋವಿನ ಸಂಗತಿಯೆಂದರೆ ೨೪ ಮಿಲಿಗ್ರಾಂ ಎಪಿಬೆಟಡೈನ್ ತಯಾರಿಸಲು ೭೫೦ ಕಪ್ಪೆಗಳು ಅಸಹನೀಯ ಸಾವು ನೋವುಗಳನ್ನು ಅನುಭವಿಸಬೇಕಾಗುತ್ತದೆ ಎಂಬುದು.

## ಹತ್ಯೆಯ ಹಿಂದಿನ ದಯೆ

ರೆಡ್ ಇಂಡಿಯನ್ನರು ಬೇಟೆಗೆ ಹೊರಡುವ ಮುನ್ನ ಒಂದು ವಿಶಿಷ್ಟ ಸಂಪ್ರದಾಯವನ್ನು ಅನುಸರಿಸುವರಂತೆ. ಎಂದಿಗೂ ಮೋಜಿಗಾಗಿ ಬೇಟೆಯಾಡದ, ಆಹಾರ, ಉಡುಪು, ರಕ್ಷಣೆ ಮೊದಲಾದವುಗಳಿಗಾಗಿ ಅನಿವಾರ್ಯವಾಗಿ ಪ್ರಾಣಿಗಳನ್ನು ವಧಿಸುವ ಅವರು ಬೇಟೆಗೆ ಹೊರಡುವ ಮುನ್ನ ಉಪವಾಸ ಮಾಡುತ್ತಾರೆ. ಅನಂತರ ತಾವು ಹಿಂದೆ ಬೇಟೆಯಾಡಿ ಕೊಂದ ಪ್ರಾಣಿಗಳನ್ನು ಕೃತಜ್ಞತೆಯಿಂದ ಸ್ಮರಿಸಿಕೊಳ್ಳುತ್ತಾರೆ. ಆಮೇಲೆ ತಾವು ಶಿಕಾರಿ ಮಾಡಿದ ಪ್ರಾಣಿಯ ಪಕ್ಕದಲ್ಲಿ ಕುಳಿತು ತಾವು ಅದನ್ನು ಏಕೆ ಕೊಲ್ಲಬೇಕಾಯಿತು. ಎಂಬುದನ್ನು ವಿವರಿಸುತ್ತಾರೆ. ಅನಂತರವೇ ಅವರು ಅದರ ಮಾಂಸವನ್ನು ಕುಟುಂಬದ ಭೋಜನಕ್ಕಾಗಿ ಒಯ್ಯುವುದು.

● ಕೆ. ವೆಂಕಣ್ಣಾಚಾರ್

## ಮುಖಾಮುಖಿ ಮುಂಚೂಣಿ

### ಎಂಥಾ ಹಾಡು!

ಸಂಗೀತ ಶಿಶುವನ್ನೂ ಪಶುವನ್ನೂ, ಸಸಿಯನ್ನೂ ಮರವನ್ನೂ ಮೋಹಗೊಳಿಸಿ ತಲೆದೂಗುವಂತೆ ಮಾಡುತ್ತೆ ಅನ್ನೋದೇನೂ ಸುಳ್ಳಲ್ಲಾ. ಸಂಗೀತವನ್ನ ದನ ಹೆಚ್ಚು ಹಾಲು ಕರೆಯೋದಕ್ಕೂ ಪೈರು ಹೆಚ್ಚು ಕಾಳು ಕೊಡೋದಕ್ಕೂ ಬಳಸ್ಕೊಂಡ ಉದಾಹರಣೆಗಳೂ ಇವೆ. ಚಿಕಿತ್ಸೆಗೂ ಸಂಗೀತವನ್ನೇ ಅಸ್ತ್ರವಾಗಿ ಮಾಡ್ಕೊಂಡದ್ದೂ ಉಂಟು.

ಆದ್ರೆ ಕೋಮಾ ಸ್ಥಿತಿಯಲ್ಲಿ ತಿಂಗಳುಗಟ್ಟಲೆ ಮಲಗಿ, ಇನ್ನೇನು ಇವ್ಳ ಕಥೆ ಮುಗಿದೇ ಹೋಯ್ತು ಅಂತ ಮನೆ ಜನ್ರೆಲ್ಲಾ ತಲೇ ಮೇಲೆ ಕೈ ಹೊತ್ತು ಕೂತಿದ್ದಾಗ ನರ್ಸೊಬ್ಳು ಹಾಡಿದ ಹಾಡು ಸತ್ತಂತಿಹಳನು ಬಡಿದೆಚ್ಚರಿಸಿತು ಅಂದ್ರೆ. ಅಚ್ಚರಿಪಡದೇ ಇರೋಕಾಗತ್ಯೇ?

ಶಿಕಾಗೋದ ಒಂದು ಆಸ್ಪತ್ರೇಲಿ ಮೂಗಲ್ಲಿ ನಳಿಕೆ ಏರಿಸ್ಕೊಂಡು ಕಣ್ಣು ಮುಚ್ಕೊಂಡು ಮಲಗಿದ್ದ ಹುಡುಗಿ ಜೇನ್ ಡೋ. ಎದೆ ಏರಿ ಇಳ್ದು ಮಾಡ್ತಿತ್ತಾದ್ರಿಂದ ಜೀವ ಇದೆ ಅನ್ಕೊಂಡಿದ್ರು ಅಷ್ಟೇ. ಟ್ರಕ್ಕೊಂದು ಈ ಹುಡುಗಿಗೆ ಬಡಿದು ಜೀವಚ್ಛವವಾಗೋ ಹಾಗೆ ಮಾಡಿತ್ತು.

ಒಂದಿನ ಬೆಳಗಿನ ಡ್ಯೂಟಿ ನರ್ಸ್ ಶೆರಿವೋ ಲ್ಫಿಂಗರ್‌ಗೆ ಅದೇನು ತೋಚ್ತೋ ಏನೋ. ನರ್ಸರೀಲಿ ಹಾಡೋ ಒಂದು ಶಿಶು ಪದ್ಯವನ್ನು ಆಕೆ ಹಾಡೋಕ್ ಶುರುಮಾಡೀದ್ಳು. 'ದಿ ನಿಫ್ಟಿ ಫಿಫ್ಟೀಸ್' ಅಂತ ಅದರ್ಹೆಸ್ರು. ಅಮೆರಿಕದ ಐವತ್ತು ರಾಜ್ಯಗಳ ಅಕಾರಾದಿ ಪಟ್ಟಿ ಆ ಪದ್ಯ. ಹತ್ತು ರಾಜ್ಯಗಳ ಹೆಸರು ಹೇಳಿದ್ಲೋ ಇಲ್ವೋ ಈಕೆ, ಆ ಕಡೆ ಆ ಹುಡುಗಿ ತುಟಿ ಅಲ್ಲಾಡ್ಸೋಕ್ ಶುರುಮಾಡ್ತು. ನರ್ಸ್ ಹಾಗೇ ಮುಂದುವರ್ಸಿದ್ಳು. ಇಪ್ಪತ್ತನೇಯ ರಾಜ್ಯದ ಹೆಸರಿನ್ಹೊತ್ಗೆ ಆ ಹುಡುಗಿಯ ತುಟಿಗಳ ಮೇಲೆ ಲಾಸ್ಯ ಕಂಡ್ತು. ನರ್ಸ್ ಪುಳಕಿತಳಾದ್ರೂ ಹಾಡನ್ನ ನಿಲ್ಲಿಸ್ಲಿಲ್ಲ. ಮೂವತ್ತನೇ ರಾಜ್ಯದ ಹೆಸರನ್ನು ಈಕೆ ಹೇಳೋದೆ ತಡ, ಮುಂದಿನ ಐದಾರು ರಾಜ್ಯಗಳ ಹೆಸರುಗಳನ್ನ ಆ ಹುಡುಗಿ ಉಚ್ಚರಿಸಿ ಸೋತಂತೆ ಸುಮ್ಮನಾದ್ಳು. ಮೂವತ್ತೈದನೆ ರಾಜ್ಯದ ಹೆಸರಿಂದ ನಲವತ್ತರವರ್ಗ್ಗೂ ಈಕೆ ಹೇಳೋದ್ರಲ್ಲೇ ಮತ್ತೆ ಆ ಹುಡುಗಿ ಪಟಪಟನೆ ಹೆಸರುಗಳ್ನ ಹೇಳ್ತಾ ಐವತ್ತನ್ನೂ ಮುಗ್ಸಿ ಕಣ್ಣು ತೆರೆದು "ಹೂಂ ಮತ್ತೆ ಶುರು ಮಾಡು," ಅಂತ ನರ್ಸ್‌ಗೆ ದುಂಬಾಲ್ಬಿದ್ಳು.

### 'ಈರುಳ್ಳಿ' ಅರದದ್ದಕ್ಕೆ....

ತೆಳ್ಳನೆಯ ವ್ಯಕ್ತಿಯನ್ನು ನೀವು 'ಊದಿನಕಡ್ಡಿ' 'ನಂದೀ ಕೋಲು' 'ಲಂಬೂ' ಎಂದೆನ್ನುತ್ತೀರಲ್ಲವೇ? ಒಂದು ವೇಳೆ ಆತ ಸಿಡುಕನಾಗಿರದಿದ್ದರೆ, ನಿಮಗಿಂತ ಬಲಶಾಲಿ ಆಗಿರದಿದ್ದರೆ ಮಾತ್ರ, ಅಲ್ಲವೆ? ಆದರೆ, ಬಲಶಾಲಿಯಾಗಿದ್ದರೆ? ಮನಸ್ಸಿನಲ್ಲಾದರೂ ಆತನನ್ನು ಹಾಗೆ ಕರೆದು ನಾಲಿಗೆ ಚಪಲ ತೀರಿಸಿಕೊಳ್ಳುತ್ತೀರಿ, ಅಲ್ಲವೇ?

ಪಶ್ಚಿಮ ನಾರ್ವೆಯಲ್ಲೊಬ್ಬ ಹುಡುಗ ಹೀಗೆ ನಾಲಿಗೆ ಚಪಲ ತೀರಿಸಿಕೊಳ್ಳುತ್ತಲೇ ನಡೆದ. ಒಬ್ಬೊಬ್ಬನಿಗೂ ಆತನ ಆಕಾರಕ್ಕನುಸಾರವಾಗಿ ಒಂದೊಂದು ತರಕಾರಿಯ ಹೆಸರಿಟ್ಟು ಕರೆದು ಖುಷಿಪಡುತ್ತಿದ್ದ.

ಪಾಪ, ಆತನಿಗೇನು ಗೊತ್ತೂರೀ 'ಈರುಳ್ಳಿ' ಅಂತ ಒಬ್ಬನ್ನ ಕರೆದದ್ದಕ್ಕೆ ಭಾರೀ ದಂಡ ಕಟ್ಟಬೇಕಾಗುತ್ತೆ ಅನ್ನೋದು? ಒಂದಿನ ಆತ ಮೋಟೈಕ್ ಏರಿ ಎಗ್ರಾಬಿರ್ರಿ ಹೊರಟಿದ್ದ. ಎದುರಿಗೆ ಡೆಪ್ಯುಟಿ ಪೊಲೀಸ್ ಸೂಪರಿಂಟೆಂಡೆಂಟ್ ಈತನಿಗೆ ಕೈ ಮಾಡಿ, "ನಿಲ್ಲಪ್ಪಾ" ಅಂದ. ಹುಡುಗ ಗಾಡೀನೇನೋ ನಿಲ್ಸಿದ. ಆದ್ರೆ ಬಾಯಿ ಹರಿಬಿಟ್ಟ. ಆ ತೆಳು ಚರ್ಮದ ಗುಂಡನೆಯ ಆಫೀಸರನ್ನ, "ಲೋ ಈರುಳ್ಳಿ, ದಾರಿ ಬಿಡಯ್ಯಾ ಕಂಡಿದೀನಿ," ಎಂದ. ಅಧಿಕಾರಿಗೆ ಕೋಪ ನೆತ್ತಿಗೇರ್ತು. ಮೋಟೈಕ್ ನಂಬರ್ ಬರ್ಕೊಂಡದ್ವೇ ಆ ಹುಡುಗನ ಫೋಟೋ ತಕ್ಕೊಂಡದ್ವೇ ಹೊರಟ್‌ಬಿಟ್ಟ. ಈ ಹುಡುಗ ಮತ್ತೊಮ್ಮೆ ಕೇಕೆ ಹೊಡೆದು, "ಲೋ

ಈರುಳ್ಳಿ. ಸಿಪ್ಪೆ ಸುಲುದ್ರೆ ಗೊತ್ತಾಗುತ್ತೆ ನಿನ್ ಬಣ್ಣ...." ಅಂತ ಗಾಡಿಬಿಟ್ಟ.

ಮರುದಿನವೇ ನಾರ್ದರ್ಲಂಡ್‌ನ ಕಂಟ್ರಿಕೋರ್ಟಿಂದ ಸಮನ್ಸ್ ಬಂತು. ಹುಡುಗನ್ನ ಪೊಲೀಸ್ರು ಎಳಿದೊಯ್ದುಬಿಟ್ರು.



"ಅಧಿಕಾರಿನ್ನ ಅವಮಾನಿಸಿದ್ದಕ್ಕೆ ೪೦೦೦ ಕ್ರೋನರ್ (೫೭೫ ಡಾಲರ್‌ಗಳು) ದಂಡ ವಿಧಿಸಿದೀವಿ," ನ್ಯಾಯಾಧೀಶರು ತೀರ್ಪು ಓದಿ ಮೇಲೆದ್ರು.

## ನರಕಯಾತ್ರೆ?!

"ನರ್ಕಕ್ಹೋಗು" ಅಂತ ಯಾರಾದ್ರೂ ಅಂದ್ರೆ ನಿಮ್ಮುಖಾ ಸಣ್ಣಾಗತ್ತೆ, ಅಥವಾ ಉರಿದೇಳತ್ತೆ, ಮುಷ್ಟಿ ಬಿಗಿಯತ್ತೆ, ಹುಬ್ಬು ಮೇಲೇರತ್ತೆ.... ಹೀಗೇ ಏನೇನೋ. ಆದ್ರೆ ತೈವಾನ್ನಲ್ಲಿ ಹೀಗೆ ಯಾರಾದ್ರೂ ಯಾರ್ಗಾದ್ರೂ ಅಂದ್ರೆ ಅನ್ನಿಸ್ಕೊಂಡವ್ರ ಮುಖ ಅರಳತ್ತೆ, ಕಣ್ಣು ಮಿಂಚತ್ತೆ, ಕೈ ಜೇಬಿಗಿಳ್ದು ತಡಕಾಡಿ ಸಿಗೋ ಕಾಸನ್ನತ್ತಿ ಹಾಗೆ ಹೇಳ್ದವನೆದುರು ಇರೋ ತಟ್ಟೆ ತಟ್ಟುತ್ತೆ.

ಅಂದ್ರೆ "ನರ್ಕಕ್ಹೋಗು" ಅನ್ನೋದು ಅಲ್ಲಿ ಶಾಪವಲ್ಲ , ವರ. ಈ ಜಗತ್ತಿಂದ ಸಾರಾಗಿ ಭೂಮಿಯ ಗರ್ಭದಲ್ಲಿ ತಣ್ಣಗೆ ಮಲಗಿರೋ ತಮ್ಮ ಹಿರಿಯರ್ನ ಅವರ ಆತ್ಮಗಳ್ನ ಸಂಪರ್ಕಿಸಿ, ಸಂದರ್ಶಿಸಿ ತಮ್ಮ ಭವಿತವ್ಯದ ಬಗ್ಗೆ ಅವರ್ಜತೇಗೆ ಒಂದಷ್ಟು ಹೊತ್ತು ಮಾತಾಡೋದಕ್ಕೆ ಈ "ನರ್ಕಕ್ಹೋಗು" ಅನ್ನೋ ಪದ ಪರ್ಮಿಶನ್ ಚೀಟಿ ಇದ್ದಾಗೆ. ಪ್ರತಿವರ್ಷವೂ ಒಂದು ನಿರ್ದಿಷ್ಟ ಅವಧೀನ ಅವ್ರು ನರ್ಕಕ್ಹೋಗೋ ಪರ್ವಕಾಲವನ್ನಾಗಿ ಆಚರಿಸುತ್ತಾರೆ. ಆಗ ನರ್ಕಕ್ಹೋಗೋ ಲಕ್ಷಾಂತರ ಜನರ ನೂಕು ನುಗ್ಗಲ್ಲಿ ಕೆಲವರು ಶಾಶ್ವತವಾಗ್ಲೂ ಸ್ವರ್ಗಕ್ಹೋಗ್ತಾರೆ. ಅಂಥವರ್ನ ಈ ಜನ ಪಾಪಿಷ್ಠರು ಅಂತ ಕರೀತಾರೆ. ಆ ನೂಕುನುಗ್ಗಲ್ಲೂ ಪಾರಾಗಿ ಹೋಗಿ ತಮ್ಮ ಹಿರಿಯರ್ನ್ನು ಅವರ ಆತ್ಮಗಳ್ನ ಸಂಪರ್ಕಿಸಿ ತೃಪ್ತಿಯಿಂದ ಹಿಂದಿರುಗೋರೇ ಪುಣ್ಯವಂತ್ರು.

ಹಿರಿಯರ್ನ, ಅವರ ಆತ್ಮಗಳ್ನ ಅಲ್ಲೀ ಜನ ಏನೇನ್ ಕೇಳ್ಕೋತಾರೆ? ಕಳ್ರು-ಸ್ಮಗ್ಲರ್ಸು ತಮ್ಮ ಮುಂದಿನ ವರ್ಷಗಳ ಸ್ಥಿತಿಗತಿ ಹೇಗೆ ಅಂತ ಕೇಳ್ಕೊಂಡು, ಅದ್ರಲ್ಲಿ ಎದುರಾಗೋ ಎಡರುತೊಡರುಗಳ್ನ ನಿವಾರ್ಸಪ್ಪಾ ಅಂತ ಬೇಡ್ಕೋತಾರಂತೆ. ಪೊಲೀಸ್ನವ್ರು ತಮ್ಮ ಹಿರಿಯರಿಗೆ "ಈ ಸ್ಮಗ್ಲರುಗಳ್ನ ಹಿಡಿಯೋದ್ಕಾಗೆ ಹೇಳ್ಕೊಡಿ" ಅಂತ ದುಂಬಾಲ್ಬೀಳ್ತಾರಂತೆ. ಕನ್ಯಾಪಿತೃಗಳು ಒಳ್ಳೇ ಅಳಿಯನ್ನ, ಮದ್ವೇಗ್ ಬಂದಿರೋ ಯುವಕ್ರು ಸುಂದರಿ ಹೆಂಡ್ತೀನ್ನ ದಯಪಾಲ್ಸಿ ಅಂತ ಕೈ ಮುಗೀತಾರಂತೆ. ಅಂದ್ಹಾಗೆ ಇದೆಲ್ಲ ಅಲ್ಲಿ ಟೆಲಿವಿಜನ್ನಿನಲ್ಲಿ ಕಂತ್‌ಕಂತಾಗಿ ಪ್ರಸಾರವಾಗುತ್ತಂತೆ!

## ಎರಡೇ ರೂಪಾಯಿ

**ಸೇ**ಲಂ ಬಳಿ ಕಾವೇರಿಯಲ್ಲಿ ಸ್ನಾನ ಮಾಡಿಸಲು ದೇವಿಯ ವಿಗ್ರಹದೊಂದಿಗೆ ಭಕ್ತರು ಬಂದರಂತೆ. ಪ್ರತಿಮೆಯ ಮೇಲಿನ ವಜ್ರಾಭರಣಗಳನ್ನೆಲ್ಲದಡದಲ್ಲಿಇರಿಸಿ ಇಬ್ಬರು ಪೇದೆಗಳಿಗೆ ಕಾಯಲು ಹೇಳಿ ನೀರಿಗಿಳಿದರು.

ಇದ್ದಕ್ಕಿದ್ದ ಹಾಗೇ ಎರಡು ರೂ.ನ ಗರಿಗರಿ ನೋಟುಗಳು ಗಾಳಿಯಲ್ಲಿ ಹಾರಿ ಬರತೊಡಗಿದವು. ಪೇದೆಗಳು ಅವುಗಳನ್ನು ಬೆನ್ನಟ್ಟಿದರು. ನೋಟು ಹಾರಿಸಿದ ಕಳ್ಳರು ವಜ್ರಾಭರಣಗಳೊಂದಿಗೆ ಪರಾರಿ!

ವ್ಯಕ್ತಿತ್ವ



## ಮರೆಯಾದ ಮುಗಿಲ ಮರ್ಯಾದೆ

# ಡಾ. ಚಂದ್ರಶೇಖರ

• ಸುನಂದಾ ಮುತಾಲಿಕ ದೇಸಾಯಿ

**ಕೇಂ**ಬ್ರಿಜ್ ವಿಶ್ವವಿದ್ಯಾಲಯದ ವಿದ್ಯಾರ್ಥಿ, ಮದ್ರಾಸಿನ ಸುಬ್ರಹ್ಮಣ್ಯಮ್ ಚಂದ್ರಶೇಖರ ರಾಯಲ್ ಅಸ್ಟ್ರಾನಾಮಿಕಲ್ ಸೊಸೈಟಿಯ ಸದಸ್ಯರನ್ನು ಉದ್ದೇಶಿಸಿ, ನಕ್ಷತ್ರಗಳು ನಶಿಸಿ ಹೋಗುವ ಸಿದ್ಧಾಂತವನ್ನು ಮಂಡಿಸಿದಾಗ ಇಡೀ ಜಗತ್ತು ಅವರನ್ನು ನೋಡಿ ನಕ್ಕಿದ್ದಿತು. ಅಂದು ನಗೋಇಡಾಗಿದ್ದ ಅದೇ ಚಂದ್ರಶೇಖರ ಮುಂದೆ ಜಗತ್ತಿನಲ್ಲಿಯೇ ಅತ್ಯಂತ ಪ್ರತಿಷ್ಠೆಯದೆನಿಸಿದ ನೋಬೆಲ್ ಪಾರಿತೋಷಕವನ್ನು ಪಡೆದು ವಿಶ್ವಮಾನ್ಯ ವಿಜ್ಞಾನಿ ಎಂದೆನಿಸಿದರು.

ಅಂದು ಶುಕ್ರವಾರ, ೧೯೩೫ರ ಜನೆವರಿ ೧೧. ತಮ್ಮ ಸಿದ್ಧಾಂತದ ಬಗ್ಗೆ ತುಂಬಾ ಆಶೆ, ಆಕಾಂಕ್ಷೆ, ವಿಶ್ವಾಸ ಇರಿಸಿಕೊಂಡು ಚಂದ್ರಶೇಖರ ಲಂಡನ್ನಿಗೆ ಬಂದಿದ್ದರು. ಆದರೆ ಅದೇ ಕಾಲಕ್ಕೆ ಸರ್ ಆರ್ಥರ್ ಎಡಿಂಗ್‌ಟನ್ನರ ಬಗ್ಗೆ ಸ್ವಲ್ಪ ಮಟ್ಟಿಗೆ ಅಳುಕೂ ಮೂಡಿತ್ತು.

ನಕ್ಷತ್ರಗಳು ನಶಿಸುವಾಗಿನ ಸ್ಥಿತಿಗತಿಗಳ ಬಗ್ಗೆ ಚಂದ್ರಶೇಖರ ಅನೇಕ ಲೆಕ್ಕಾಚಾರ ಮಾಡಿದ್ದರು.

ಅವುಗಳ ಕುರಿತು ಅವರೂ ಮತ್ತು ಎಡಿಂಗಟ ನ್ನರೂ ಅನೇಕ ತಿಂಗಳುಗಳವರೆಗೆ ಬಿಟ್ಟೂ ಬಿಡದೆ ಚರ್ಚಿಸಿದ್ದರು. ಎಡಿಂಗಟನ್ ಒಳ್ಳೇ ಮಾತುಗಾರ. ತಮ್ಮ ೫೨ನೆಯ ವಯಸ್ಸಿನಲ್ಲಿಯೇ ಶ್ರೇಷ್ಠದರ್ಜೆಯ ವಿಜ್ಞಾನಿ ಎಂದು ಹೆಸರು ಗಳಿಸಿದ್ದರು. ವಿಶ್ವಮಾನ್ಯತೆಯೂ ದೊರಕಿತ್ತು. ಭಾರತದಿಂದ ಬಂದಿದ್ದ ಚಂದ್ರಶೇಖರರೂ ಕೇಂಬ್ರಿಜ್ ವಿಶ್ವವಿದ್ಯಾಲಯದಲ್ಲಿ ಒಬ್ಬ ಪರಕೀಯ. ಉದಯೋನ್ಮುಖ ವಿಜ್ಞಾನಿ. ೨೪ ವರ್ಷದ ಈ ಯುವಕನ ಮಾತನ್ನು ಎಡಿಂಗ್‌ಟನ್ ಆಸಕ್ತಿಯಿಂದ ಆಲಿಸುತ್ತಿದ್ದರು. ಇದೆಲ್ಲ ವಿಚಿತ್ರವೇ. ಅವರಿಬ್ಬರೂ ಒಟ್ಟಾಗಿಯೇ ಇರುತ್ತಿದ್ದರು. ಆದರೂ ಅದು ಇಜ್ಜೋಡು.

ಮದ್ರಾಸ್ ವಿಶ್ವವಿದ್ಯಾಲಯದಲ್ಲಿ ಭೌತ ಶಾಸ್ತ್ರದ ಸ್ಪರ್ಧೆಯಲ್ಲಿ ಚಂದ್ರಶೇಖರರಿಗೆ, ನಕ್ಷತ್ರಗಳ ಬಗ್ಗೆ ಎಡಿಂಗ್‌ಟನ್ನರು ಬರೆದಿದ್ದ ಒಂದು ಪುಸ್ತಕವು ಬಹುಮಾನವಾಗಿ ದೊರಕಿತ್ತು. ಆಗಿನಿಂದ ಕೆಲವು ವರ್ಷಗಳ ಕಾಲ, ಅವರು ನಕ್ಷತ್ರಗಳ ರೂಪ ರಚನೆಯ ಕುರಿತು ಅಭ್ಯಾಸನಿರತರಾಗಿದ್ದರು. ಅದರ ಪರಿಣಾಮ ತಾವೊಂದು ಅದ್ಭುತವಾದ ಚಿತ್ತವೇಧಕ ಸಂಶೋಧನೆ ಮಾಡಿದುದು ಅವರಿಗೆ ಮನವರಿಕೆಯಾಗಿತ್ತು. ಅಂದು ಶುಕ್ರವಾರ ಮಧ್ಯಾಹ್ನ ಅದನ್ನು ಪ್ರಕಟಿಸುವ ಸನ್ನಾಹ ಮಾಡಿಕೊಂಡಿದ್ದರು. ಆದರೆ ಅದೇ ದಿನ ಕೈ ಸೇರಿದ ಆಮಂತ್ರಣ ಪತ್ರಿಕೆ ಅವರನ್ನು ದಿಗಿಲುಗೊಳಿಸಿತ್ತು. ಅದೇ ವಿಷಯದ ಕುರಿತು, ಎಡಿಂಗ್‌ಟನ್ನರೂ ಅದೇ ಸಭೆಯಲ್ಲಿ ಮಾತನಾಡಲಿದ್ದಾರೆಂಬುದನ್ನು ತಿಳಿದಾಗ ಅವರಿಗೆ ಒಂದು ತರಹದ ಕಾತರ. ಎಡಿಂಗ್‌ಟನ್ನರ ಜೊತೆ ನಡೆಸಿದ ಸುದೀರ್ಘ ಚರ್ಚೆಯ ಕಾಲಕ್ಕೆ ತಮ್ಮ ಸಿದ್ಧಾಂತಕ್ಕೆ ಪೂರಕವಾದ ಅನೇಕ ಅಂಕಿ ಅಂಶಗಳನ್ನು ಚಂದ್ರಶೇಖರ ಉದಾಹರಿಸುತ್ತಿದ್ದರು. ಆದರೆ ಇದೇ ವಿಷಯದ ಕುರಿತು ತಾವೂ ಸಂಶೋಧನೆ ನಡೆಸುತ್ತಿದ್ದುದನ್ನು ಮಾತ್ರ ಎಡಿಂಗ್‌ಟನ್ ಹೇಳಿರಲಿಲ್ಲ.

ಇನ್ನೇನು ಸಭೆ ಪ್ರಾರಂಭವಾಗಬೇಕು, ಆಗ ಒಬ್ಬ ಖಗೋಳವಿಜ್ಞಾನಿ, ಎಡಿಂಗ್‌ಟನ್ನರ ಬಳಿ ಬಂದು ಅಂದು ಅವರು ಏನು ಹೇಳಲು ಯೋಚಿಸಿರುವರೆಂಬ ಬಗ್ಗೆ ಕೇಳಿದರು. ಅದಕ್ಕೆ ಅವರೇನೂ ನೇರವಾಗಿ ಉತ್ತರಿಸಲಿಲ್ಲ. "ನಿಮಗೊಂದು ಅಚ್ಚರಿಯ ವಿಷಯ ಕಾದಿದೆ" ಎಂದು ಹೇಳಿ ಚಂದ್ರಶೇಖರರತ್ತ ನೋಡಿ ಮುಗುಳ್ನಗೆ ಬೀರಿದರು.

ತಣ್ಣಗಾಗುತ್ತಿರುವ ನಕ್ಷತ್ರವು ತನ್ನದೇ ಆದ ಗುರುತ್ವಾಕರ್ಷಣ ಶಕ್ತಿಗೆ ಒಳಗಾಗಿ ಶ್ವೇತಕುಬ್ಜವೆಂಬ ದಟ್ಟವಾದ ಚಂಡಿನಾಕಾರ ತಳೆಯುವದು. -ಇದು ಆಗ ಪ್ರಚಲಿತವಿದ್ದ ವಿಚಾರ.

ನಕ್ಷತ್ರಗಳ ಭವಿತವ್ಯವನ್ನು ಕುರಿತ ಮೂಲಭೂತ ಪ್ರಶ್ನೆಯನ್ನೇ ಚಂದ್ರಶೇಖರ ತಮ್ಮ ಪ್ರಂಬಧದಲ್ಲಿ ವಿವೇಚಿಸಿದ್ದರು. ಸೂರ್ಯನಷ್ಟು ದ್ರವ್ಯರಾಶಿಯನ್ನು ಹೊಂದಿದ ನಕ್ಷತ್ರವು ಪೃಥ್ವಿಯ ಆಕಾರಕ್ಕೆ ಕುಗ್ಗಿದಾಗ ಸಮತೋಲ ಸ್ಥಿತಿ ತಲುಪುವದು. ನಕ್ಷತ್ರದಲ್ಲಿನ ವಾಯುವು ಕುಗ್ಗಿ ಕುಗ್ಗಿ ಇಲೆಕ್ಟ್ರಾನ್‌ಗಳು ಬೆಳಕಿನ ವೇಗದಲ್ಲಿ ಚಲಿಸುವಂತಹ ಸಾಪೇಕ್ಷಿಕ ವಿನಾಶದ ಹಂತವನ್ನು ತಲುಪಿದಾಗ ಅದರ ಗತಿಯೇನು...? ಚಂದ್ರಶೇಖರ ಇದನ್ನು ಅಭ್ಯಸಿಸಿದ್ದರು.

ಸೂರ್ಯನ ದ್ರವ್ಯರಾಶಿಗಿಂತ ೧.೪ ಪಟ್ಟು ಹೆಚ್ಚು ದ್ರವ್ಯರಾಶಿ ಹೊಂದಿದ ದೊಡ್ಡ ನಕ್ಷತ್ರಗಳಲ್ಲಿ ಚಟುವಟಿಕೆಯಿಂದಿರುವ ಗುರುತ್ವಾಕರ್ಷಣ ಶಕ್ತಿಯ ಪರಿಣಾಮವಾಗಿ ಅದು ಶ್ವೇತ ಕುಬ್ಜದ ಹಂತವನ್ನೂ ಮೀರಿ ಕುಗ್ಗುತ್ತಾ ಹೋಗುವದು. ಎಲ್ಲಿಯವರೆಗೆ...? ಈ ಕುತೂಹಲಕರ ಪ್ರಶ್ನೆಗೆ ಉತ್ತರಿಸುವ ಗೋಜಿಗೆ ಸುಬ್ರಹ್ಮಣ್ಯಮ್ ಹೋಗಲಿಲ್ಲ. "ಭಾರಿ ದ್ರವ್ಯರಾಶಿಯ ಇಂಥ ನಕ್ಷತ್ರ ಶ್ವೇತಕುಬ್ಜದ ಸ್ಥಿತಿ ತಲುಪುವದಿಲ್ಲ. ಇತರ ಸಾಧ್ಯತೆಗಳನ್ನು ತಮ್ಮ ಊಹೆಗೆ ಬಿಡುತ್ತೇನೆ" ಎಂದು ಉತ್ತರಿಸಿ ಸುಮ್ಮನಾದರು.

ಆಗ ಎಡಿಂಗ್‌ಟನ್ನರ ಸರತಿ. "ನಾನು ಈ ಸಭೆಯಿಂದ ಜೀವಂತ ಪಾರಾಗಿ ಹೋಗುವೆನೆಂದು ಹೇಳಲಾರೆ. ಆದರೆ ಸಾಪೇಕ್ಷಿಕ ವಿನಾಶ ಎಂಬ ವಿಚಾರವೇ ಇಲ್ಲ ಎಂಬುದೇ ನನ್ನ ಪ್ರಬಂಧದ ಮುಖ್ಯಾಂಶ" ಎಂದು ನುಡಿದು ಚಂದ್ರಶೇಖರರ ಸಿದ್ಧಾಂತವನ್ನು ಖಂಡಿಸಿ ನುಚ್ಚು

ನೂರು ಮಾಡಿದರು. ಅವರ ಭಾಷಣದ ಉದ್ದಕ್ಕೂ ಅವರ ಹಾಗೂ ಶ್ರೋತೃಗಳ ಕೊಂಕು ನಗೆ ಅಲೆ ಅಲೆಯಾಗಿ ಚಿಮ್ಮುತ್ತಿತ್ತು.

ಚಂದ್ರಶೇಖರರ ತರ್ಕ ಅಥವಾ ಲೆಕ್ಕಾಚಾರಗಳ ಬಗ್ಗೆ ಎಡಿಂಗ್‌ಟನ್ ಎಂದೂ ವಾದವೆಬ್ಬಿಸಲಿಲ್ಲ. "ನಕ್ಷತ್ರವು ವಿಕಿರಣಗೊಳ್ಳುತ್ತ ಕುಗ್ಗುತ್ತಲೇ ಹೋಗುವದು. ವಿಕಿರಣ ಕ್ರಿಯೆಯನ್ನು ಬಿಗಿದು ಹಿಡಿದಿರಿಸುವಷ್ಟು ಗುರುತ್ವಾಕರ್ಷಣ ಶಕ್ತಿಯು ಬಲಗೊಂಡು ನಕ್ಷತ್ರದ ವ್ಯಾಸವು ಕೆಲವೊಂದು ಕಿಲೋಮಿಟರುಗಳಷ್ಟು ಮಾತ್ರ ಆಗುವದು. ಕೊನೆಗೆ ನಕ್ಷತ್ರವು ಶಾಂತವಾಗುವುದು, ಎಂಬುದು ನನ್ನ ಅಭಿಪ್ರಾಯ" ಎಂದು ಹೇಳಿ ಅವರು ತಮ್ಮ ಮಾತನ್ನು ಕೊನೆಗೊಳಿಸಿದರು.

ಇಂದು ಅದಕ್ಕೇ 'ಕೃಷ್ಣವಿವರ'ವೆಂದು ಕರೆಯಲಾಗಿದೆ. ಆದರೆ ಅಂತಹದೇನೂ ಇಲ್ಲ ಎಂದು ಎಡಿಂಗಟನ್ ಆದಿನ ಮಧ್ಯಾಹ್ನ ಹೇಳಿದ್ದರು.

ಅಂತರಾಳದಲ್ಲಿ ಕೆಲವೊಂದು ವಸ್ತುಗಳು ತುಂಬಾ ದಟ್ಟವಾದ ದ್ರವ್ಯರಾಶಿಯನ್ನು ಹೊಂದಿರುತ್ತವೆ. ಅವುಗಳ ಆ ಸಾಂದ್ರತೆಯಿಂದಾಗಿ ವಿಕಿರಣ ಅಷ್ಟೇ ಅಲ್ಲದೇ ಕಣ್ಣಿಗೆ ಕಾಣುವ ಬೆಳಕು ಸಹಿತ ಅವುಗಳ ಮೂಲಕ ದಾಟಿ ಹೋಗಲಾರವು. ಅವೇ 'ಕೃಷ್ಣವಿವರ'ಗಳು. ಚಂದ್ರಶೇಖರರ ಸಿದ್ಧಾಂತದಿಂದಾಗಿ, ಅನೇಕ ದಶಕಗಳ ನಂತರ 'ಕೃಷ್ಣವಿವರ'ಗಳು ಅಸ್ತಿತ್ವದಲ್ಲಿ ಇವೆ ಎಂಬ ವಿಚಾರವನ್ನೂ ಸಾರ್ವತ್ರಿಕವಾಗಿ ಒಪ್ಪಿಕೊಳ್ಳಬೇಕಾಯಿತು.

ಆ ಶುಕ್ರವಾರದ ಸಭೆಯ ನಂತರ, ಅನೇಕ ವರ್ಷಗಳವರೆಗೆ ಎಡಿಂಗ್‌ಟನ್-ಚಂದ್ರಶೇಖರರ ನಡುವೆ ವಾದವಿವಾದ ನಡೆದೇ ನಡೆಯಿತು. ಇಂಗ್ಲಂಡಿನಲ್ಲಿ ಅವರಿಗೆ ಯಾವುದೇ ವಿಶಿಷ್ಟ ಸ್ಥಾನಮಾನ ಅಥವಾ ಅಧಿಕಾರ ಸಿಕ್ಕಬಹುದಾದ ಅವಕಾಶ ತಪ್ಪಿಹೋಯಿತು. ಅವರು ತಮ್ಮ ಸಿದ್ಧಾಂತವನ್ನು ಬಲವಾಗಿ ನಂಬಿದ್ದರು. ಉಳಿದವರು ನಂಬಲಿಲ್ಲ, ನಂತರ ಶಿಕ್ಯಾಗೋ ವಿಶ್ವವಿದ್ಯಾಲಯಕ್ಕೆ ಬಂದಮೇಲೆ ೧೯೩೭ರಲ್ಲಿ ತಮ್ಮ ವಿಚಾರಗಳನ್ನು ಪುಸ್ತಕರೂಪದಲ್ಲಿ ಪ್ರಕಟಿಸಿ ಅದರ ಸಂಬಂಧದ ಚಿಂತೆಯನ್ನು ಮರೆತುಬಿಟ್ಟರು. ಅಂದು ಅಲ್ಲಿಗೇ




"ಈಗ ಗಲಭೆಯ ಪರಿಸ್ಥಿತಿ ನಿಯಂತ್ರಣದಲ್ಲಿದೆ. ಉಳಿದವ ನಾನೊಬ್ಬೇ...

ನಿಂತಿದ್ದ ಆ ವಿವಾದ ಮತ್ತೆ ಚಿಗುರಿತು. ನಕ್ಷತ್ರಗಳ ದ್ರವ್ಯರಾಶಿ, ಸೂರ್ಯನ ದ್ರವ್ಯರಾಶಿಗಿಂತ ೧.೪ ಪಟ್ಟಿಗಿಂತ ಹೆಚ್ಚಿಗೆ ಇರಲಾರದು ಎಂಬ "ಚಂದ್ರಶೇಖರ ಮಿತಿ"ಯನ್ನು ಅನೇಕ ದಶಕಗಳ ನಂತರ ಒಪ್ಪಿಕೊಳ್ಳಲಾಗಿದೆ. ಸಂಕುಚಿತಗೊಳ್ಳುವ ನಕ್ಷತ್ರಗಳು ಕೃಷ್ಣವಿವರಗಳಾಗಿ ಉಳಿದುಕೊಳ್ಳುವವು ಎಂಬ ಸಿದ್ಧಾಂತ ಈಗ ಗ್ರಾಹ್ಯವಾಗಿದೆ.

ತಮ್ಮ ವಿಚಾರಗಳನ್ನು ಗ್ರಂಥರೂಪಕ್ಕೆ ಇಳಿಸಿ ನಕ್ಷತ್ರಗಳ ಬಗೆಗಿನ ಚಿಂತನೆಯನ್ನು ಕೊನೆಗೊಳಿಸಿದ ಡಾ. ಚಂದ್ರಶೇಖರ, ಆಕಾಶಗಂಗೆಯಲ್ಲಿ ನಕ್ಷತ್ರಗಳು ಹಂಚಿಹೋಗಿರುವ ಸಾಧ್ಯಾಸಾಧ್ಯತೆಯ ಬಗ್ಗೆ ಅಭ್ಯಾಸಮಾಡತೊಡಗಿದರು. ಆಕಾಶಗಂಗೆಯೊಳಗಿಂದ ಧುಮಿಕ್ಕುವ ನಕ್ಷತ್ರದ ವೇಗವು ಮಂದವಾದುದು. ಅದಕ್ಕೆ ಸುತ್ತಲಿನ ನಕ್ಷತ್ರಗಳ ಗುರುತ್ವಾಕರ್ಷಣ ಶಕ್ತಿಯಿಂದ ಆಗುವ ಪರಿಣಾಮವೇ ಕಾರಣ. ಈ ಚಾಲನೆಯ ಕಾಲಕ್ಕೆ ಆಗುವ ಘರ್ಷ

ಣೆಯ ಗುಣಲಕ್ಷಣಗಳನ್ನು ಅವರು ಕಂಡುಹಿಡಿದರು.

ಡಾ. ಚಂದ್ರಶೇಖರರ ಗಮನ ಈಗ ಆಕಾಶದಲ್ಲಿನ ನೀಲವರ್ಣದ ಕಡೆಗೆ ಹರಿಯಿತು. ಈ ಬಣ್ಣ ಯಾಕೆ ನೀಲಿಯಾಗಿದೆ? ಎಂಬುದೇ ಅವರ ಜಿಜ್ಞಾಸೆಯ ವಿಷಯ. ಕಳೆದ ಶತಮಾನದಲ್ಲಿ ಬ್ರಿಟನ್ನಿನ ವಿಜ್ಞಾನಿ ಲಾರ್ಡ್ ರ‍್ಯಾಲೆ ಅದಕ್ಕೊಂದು ವಿವರಣೆ ಕೊಟ್ಟಿದ್ದರು. ವಾತಾವರಣಧಲ್ಲಿನ ಅಣುಗಳು ಚಿಕ್ಕ ತರಂಗಾಂತರದ ನೀಲಿ ಪ್ರಕಾಶವನ್ನು ಚದುರುವಂತೆ ಮಾಡುವುವು. ಅಲ್ಲದೇ ಇತರ ಬಣ್ಣದ ಪ್ರಕಾಶವು ದಾಟಿ ಹೋಗುವಂತೆ ಮಾಡುವವು. ಇದರ ಪರಿಣಾಮವಾಗಿ ಆಕಾಶದ ಬಣ್ಣ ನೀಲಿಯಾಗಿದೆ ಎಂಬುದನ್ನು ಗುರುತಿಸಿದ್ದರು. ಆದರೆ ಇದಕ್ಕೆ ನಿಖರವಾದ ಲೆಕ್ಕಾಚಾರ ಸಿಕ್ಕಿರಲಿಲ್ಲ. ೧೯೪೦ರ ಮಧ್ಯಭಾಗದಲ್ಲಿ ಡಾ. ಚಂದ್ರಶೇಖರರು ಲಾರ್ಡ್ ರ‍್ಯಾಲೆಯವರ ವಿಚಾರಗಳನ್ನು ದೃಢಪಡಿಸಿದರು.

ಇಷ್ಟೆಲ್ಲ ಸಾಧನೆಗಳಲ್ಲದೇ ಇನ್ನೂ ಕೆಲ ವಿಶಿಷ್ಟ ವಿಷಯಗಳನ್ನು ಅವರು ಅಭ್ಯಾಸ ಮಾಡತೊಡಗಿದರು. ಕಾಂತ ಕ್ಷೇತ್ರಗಳಲ್ಲಿ ಉಷ್ಣ ಪ್ರವಹನಶೀಲ ವಸ್ತುಗಳ ನಡವಳಿಕೆ ಪರಿಭ್ರಮಿಸುತ್ತಿರುವ ಕಾಯಗಳ ಸ್ಥಿರತೆ; ಸಾಪೇಕ್ಷವಾದದ ಸಾಮಾನ್ಯ ಸಿದ್ಧಾಂತ ಮುಂತಾದವನ್ನು ಗಹನವಾಗಿ ಅಭ್ಯಸಿಸಿದರು. ಕೊನೆಗೆ ಮತ್ತೊಮ್ಮೆ ಬೇರೊಂದು ವಿಧಾನದಿಂದ ಕೃಷ್ಣವಿವರಗಳ ಅಧ್ಯಯನವನ್ನು ಕೈಕೊಂಡರು. ಅವು ಹೊರಗಿನ ಏರುಪೇರು, ಗುರುತ್ವಾಕರ್ಷಣೆಯ ಏರಿಳಿತಗಳು ಹಾಗೂ ವಿದ್ಯುತ್ ಕಾಂತ ಶಕ್ತಿಯ ತರಂಗಗಳಿಂದ ಯಾವ ರೀತಿಯ ಪರಿಣಾಮಕ್ಕೊಳಗಾಗುವವು ಎಂಬುದನ್ನು ಅಭ್ಯಾಸ ಮಾಡಿ ಸಂಭಾವ್ಯ ಪರಿಣಾಮಗಳ ಕುರಿತು ಗ್ರಂಥ ರಚಿಸಿದರು. ತಮ್ಮ ವೈಜ್ಞಾನಿಕ ಜೀವನದ ಪ್ರಾರಂಭದಲ್ಲಿ ಈ ಕೃಷ್ಣವಿವರಗಳ ವಿಚಾರ ಒಂದು ಅಸಂಬದ್ಧ ಕಲ್ಪನೆ ಎನಿಸಿತ್ತು. ತಾವು ಕೈಕೊಂಡಿದ್ದ ಅತ್ಯಂತ ಕಠಿಣ ಕಾರ್ಯವಿದು ಎಂದೂ ಅವರು ಭಾವಿಸಿದ್ದರು. ಆ ದೃಷ್ಟಿಯಿಂದ ನೋಡಿದಾಗ ಅವರ ಪರಿಶ್ರಮ ಸಫಲವಾಗಿದೆ.

ಡಾ. ಚಂದ್ರಶೇಖರರು ಅವಸರಪಟ್ಟು ಏನನ್ನಾದರೂ ಸಾಧಿಸಬಯಸಲಿಲ್ಲ. ಯಾವುದೇ ಒಂದು ವಿಷಯವನ್ನು ಎತ್ತಿಕೊಂಡಾಗ ಸಮಗ್ರವಾಗಿ ಅಭ್ಯಸಿಸಬೇಕೆಂಬುದು ಅವರ ಹಟ. ಇತರರು ಅದನ್ನು ವ್ಯರ್ಥಶ್ರಮವೆಂದು ಟೀಕಿಸಿದರೂ ಅವರು ಚಿಂತಿಸುತ್ತಿರಲಿಲ್ಲ. ಇದಕ್ಕೆ ಒಳ್ಳೇ ಉದಾಹರಣೆಯೆಂದರೆ ಎಲಿಪ್ಸಾಯಿಡ್ಸ್ ಎಂಬ ಭೂಮಿತಿ ಶಾಸ್ತ್ರದಲ್ಲಿನ ಅಂಡಾಕಾರದ ವಿಷಯಗಳ ಕುರಿತು, ೧೯೬೦ರಲ್ಲಿ ಅವರೇ ಒಂದು ಪುಸ್ತಕ ಬರೆದರು. ಅದರಿಂದ ಯಾವುದೇ ಕೀರ್ತಿ, ಸಂಪತ್ತು ಬರುವದೆಂಬ ಕಲ್ಪನೆ ಕೂಡ ಯಾರಿಗೂ ಇರಲಿಲ್ಲ. ಈ ವಿಷಯದ ಬಗ್ಗೆ ಈ ಮೊದಲು ನಡೆದ ಸಂಶೋಧನೆಯಲ್ಲಿ ಅನೇಕ ಅಂಶಗಳು ಹಾಗೇ ಬಿಟ್ಟು ಹೋಗಿವೆ. ಕೆಲವೊಂದು ಲೋಪಗಳೂ ಆಗಿವೆ.

ಇನ್ನೂ ಕೆಲ ತಪ್ಪು ವಿಚಾರಗಳು ಇದ್ದುದು ಸ್ಪಷ್ಟವಾಗಿ ಕಾಣಿಸುತ್ತದೆ. ಇವೆಲ್ಲ ದೋಷಗಳೂ ಅಲಕ್ಷಿಸಲ್ಪಟ್ಟು ಹಾಗೇ ಉಳಿದುಬಿಡುವದು ಕನಿಕರಪಡುವಂಥ ವಿಚಾರ ಎಂದು ಅವರೇ ತಮ್ಮ ಪುಸ್ತಕದ ಮುನ್ನುಡಿಯಲ್ಲಿ ಹೇಳಿದ್ದಾರೆ. ಇಂಥ ಹಿನ್ನೆಲೆಯಲ್ಲಿ ಡಾ. ಚಂದ್ರಶೇಖರ ಆ ವಿಷಯವನ್ನು ವ್ಯವಸ್ಥಿತವಾಗಿ ವಿಶ್ಲೇಷಿಸಿ ಅಭ್ಯಾಸಮಾಡಿದರು. ಪರಿಭ್ರಮಿಸುತ್ತಿರುವ ಅಂಡಾಕಾರದ ವಸ್ತುವಿನಲ್ಲಿಯ ಗುಣವಿಶೇಷಗಳನ್ನು ಅದರಲ್ಲಿನ ದ್ರವ್ಯರಾಶಿಯನ್ನು ಬಿಗಿಯಾಗಿ ಹಿಡಿದುಕೊಂಡಿರುವ ಗುರುತ್ವಶಕ್ತಿ; ಅದನ್ನು ಹೊರಗೆ ಸೆಳೆಯುವಂತಹ ಪ್ರತ್ಯಾವರ್ತನ ಕ್ರಿಯೆ ಮತ್ತು ಅದು ಅಸ್ಥಿರಗೊಳ್ಳುವಂತಹ ಹಂತಗಳನ್ನು ವಿಶ್ಲೇಷಿಸಿ ಅವನ್ನೂ ಕ್ರಮಬದ್ಧವಾದ ರೀತಿಯಲ್ಲಿ ಮಂಡಿಸಿದರು. ಮಾದರೀಯವಾದ ಕಾಲ್ಪನಿಕ ವಸ್ತುಗಳ ಬಗೆಗೆ ಅಧ್ಯಯನ ನಡೆಸಿ, ಇವರು ವ್ಯರ್ಥಕಾಲಹರಣ ಮಾಡುತ್ತಿದ್ದಾರೆ, ವಿಶ್ವದಲ್ಲಿ ಅಸ್ತಿತ್ವದಲ್ಲಿಯೇ ಇಲ್ಲದ ಇಂಥ ಅವಾಸ್ತವಿಕ ವಿಷಯದ ಬಗ್ಗೆ ಯಾಕೆ ತಲೆಕೆಡಿಸಿಕೊಳ್ಳಬೇಕು! ಇದೆಲ್ಲ ಗಾಳಿಯನ್ನು ಗುದ್ದಿ ಮೈಕೈ ನೋವು ಮಾಡಿಕೊಂಡಂತೆ ಎಂದು ಅನೇಕ ವಿಜ್ಞಾನಿಗಳು ಆಗ ಅಭಿಪ್ರಾಯಪಟ್ಟರು. ಅದು ಒಂದು ಬಗೆಯ ಟೀಕೆಯೂ ಆಗಿತ್ತು. ಆದರೂ ಮುಂದೆ ೨೦ ವರ್ಷಗಳ

ನಂತರ ಆ ಪುಸ್ತಕವನ್ನು ಅಭ್ಯಸಿಸಲಾಗುತ್ತಿದೆ. ಹೀಗೆ ಆಗಬಹುದೆಂದು ಯಾರೂ ಎಣಿಸಿರಲಿಲ್ಲ. ಈ ಕಾಲ್ಪನಿಕ ವಸ್ತುಗಳ ಗುಣಧರ್ಮಗಳು ಅನೇಕ ನಿಜವಾದ ನಕ್ಷತ್ರಪುಂಜಗಳಲ್ಲಿ ಕಂಡುಬಂದಿವೆ. ಆಕಾಶಗಂಗೆಯು ಪರಿಭ್ರಮಿಸುತ್ತಿರುವಾಗ ಅದರಲ್ಲಿನ ನಕ್ಷತ್ರಗಳನ್ನು ಒಂದುಗೂಡಿಸಿ ಹಿಡಿಯುವ ಶಕ್ತಿ ಯಾವುದೆಂಬುದನ್ನು ತಿಳಿದುಕೊಳ್ಳಲು ವಿಜ್ಞಾನಿಗಳು ಇಂದು ಈ ಪುಸ್ತಕವನ್ನು ಉಪಯೋಗಿಸಿಕೊಳ್ಳುತ್ತಿದ್ದಾರೆ.

ವಿದ್ಯಾರ್ಥಿಗಳಿಗೆ ಕಲಿಸುವದರಲ್ಲಿಯೂ ಚಂದ್ರಶೇಖರರಿಗೆ ಬಹಳ ಆಸಕ್ತಿ. ಹಸುವಿನಂತೆ ತಮ್ಮ ಜ್ಞಾನವನ್ನು ಧಾರೆ ಎರೆಯುವ ಮನೋಭಾವ. ೧೯೪೬ರ ಸಮಯ. ಶಿಕ್ಯಾಗೋ ವಿಶ್ವವಿದ್ಯಾಲಯದಿಂದ ವಿಸ್ಕಾನ್ಸಿನ್‌ನಲ್ಲಿದ್ದ ವೇಧಶಾಲೆಗೆ ಪ್ರತಿವಾರಾಂತ್ಯವೂ ಹೋಗುತ್ತಿದ್ದರು. ಅವರು ಕಾರನ್ನು ತಾವೇ ನಡೆಸಿಕೊಂಡು ಹೋಗುತ್ತಿದ್ದುದು ಕೇವಲ ಇಬ್ಬರು ವಿದ್ಯಾರ್ಥಿಗಳಿಗೆ ಪಾಠ ಹೇಳಿಕೊಡಲು! ಅದು ಅನೇಕರಿಗೆ ಅಚ್ಚರಿಯ ವಿಷಯ. ೧೧ ವರ್ಷಗಳ ನಂತರ ಈ ಇಬ್ಬರೂ ವಿದ್ಯಾರ್ಥಿಗಳು ೧೯೫೭ರಲ್ಲಿ ಭೌತಶಾಸ್ತ್ರಕ್ಕೆ ಕೊಡಮಾಡಿದ ನೋಬೆಲ್ ಪಾರಿತೋಷಕದಲ್ಲಿ ಪಾಲುದಾರರಾಗಿದ್ದರು.

ಬಹುಬಗೆಯ ಅಭಿರುಚಿಯುಳ್ಳ ಡಾ. ಚಂದ್ರಶೇಖರರು ನಕ್ಷತ್ರಗಳು ಹಾಗೂ ಪರಸ್ಪರ ನಕ್ಷತ್ರಗಳ ನಡುವಿನ ಅವಕಾಶದಲ್ಲಿ ಇರುವ ಕಾಂತ ಕ್ಷೇತ್ರದ ಶಕ್ತಿ ಎಷ್ಟು ಎಂಬುದನ್ನು ಅರಿತುಕೊಳ್ಳುವದಕ್ಕಾಗಿ ಹೆಚ್ಚಿನ ಅಭ್ಯಾಸ ನಡೆಸಿದರು. ಅನೇಕ ವರ್ಷಗಳನ್ನವರು ಈ ಅಧ್ಯಯನದಲ್ಲಿಯೇ ಕಳೆದರು. ಪರಮಾಣು ಶಾಸ್ತ್ರದ ಆಧುನಿಕ ಸಿದ್ಧಾಂತಗಳ ಹಿನ್ನೆಲೆಯಲ್ಲಿ ನಕ್ಷತ್ರಗಳ ರೂಪ ರಚನೆಯನ್ನು ಅಭ್ಯಸಿಸಿದ ಖಗೋಳ ವಿಜ್ಞಾನಿಗಳಲ್ಲಿ ಇವರೇ ಮೊದಲಿಗರು. ಕಾಂತ ಕ್ಷೇತ್ರ ಹಾಗೂ ವಿದ್ಯುತ್ ಕ್ಷೇತ್ರಗಳಲ್ಲಿ ವಿದ್ಯುತ್‌ವಾಹಿ ಕಣಗಳ ನಡವಳಿಕೆಗೆ ಸಂಬಂಧಿಸಿದ ಪ್ಲಾಸ್ಮಾ ಫಿಜಿಕ್ಸಿನ ಅಧ್ಯಯನವನ್ನೂ ಅವರು ಪೂರೈಸಿದ್ದಾರೆ.

ಡಾ. ಚಂದ್ರಶೇಖರ ತಮ್ಮ ಅಭ್ಯಾಸದ ಪೀಠಕ್ಕೆ ಅಂಟಿಕೊಂಡೇ ಕೆಲಸ ಮಾಡುವ ಭೌತವಿಜ್ಞಾನಿ. ತಮ್ಮ ಸಂಶೋಧನೆಗಾಗಿ ಅವರೆಂದೂ ದೂರದರ್ಶಕಗಳನ್ನು ಬಳಸಲಿಲ್ಲ. ಅವರು ಕೇವಲ ಗಣಿತದ ಲೆಕ್ಕಾಚಾರಗಳನ್ನು ಬಳಸಿಕೊಂಡು ಬ್ರಹ್ಮಾಂಡದಲ್ಲಿನ ಒಂದಿಲ್ಲೊಂದು ಅಂಶವನ್ನು ಸೂತ್ರ, ಸಮೀಕರಣಗಳ ಮೂಲಕ ಮಂಡಿಸುತ್ತಿದ್ದರು. ಈ ಬ್ರಹ್ಮಾಂಡವು ಸೃಷ್ಟಿಯಾದುದರ ಮೂಲ ಕಾರಣವನ್ನು ಶಾಸ್ತ್ರೀಯವಾಗಿ ಕಂಡು ಹಿಡಿಯಬಹುದು ಎಂಬ ಬಗ್ಗೆ ಇತ್ತೀಚಿನ ಸಂಶೋಧನೆಗಳು ಹೊಸ ಆಶೆಯನ್ನು ಕುದುರಿಸಿವೆ ಎಂದೂ ಅವರು ಅಭಿ










ದೀಪಾವಳಿ ಪರೀಕ್ಷೆ..?!

ಪ್ರಾಯಿಪಟ್ಟಿದ್ದಾರೆ.

ಮದ್ರಾಸಿನಲ್ಲಿನ ಎಡ್ವರ್ಡ್ ಇಲಿಯಟ್ಸ್ ರೋಡಿನ ಆಚೆಗೆ (ಈಗ ಡಾ. ರಾಧಾಕೃಷ್ಣನ್ ಸಲಾಯ್ ಎಂದು ಮರುನಾಮಕರಣ ಮಾಡಲಾಗಿದೆ) ಇರುವ 'ಚಂದ್ರವಿಲಾಸ' ಡಾ. ಚಂದ್ರಶೇಖರ ಅವರ ಪಿತ್ರಾರ್ಜಿತ ಮನೆ. ಸಂಗೀತ ಮತ್ತು ಗಣಿತಶಾಸ್ತ್ರದ ವಾಸನೆ ಇಲ್ಲಿ ತುಂಬಿ ಹೊಮ್ಮುತ್ತಿರುತ್ತದೆ. ಡಾಕ್ಟರರ ದಿವಂಗತ ತಂದೆ, ಸಿ.ಎಸ್. ಅಯ್ಯರ್ ಅಕೌಂಟಂಟ್ ಜನರಲ್ ಆಗಿದ್ದರು. ಸಂಗೀತ ಶಾಸ್ತ್ರದ ಬೆಳವಣಿಗೆಗೆ ಅವರು ಸಲ್ಲಿಸಿದ ಸೇವೆ ತುಂಬ ಜನಮೆಚ್ಚುಗೆ ಪಡೆದಿದೆ. ಅವರೇ ಕರ್ನಾಟಕ ಸಂಗೀತದ ತವರು ಎನಿಸಿದ ಮದ್ರಾಸ್ ಮ್ಯೂಜಿಕ್ ಅಕೆಡೆಮಿಯ ಸಂಸ್ಥಾಪಕರು. ಡಾ. ಚಂದ್ರಶೇಖರರನ್ನು ಅವರ ಕುಟುಂಬದ ಜನ "ಚಂದ್ರ" ಎಂದೇ ಕರೆಯುತ್ತಿದ್ದರು. ಅವರಿಗೆ ತಮ್ಮ ತಂದೆಯಂತೆ ಹಾಗೂ ಮದ್ರಾಸ್ ಕಾಲೇಜಿನಲ್ಲಿ ಗಣಿತ ಶಾಸ್ತ್ರದ ಪ್ರಾಧ್ಯಾಪಕರಾಗಿದ್ದ ಅಜ್ಜ ಆರ್. ಚಂದ್ರಶೇಖರ ಅಯ್ಯರ್ ಅವರಹಾಗೆ ಗಣಿತ ಪಂಡಿತನಾಗಬೇಕೆಂಬ ಅಪೇಕ್ಷೆ ಇತ್ತು. ಆದರೆ ನೋಬೆಲ್ ಪ್ರಶಸ್ತಿ ವಿಜೇತ ಚಿಕ್ಕಪ್ಪ ಡಾ.ಸಿ.ವಿ.ರಾಮನ್ ಅವರ ಹಾಗೆ ಭೌತಶಾಸ್ತ್ರದಲ್ಲಿ ಪರಿಣತಿ ಪಡೆಯಬೇಕೆಂಬುದು ಅವರ ತಂದೆಯವರ ಆಗ್ರಹ.

ಈಗ ಪಾಕಿಸ್ತಾನದಲ್ಲಿ ಸೇರಿರುವ ಲಾಹೋರದಲ್ಲಿ ಜನಿಸಿದರೂ, ಚಂದ್ರಶೇಖರ ಬಾಲ್ಯವನ್ನು ಕಳೆದದ್ದು ಮದ್ರಾಸಿನಲ್ಲಿ. ಅಕ್ಕತಂಗಿಯರು ಹಾಗೂ ಅಣ್ಣ ತಮ್ಮಂದಿರ ಹಾಗೆ ಅವರೂ ೧೦ ವರ್ಷದ ಸೆಕೆಂಡರಿ ಶಿಕ್ಷಣವನ್ನು ಐದು ವರ್ಷಗಳಲ್ಲಿ ಮುಗಿಸಿದರು. ಅವರ ಬಹುಮಟ್ಟಿಗಿನ ವಿದ್ಯಾಭ್ಯಾಸವನ್ನು ತಂದೆ ತಾಯಿಗಳು ಮನೆಯಲ್ಲಿಯೇ ಪೂರೈಸಿದರು. ಮದ್ರಾಸಿನಲ್ಲಿನ ಹಿಂದು ಹೈಸ್ಕೂಲಿನಲ್ಲಿ ಮ್ಯಾಟ್ರಿಕ್ಯುಲೇಶನ್ ಮುಗಿಸಿ, ೨೦ನೆಯ ವಯಸ್ಸಿನಲ್ಲಿ ಪ್ರೆಸಿಡೆನ್ಸಿ ಕಾಲೇಜಿನಿಂದ ಭೌತಶಾಸ್ತ್ರದಲ್ಲಿ ಬಿ.ಎ. ಪದವಿಯನ್ನು ಪ್ರಶಸ್ತಿ ಸಹಿತ ಪಡೆದರು.

ಚಂದ್ರಶೇಖರರ ಜನ್ಮದಿನವನ್ನು ನೆನಪಿಡುವದು ತುಂಬ ಸುಲಭ. ೧೯-೧೦-೧೯೧೦. ಅವರು ೧೯೩೦ರಲ್ಲಿ ಪದವಿ ಗಳಿಸಿದ್ದೂ ಒಂದು ಯೋಗಾಯೋಗವೆ. ಅದೇ ವರ್ಷ ಅವರ ಚಿಕ್ಕಪ್ಪ ಡಾ. ಸಿ.ವಿ. ರಾಮನ್ ಭೌತಶಾಸ್ತ್ರದಲ್ಲಿನ ಸಂಶೋಧನೆಗಾಗಿ ನೋಬೆಲ್ ಪಾರಿತೋಷಕ ಪಡೆದರು.

ಪದವಿ ಪರೀಕ್ಷೆಯಲ್ಲಿಯ ಸಾಧನೆಯಿಂದಾಗಿ ಅವರಿಗೆ ಶಿಷ್ಯವೇತನ ದೊರಕಿತು. ಆದರಿಂದಾಗಿ ಕೇಂಬ್ರಿಜ್ ವಿಶ್ವವಿದ್ಯಾಲಯದಲ್ಲಿ ಹೆಚ್ಚಿನ ಶಿಕ್ಷಣ ಪೂರೈಸಲು ಸಾಧ್ಯವಾಯಿತು. ಕೇಂಬ್ರಿಜ್‌ಗೆ ಹೋಗುವದಕ್ಕಿಂತ ಮೊದಲೇ ಭಾರತದಲ್ಲಿನ ಭೌತಶಾಸ್ತ್ರಕ್ಕೆ ಮೀಸಲಾದ ಅನೇಕ ಪತ್ರಿಕೆಗಳಲ್ಲಿ ಪ್ರಕಟವಾದ ಲೇಖನಗಳಿಂದಾಗಿ ಚಂದ್ರಶೇಖರ ತಮ್ಮ ಹದಿವಯದಲ್ಲಿಯೇ ಸಾಕಷ್ಟು ಹೆಸರು ಪಡೆದಿದ್ದರು. ಕೇಂಬ್ರಿಜ್‌ನಲ್ಲಿಯ ಸತತ ಅಧ್ಯಯನದಿಂದಾಗಿ ತಮ್ಮ ೨೪ನೆಯ ವಯಸ್ಸಿನಲ್ಲಿ ಡಾಕ್ಟರೇಟ್ ಪದವಿಯನ್ನು ಪಡೆದರು. ನಂತರ ಸ್ವದೇಶಕ್ಕೆ ಬಂದಾಗ, ಪ್ರೆಸಿಡೆನ್ಸಿ ಕಾಲೇಜಿನಲ್ಲಿ ತಮ್ಮ ಜೊತೆ ಅಭ್ಯಾಸ ಮಾಡಿದ್ದ ಕು. ಲಲಿತಾ ಅವರೊಡನೆ ವಿವಾಹ ಜರುಗಿತು. ಉದ್ಯೋಗ ದೊರಕಿಸಿ ಇಲ್ಲಿಯೇ ನೆಲೆನಿಲ್ಲಲೂ ಹವಣಿಸಿದರು. ಆದರೆ ಈ ಪ್ರತಿಭಾವಂತ ಭೌತಶಾಸ್ತ್ರಜ್ಞನಿಗೆ ಮದ್ರಾಸ್ ವಿಶ್ವವಿದ್ಯಾಲಯದಲ್ಲಿ ಉದ್ಯೋಗಾವಕಾಶ ಸಿಕ್ಕಲಿಲ್ಲ. ವಿವಾಹದ ನಂತರ ಡಾ. ಚಂದ್ರಶೇಖರ ಸುಮಾರು ೧೫ ವರ್ಷ ಕಾಲ ವಿದೇಶಗಳಲ್ಲಿಯೇ ಕಳೆದರು. ಅವರು ಕೇಂಬ್ರಿಜ್‌ನ ಟ್ರಿನಿಟಿ ಕಾಲೇಜಿನಲ್ಲಿ ಫೆಲೊ ಆಗಿದ್ದರು. ೧೯೩೭[illegible]ಗೂ ವೈಜ್ಞಾನಿಕ ಕ್ಷೇತ್ರದಲ್ಲಿನ ನಾಮಾಂಕಿತ ವ್ಯಕ್ತಿಗಳೊಂದಿಗೆ ಕೆಲಸ ಮಾಡುವ ಅವಕಾಶ ಲಭಿಸಿತು. ಆಗ ಅವರು ಗೋಟೆಂಜೆನ್, ಲೀಜ್, ಮಾಸ್ಕೋ, ಲೆನಿನ್‌ಗ್ರಾಡ್, ಪ್ಯಾರಿಸ್ ಹಾಗೂ ಹಾರ್ವರ್ಡ್‌ಗಳಲ್ಲಿ ಸಂಚರಿಸಿದರು. ಅದೇ ಕಾಲಕ್ಕೆ ಶಿಕ್ಯಾಗೋ ವಿಶ್ವವಿದ್ಯಾಲಯದ ಕುಲಪತಿಗಳು ಒಬ್ಬ ಅತ್ಯುತ್ತಮ ಮೇಧಾವಿ ಖಗೋಳವಿಜ್ಞಾನಿಯನ್ನು ಹುಡುಕಿ ತರಬೇಕೆಂದು ಖ್ಯಾತ ಖಗೋಳವಿಜ್ಞಾನಿ ಓಟ್ಟೊ ಸ್ಟ್ರುವೆ ಅವರಿಗೆ ತಿಳಿಸಿದ್ದರು. ಪ್ರೊ. ಸ್ಟ್ರುವೆ ಅವರು ಡಾ. ಚಂದ್ರಶೇಖರರನ್ನು ಗುರುತಿಸಿ ಶಿಕ್ಯಾಗೋ ವಿಶ್ವವಿದ್ಯಾಲಯಕ್ಕೆ ಬರುವಂತೆ ಆಮಂತ್ರಿಸಿದರು.

ಯಾರ್ಕ್ ವೇಧಶಾಲೆಯಲ್ಲಿ ಅವರ ಕೆಲಸ. ಶಿಕ್ಯಾಗೋ ವಿಶ್ವವಿದ್ಯಾಲಯದ ಫ್ಯಾಕಲ್ಟಿಯನ್ನು ಸೇರಿದ ಅವರು ೧೯೪೩ರಲ್ಲಿ ಪೂರ್ಣಾಧಿಕಾರದ ಪ್ರಾಧ್ಯಾಪಕರಾದರು. ೧೯೪೬ರಲ್ಲಿ ವಿಶಿಷ್ಟ ಸೇವೆಯ ಪ್ರಾಧ್ಯಾಪಕರೆಂದು ನೇಮಕ ಮಾಡಿ ಶಿಕ್ಯಾಗೋ ವಿಶ್ವವಿದ್ಯಾಲಯವು ಅವರಿಗೆ ಅತ್ಯುಚ್ಚ ಗೌರವವನ್ನು ನೀಡಿತು.

ಪ್ರಾಧ್ಯಾಪಕ ಚಂದ್ರಶೇಖರ ಅವರನ್ನು ೧೯೫೦ರ ಸುಮಾರಿಗೇ ಶಿಕ್ಯಾಗೋ ವಿಶ್ವವಿದ್ಯಾಲಯದಲ್ಲಿನ ಒಂದು ಅಧ್ಯಯನ ಪೀಠಕ್ಕೆ ಆಯ್ಕೆ ಮಾಡಿದಾಗ ಅನೇಕರು ಮೂಗು ಮುರಿದರು. ಕಪ್ಪು ವರ್ಣೀಯನನ್ನು ಆ ಸ್ಥಾನಕ್ಕೆ ಆರಿಸಿದುದನ್ನು ವಿರೋಧಿಸಿದರು. ಆದರೆ ವಿದ್ಯಾಪಕ್ಷಪಾತಿಯಾದ ವಿಶ್ವವಿದ್ಯಾಲಯವು ಅದಕ್ಕೆ ಸೊಪ್ಪು ಹಾಕಲಿಲ್ಲ.

೧೯೪೬ರ ನಂತರ ಅವರಿಗೆ ಅನೇಕ ಪದವಿ ಪ್ರಶಸ್ತಿಗಳು ದೊರಕಿದವು. ಅಮೆರಿಕನ್ ಅಸ್ಟ್ರಾನಾಮಿಕಲ್ ಸೊಸೈಟಿಯು ೧೯೫೨ರಲ್ಲಿ ಬ್ರೂಸ್ ಚಿನ್ನದ ಪದಕವನ್ನು ದಯಪಾಲಿಸಿತು. ಖಗೋಳ ವಿಜ್ಞಾನದ ಅಭ್ಯಾಸಕ್ಕಾಗಿ ಬೇಕಾಗುವ ಗಣಿತದ ಹೊಸ ವಿಧಾನಗಳನ್ನು ಅಭಿವೃದ್ಧಿಪಡಿಸಿದ್ದಕ್ಕಾಗಿ ಬ್ರಿಟನ್ನಿನ ರಾಯಲ್ ಅಸ್ಟ್ರಾನಾಮಿಕಲ್ ಸೊಸೈಟಿಯು ೧೯೫೩ರಲ್ಲಿ ಚಿನ್ನದ ಪದಕವನ್ನು ನೀಡಿ ಗೌರವಿಸಿತು. ಅದು ಖಗೋಳವಿಜ್ಞಾನದಲ್ಲಿನ ಸಾಧನೆಗಾಗಿ ನೀಡಿದ ಅತ್ಯುನ್ನತ ಪದಕವಾಗಿತ್ತು. ೧೯೬೨ರಲ್ಲಿ ಮಹಾರಾಣಿ ಎರಡನೆಯ ಎಲಿಜಾಬೆಥರು, ಲಂಡನ್ನಿನ ರಾಯಲ್ ಸೊಸೈಟಿಯ ರಾಯಲ್ ಪದಕವನ್ನು ದಯಪಾಲಿಸಿದರು. ಅಮೇರಿಕನ್ ಅಕೆಡೆಮಿ ಆಫ್ ಆರ್ಟ್ಸ್ ಆ್ಯಂಡ್ ಸೈನ್ಸ್‌ದವರ ರಮ್‌ಫೋರ್ಡ್ ಪದಕ, ಪದಾರ್ಥ ವಿಜ್ಞಾನ ವಿಷಯಕ ಅಮೇರಿಕೆಯ ರಾಷ್ಟ್ರೀಯ ಪದಕವನ್ನು ಅಧ್ಯಕ್ಷ ಲಿಂಡನ್ ಜಾನ್‌ಸನ್ನರು ೧೯೬೭ರಲ್ಲಿ ನೀಡಿದರು. ಅಮೇರಿಕೆಯ ರಾಷ್ಟ್ರೀಯ ವಿಜ್ಞಾನ ಅಕೆಡೆಮಿಯ ಡ್ರೇಪರ್ ಪ್ರಶಸ್ತಿ ಇವೆಲ್ಲ ಅವರಿಗೆ ದೊರಕಿದ ಪ್ರಶಸ್ತಿ ಹಾಗೂ ಗೌರವಗಳು.

ಈ ಶತಮಾನದ ಎರಡನೆಯ ದಶಕವನ್ನು ಭೌತಶಾಸ್ತ್ರದಲ್ಲಿನ ಸುವರ್ಣಯುಗವೆಂದೇ ಬಣ್ಣಿಸಲಾಗಿದೆ. ಆ ಕಾಲದಲ್ಲಿನ ಸಂಶೋಧನೆಗಳಿಂದ ತಮಗೆ ಅತ್ಯಂತ ಭಾವೋದ್ರೇಕವಾಯಿತು. ಅದರಿಂದಾಗಿಯೇ ಭೌತಶಾಸ್ತ್ರದ ಅಭ್ಯಾಸದಲ್ಲಿ ಆಸಕ್ತಿ ಬೆಳೆಯಿತೆಂದು ಡಾ. ಚಂದ್ರಶೇಖರ ಹೇಳಿದ್ದಾರೆ. ಇದೇ ಅವಧಿಯಲ್ಲಿ ಪ್ರಕಟವಾದ ಸಮರಫೀಲ್ಡ್‌ರ "ಆಟಾಮಿಕ್ ಸ್ಟ್ರಕ್ಚರ್ ಆ್ಯಂಡ್ ಸ್ಪೆಕ್ಟ್ರಲ್ ಲೈನ್ಸ್" ಹಾಗೂ ಕ್ರಾಂಪ್ಟನ್ನರ "ಎಕ್ಸರೇಜ್ ಆ್ಯಂಡ್ ಇಲೆಕ್ಟ್ರಾನ್" ಎಂಬ ಗ್ರಂಥಗಳು ಪಠ್ಯಪುಸ್ತಕಗಳಾಗಿರದಿದ್ದರೂ ಅವನ್ನು ಓದಿದ್ದರಿಂದ ತಮಗೆ ಉತ್ಸಾಹ ಕುದುರಿತೆಂದು ಹೇಳಿದ್ದಾರೆ. ಆ ಗ್ರಂಥಗಳು ಹಾಗೂ ನಿಯತಕಾಲಿಕೆಗಳಲ್ಲಿನ ಲೇಖನಗಳ ಅಭ್ಯಾಸದಿಂದ ಚಂದ್ರಶೇಖರರಿಗೆ 'ಥರ್ಮೋಡೈನ್ಯಾಮಿಕ್ಸ್ ಆಫ್ ದಿ ಕ್ರಾಂಪ್ಟನ್ ಇಫೆಕ್ಟ್' ಎಂಬ ಸಂಶೋಧನಾತ್ಮಕ ಪ್ರಬಂಧ ಬರೆಯಲು ಸಹಾಯವಾಯಿತು. ೧೯೨೮ರ ಅಕ್ಟೋಬರ್ ೧೫ರಂದು ಈ ಲೇಖನ "ಇಂಡಿಯನ್ ಜರ್ನಲ್ ಆಫ್ ಫಿಜಿಕ್ಸ್" ಪತ್ರಿಕೆಯಲ್ಲಿ ಪ್ರಕಟವಾದಾಗ ಅವರಿಗೆ ಇನ್ನೂ ೧೮ ವರ್ಷ ತುಂಬಿರಲಿಲ್ಲ.

ಬ್ರಿಟನ್ನಿನ ರಾಯಲ್ ಸೊಸಾಯಿಟಿಯ ಫೆಲೊ ಎಂದು ಆಯ್ಕೆಗೊಂಡ ಕೆಲವೇ ಜನ ಭಾರತೀಯರಲ್ಲಿ ಇವರು ಒಬ್ಬರು. ಹಾಗೆ ಆಯ್ಕೆಯಾದವರಲ್ಲಿ ಇವರೇ ಅತ್ಯಂತ ಚಿಕ್ಕವಯಸ್ಸಿನವರು.

ಡಾ. ಚಂದ್ರಶೇಖರ ತುಂಬಾ ಸರಳ ಜೀವಿ. ನಿರಾಡಂಬರದ ಜೀವನ ಅವರದು. ಊಟ ಉಪಚಾರಗಳಲ್ಲಿಯೂ ಹಿತಮಿತ. ಶಿಕ್ಯಾಗೋ ವಿಶ್ವವಿದ್ಯಾಲಯದ ಎತ್ತರದ ಕಟ್ಟಡಗಳಲ್ಲಿನ ಅತ್ಯಾಧುನಿಕ ಪರಿಸರದಲ್ಲಿ ಅವರು ಪತ್ನಿ ಲಲಿತಾರೊಂದಿಗೆ ವಾಸಿಸುತ್ತಿದ್ದರು. ಆದರೆ ಅವರಿಗೆ ಅಲ್ಲಿನ ವಾತಾವರಣ ಎಷ್ಟರ ಮಟ್ಟಿಗೆ ಒಗ್ಗಿತು ಎಂಬುದು ಮಾತ್ರ ತಿಳಿಯಲ್ಲಿಲ್ಲ. ಅಂಥದರಲ್ಲಿಯೂ ತಮ್ಮ ಭಾರತೀಯ ಜೀವನ ಪದ್ಧತಿಯನ್ನು ಬಿಟ್ಟುಕೊಡಲಿಲ್ಲ. ಅವರು ಕಟ್ಟುನಿಟ್ಟಿನ ಸಸ್ಯಾಹಾರಿ. ಮದ್ಯಸೇವನೆಯಂತೂ ದೂರದ ಮಾತು. ಧೂಮ್ರಪಾನವೂ ಇರಲಿಲ್ಲ. ತಮ್ಮ ಗೌರವಾರ್ಥ ಅಮೇರಿಕೆಯ ವಿಶ್ವವಿದ್ಯಾಲಯಗಳು ಭೋಜನಕೂಟಗಳನ್ನು ಏರ್ಪಡಿಸಿದಾಗಲೆಲ್ಲ ಶಾಕಾಹಾರವನ್ನೇ ಒದಗಿಸಲಾ

ಗುತ್ತದೆ ಎಂಬುದನ್ನು ಹೇಳುವಾಗ ಡಾ. ಚಂದ್ರ ಶೇಖರ ಹೆಮ್ಮೆಯಿಂದ ಬೀಗುತ್ತಿದ್ದರು.

ತಮ್ಮ ತಾಯಿಯ ಬಗ್ಗೆ ಅವರಿಗೆ ತುಂಬಾ ಅಕ್ಕರೆ. ಅವರು ಆನರ್ಸ್ ಅಂತಿಮ ಪರೀಕ್ಷೆಯ ಸಂದರ್ಭದಲ್ಲಿ ತಾಯಿ ಊಟ ಮಾಡಿ ಹೋಗಲು ಹೇಳಿದರು. ಆದರೆ ಪರೀಕ್ಷೆಯ ಅವಸರದ ನೆಪ ಹೇಳಿ ಹಾಗೇ ಹೊರಟುಹೋದರು. ಪರೀಕ್ಷೆ ಮುಗಿಸಿಕೊಂಡು ಬಂದಾಗ ತಮ್ಮ ತಾಯಿ ಊಟ ಮಾಡದೇ ಕುಳಿತಿದ್ದುದನ್ನು ನೋಡಿದಾಗ ಚಂದ್ರ ಶೇಖರ ಭಾವೋದ್ರಿಕ್ತರಾದರು. ತಾವೆಷ್ಟು ನಿಷ್ಕ ರುಣಿ ಎಂದು ತಮ್ಮನ್ನು ಹಳಿದುಕೊಂಡರು.

ಹೆಚ್ಚಿನ ಅಭ್ಯಾಸಕ್ಕಾಗಿ ಇಂಗ್ಲಂಡಿಗೆ ಹೊರಟು ನಿಂತಾಗ ಅವರಿಗಿನ್ನೂ ೧೯ ವರ್ಷ; ಶಿಷ್ಯವೇತನ ದೊರಕಿದ್ದರಿಂದ ಕೇಂಬ್ರಿಜ್‌ಗೆ ಹೊರಟಿದ್ದರು. ಅವರ ತಾಯಿ ತುಂಬಾ ಸಂಪ್ರದಾಯಸ್ಥರು. ಮಗನು ವಿದೇಶಯಾತ್ರೆ ಕೈಕೊಳ್ಳುವದಕ್ಕೆ ಅಡ್ಡಿಪಡಿ ಸಲಿಲ್ಲ. ಅದಕ್ಕೆ ಪ್ರತಿಯಾಗಿ ತಮ್ಮ ಮಗ ಜಾಗತಿಕ ಬಳಗಕ್ಕೆ ಸೇರಿದವನೆಂದು ಗುರುತಿಸಿದ್ದರು.

ವಿಜ್ಞಾನಿಗಳೆಂದರೆ ಗಂಭೀರ ಸ್ವಭಾವದವರೆಂ ಬುದು ಸಾಮಾನ್ಯ ಕಲ್ಪನೆ. ಡಾ. ಚಂದ್ರಶೇಖರ ಅದಕ್ಕೆ ಅಪವಾದ. ಅಭ್ಯಾಸ ನಿರತರಾಗುವ ಸ್ವಭಾವ ಇದ್ದರೂ ಅವರಲ್ಲಿ ಅಷ್ಟೇ ಹಾಸ್ಯಪ್ರವೃತ್ತಿಯೂ ಇದ್ದಿತು. ಅನೇಕರಿಗೆ ಇದು ಗೊತ್ತೂ ಇಲ್ಲ. ರುಮ್‌ಫೋರ್ಡ್ ಪದಕ ದೊರಕಿದಾಗ ಅವರು ಮನೆಗೆ ಪತ್ರ ಬರೆದು ಆ ವಿಷಯವನ್ನು ತಿಳಿಸಿದ ರೀತಿ ತುಂಬ ರೋಚಕವಾಗಿದೆ. ಅದರಲ್ಲಿ ಅವ ರೊಂದು ವಿನೋದ ಪ್ರಸಂಗ ಉಲ್ಲೇಖಿಸಿದ್ದರು: "ಒಬ್ಬ ದಂಡನಾಯಕನ ಸಮವಸ್ತ್ರದ ಮೇಲೆ ಸಾಲಾಗಿ ಹಚ್ಚಿಕೊಂಡಿದ್ದ ಪದಕಗಳು ಹೊಳೆಯು ತ್ತಿದ್ದವು. ಅದನ್ನು ನೋಡಿ ಮೆಚ್ಚಿದ ಮಹಿಳೆಯೊ ಬ್ಬಳು ಇಷ್ಟೆಲ್ಲ ಪದಕಗಳನ್ನು ಗೆದ್ದದ್ದು ಹೇಗೆ?" ಎಂದು ಕೌತುಕದಿಂದ ಕೇಳಿದಳು. ಅದಕ್ಕೆ ಆ ದಂಡ ನಾಯಕ ಆ ಪದಕಗಳ ಸಾಲಿನಲ್ಲಿಯ ಒಂದು ಗೌಣವಾದ ಪದಕದ ಮೇಲೆ ಬೆರಳಿರಿಸಿದ. 'ಇದನ್ನು ಯಾವುದೋ ತಪ್ಪು ಕಲ್ಪನೆಯಿಂದ ಕೊಡಲಾಯಿತು. ನಂತರ ಅದರ ಹಿಂದಿನಿಂದಲೇ ಉಳಿದೆಲ್ಲ ಪದಕಗಳೂ ಬಂದವು' ಎಂದು ವಿವ ರಿಸಿದ ಎಂದು ಬರೆದು ಬಿಟ್ಟರು.

ಡಾ. ಚಂದ್ರಶೇಖರ ತಮ್ಮ ಸಂಶೋಧನೆಯ ಕಾರ್ಯದಲ್ಲಿ ತೊಡಗಿದ್ದಾಗ, ಬೀಥೋವೆನ್, ಬ್ರಾಮ್ಸ್ ಮತ್ತು ಮೊಜಾರ್ಟರ ಧ್ವನಿ ಮುದ್ರಿಕೆಗಳ ಸಂಗೀ ತದ ಮೃದುವಾದ ಅಲೆಗಳು ತೇಲಿಬರುತ್ತಿದ್ದು ವಂತೆ. ಅವರ ಸಹಧರ್ಮಿಣಿ ಲಲಿತಾ ಮದ್ರಾಸ್ ವಿಶ್ವವಿದ್ಯಾಲಯದಲ್ಲಿ ಅವರ ಸಹಾಧ್ಯಾಯಿ. ಭೌತ ಶಾಸ್ತ್ರ ವಿಶಾರದೆ. ತಮ್ಮ ಮನೆಯಲ್ಲಿ ನಿತ್ಯವೂ ವೀಣೆ ನುಡಿಸುವದು ಅವರ ಹವ್ಯಾಸ. ದಂಪತಿಗಳು ಕರ್ನಾಟಕ ಸಂಗೀತದ ಆರಾಧಕರೂ ಆಗಿದ್ದರು.

ವಿಜ್ಞಾನಕ್ಕೆ ತಮ್ಮನ್ನು ಸಂಪೂರ್ಣವಾಗಿ ಸಮ ರ್ಪಿಸಿಕೊಂಡಿದ್ದರಿಂದಾಗಿ ತಮ್ಮ ಇತರ ಹವ್ಯಾಸ ಗಳಾದ ಸಂಗೀತ, ಸಾಹಿತ್ಯ ಮತ್ತು ಪ್ರವಾಸಗಳನ್ನು ಪೂರ್ತಿ ಕೈಬಿಡಬೇಕಾಯಿತೆಂದು ಡಾ. ಚಂದ್ರಶೇ ಖರ ಒಂದೆಡೆ ಹೇಳಿದ್ದುಂಟು. ಆದರೂ ಅವರ ಆಸಕ್ತಿ ಬಲವಾಗಿದ್ದರಿಂದ ಇಬ್ಸೆನ್ನನ ಎಲ್ಲ ನಾಟಕ ಗಳನ್ನೂ ಓದಿದರು. ಹೃದಯದ ಶಸ್ತ್ರ ಚಿಕಿತ್ಸೆಯಾಗಿ ಚೇತರಿಸಿಕೊಳ್ಳುತ್ತಿದ್ದಾಗ ಅವರು ಶೇಕ್ಸಪಿಯರ್‌ನ ಎಲ್ಲ ನಾಟಕಗಳನ್ನೂ ಪುನಃ ಓದಿದರು.

ತಾವು ನಾಸ್ತಿಕರೆಂದು ಹೇಳಿಕೊಳ್ಳುತ್ತಿದ್ದರೂ ಡಾ. ಚಂದ್ರಶೇಖರ ನಿತ್ಯವೂ ಭಗವದ್ಗೀತೆಯನ್ನು ಓದುತ್ತಿದ್ದರೆಂಬುದು ಅವರ ನಿಕಟವರ್ತಿಗಳ ಹೇಳಿ ಕೆಯಾಗಿತ್ತು. ೧೯೩೭ರಲ್ಲಿ ಶಿಕ್ಯಾಗೋ ವಿಶ್ವವಿದ್ಯಾ ಲಯವನ್ನು ಸೇರಿದಾಗ ಹೇಗಿದ್ದರೋ ಕೊನೆಯ ದಿನದವರೆಗೂ ಹಾಗೆಯೇ ಇದ್ದರು. ಅದೇ ಕಪ್ಪು ಬಣ್ಣದ ಸೂಟು, ಬಿಳಿಯ ಶರ್ಟು, ಕಪ್ಪು ನೆಕ್‌ಟೈ. ಎಲ್ಲ ಮೊದಲು ಇದ್ದ ಹಾಗೆಯೇ ಇದ್ದಿತು.

ನೋಬೆಲ್ ಪಾರಿತೋಷಕ ೧೯೮೩ರಲ್ಲಿ ಬಂದಾಗ ಅವರಿಗೆ ೭೬ ವರ್ಷ. ಈ ಹೊತ್ತಿಗೆ ಅನೇಕ ವಿಜ್ಞಾನಿಗಳಿಗೆ, ವೈಜ್ಞಾನಿಕ ಸಂಘ ಸಂಸ್ಥೆಗಳ ಸದಸ್ಯರಾಗಿ ಗೌರವ ಪ್ರಾಧ್ಯಾಪಕರಾಗಿ, ವಿಶ್ವವಿದ್ಯಾ ಲಯಗಳ ಘಟಿಕೋತ್ಸವದ ಅತಿಥಿಗಳಾಗಿ ಶೋಭಿ ಸುವದರಲ್ಲಿಯೇ ಸಂತೃಪ್ತಿ. ಆದರೆ ಚಂದ್ರಶೇಖರರ ಉತ್ಸಾಹ ಅದಮ್ಯ. ಹೃದಯಾಘಾತದಿಂದ ಬಳಲಿ ದ್ದರು. ತೀರ ಇತ್ತೀಚಿನ ಸಂಶೋಧನೆಯ ಕಾಲಕ್ಕೆ

ಅವರ ಹೃದಯಕ್ಕೆ ಶಸ್ತ್ರಚಿಕಿತ್ಸೆ ನಡೆಸಲಾಗಿತ್ತು. ಇಷ್ಟೆಲ್ಲ ದೈಹಿಕ ತೊಂದರೆ ಅನುಭವಿಸಿದ್ದರೂ ಅವರ ಬೌದ್ಧಿಕ ಆರೋಗ್ಯ ಉತ್ತಮವಾಗಿದ್ದು ವಾರದ ಏಳು ದಿನವೂ ನಿತ್ಯ ೧೨ ತಾಸು ಕೆಲಸ ಮಾಡುತ್ತಿದ್ದರು. ಇನ್ನೂ ಹೊಸ ಹೊಸ ಸಂಶೋಧನಾ ಕ್ಷೇತ್ರಗಳನ್ನು ಅರಸುತ್ತಿದ್ದರು.

"ಜಗತ್ತಿನ ತುಂಬ ಕೋಟ್ಯವಧಿ ಜನ ಇಂದು ಹಸಿವಿನಿಂದ ಬಳಲುತ್ತಿದ್ದಾರೆ. ಹೀಗಿರುವಾಗ ಶುದ್ಧ ವೈಜ್ಞಾನಿಕ ಸಂಶೋಧನೆಗಾಗಿ ಕೋಟಿ ಕೋಟಿ ಡಾಲರು ವೆಚ್ಚ ಮಾಡುವದು ನ್ಯಾಯವೇ?" ಎಂಬುದು ಕೆಲವರ ಪ್ರಶ್ನೆಯಾಗಿತ್ತು.

"ಹೌದು, ವೆಚ್ಚ ಮಾಡುವದು ಸರಿ" ಎಂದು ದೃಢವಾಗಿ ಉತ್ತರಿಸಿದ್ದರು ಚಂದ್ರಶೇಖರ.

"ತನ್ನ ಸುತ್ತಲಿನ ಸೃಷ್ಟಿಯ ಬಗೆಗೆ ಚಿಂತಿಸುವದು ಮಾನವನ ಬದುಕಿನ ಒಂದು ಭಾಗ. ಇಂಥ ವೈಜ್ಞಾನಿಕ ಸಂಶೋಧನೆಗಳು ಸಾಮಾಜಿಕ ದೃಷ್ಟಿಯಿಂದ ಸರಿಯಾದುವಲ್ಲ ಎಂದು ಹೇಳುವದಾದರೆ, ಮಾನವನ ಬದುಕಿಗೆ, ಮೈ ಮುಚ್ಚಲು ಬಟ್ಟೆ, ಹೊಟ್ಟೆ ತುಂಬಲು ಅನ್ನವಾದರೆ ಸಾಕು ಎಂದು ಹೇಳಿದಂತಾಗುವದು. ವೈಜ್ಞಾನಿಕ ಸಂಶೋಧನೆಯ ಸಾಧನೆಗಳನ್ನು ಅಲ್ಪ ಕಾಲಾವಧಿಯ ದೃಷ್ಟಿಯಿಂದ ಅಳೆಯಲಿಕ್ಕಾಗದು. ಸದ್ಯದ ಆವಶ್ಯಕತೆಗಳನ್ನು ಅನುಲಕ್ಷಿಸಿದಾಗ ಅವುಗಳ ಬೆಲೆ ಅರ್ಥವಾಗಲಿಕ್ಕಿಲ್ಲ. ಆದರೆ ಶುದ್ಧ ವಿಜ್ಞಾನದ ಮೌಲ್ಯಗಳು ಕಾಲಾಂತರದಲ್ಲಿ ತಿಳಿದುಬರುವವು. ಭೌತಿಕ ಅವಶ್ಯಕತೆಗಳ ದೃಷ್ಟಿಯಿಂದ ಶುದ್ಧ ವಿಜ್ಞಾನದ ಸಂಶೋಧನೆಗಳನ್ನೂ ಅಳೆಯಲಿಕ್ಕಾಗದು. ಜೀವನದ ಆವಶ್ಯಕತೆಗಳು ಕಾಲೋಚಿತ ಹಾಗೂ ಮಹತ್ವವಾದವುಗಳೆಂಬುದು ನಿಜ. ಆದರೆ ಅದರಿಂದ ಮಾನವನ ಬದುಕಿನ ಕಾಲಾಂತರದ ಅವಶ್ಯಕತೆಗಳನ್ನು ಅಲಕ್ಷಿಸಲಿಕ್ಕಾಗದು" ಎಂಬುದು ಅವರ ಅಭಿಪ್ರಾಯ.

ವಿಜ್ಞಾನವನ್ನು ಸಮಗ್ರ ಸ್ವರೂಪದಲ್ಲಿ ಪರಿಗಣಿಸಬೇಕು. ವಿಜ್ಞಾನದ ಕೆಲ ಕ್ಷೇತ್ರಗಳಲ್ಲಿಯ ಸಂಶೋಧನೆಗಳು ಸದ್ಯದ ಸಮಸ್ಯೆಗಳಿಗೆ ಪರಿಹಾರ ನೀಡಲಿಕ್ಕಿಲ್ಲ. ಆದರೂ ಎಲ್ಲ ಕ್ಷೇತ್ರಗಳಲ್ಲಿ ಏಕಪ್ರಕಾರವಾಗಿ ಸಂಶೋಧನ ಕಾರ್ಯ ನಡೆದಾಗ ಮಾತ್ರ ವಿಜ್ಞಾನವು ಮುನ್ನಡೆ ಸಾಧಿಸಬಲ್ಲದು. ವಿಜ್ಞಾನದ ಎಲ್ಲ ಶಾಖೆಗಳಿಗೂ ಸರಿ ಸಮನಾದ ಮಹತ್ವ ನೀಡಿದ ದೇಶಗಳಲ್ಲಿ ಮಾತ್ರ ವೈಜ್ಞಾನಿಕ ಪ್ರಗತಿ ಸಾಧಿಸಿದ್ದುದು ಇತಿಹಾಸದಿಂದ ಸ್ಪಷ್ಟವಾಗಿದೆ.

ವಿಜ್ಞಾನಿಯು ತಾನು ಪರಿಣತಿ ಪಡೆಯುವ ಕ್ಷೇತ್ರವನ್ನು ಪ್ರತಿ ಹತ್ತು ವರ್ಷಕ್ಕೊಮ್ಮೆ ಬದಲಿಸುತ್ತ ಹೋಗಬೇಕೆಂಬುದು ಡಾ. ಚಂದ್ರಶೇಖರರ ಅಭಿಪ್ರಾಯವಾಗಿತ್ತು. ಅದರಂತೆ ಅನೇಕ ಕ್ಷೇತ್ರಗಳಲ್ಲಿ ಶ್ರಮವಹಿಸಿ ಅದನ್ನು ಅವರು ಅನುಷ್ಠಾನದಲ್ಲಿಯೂ ತಂದರು. ಆಯಾ ಕಾರ್ಯಸಾಧನೆಯ ಕೊನೆಯಲ್ಲಿ ತಮ್ಮ ಖಚಿತವಾದ ವಿಚಾರಗಳನ್ನು ತಿಳಿಸುವ ಗ್ರಂಥಗಳನ್ನೂ ರಚಿಸಿದರು. ನಕ್ಷತ್ರಗಳ ಚಲನಶಾಸ್ತ್ರ ಮತ್ತು ನಕ್ಷತ್ರಗಳ ರೂಪ ರಚನೆ, ನೀರಿನ ಚಲನ ಶಾಸ್ತ್ರ ಮತ್ತು ನೀರಿನಲ್ಲಿನ ಕಾಂತಶಕ್ತಿ ಅಲ್ಲದೇ ತಮ್ಮ ಇತ್ತೀಚಿನ ಹವ್ಯಾಸವಾಗಿದ್ದ ಸಾಮಾನ್ಯ ಸಾಪೇಕ್ಷವಾದದ ಬಗೆಗೂ ಅಧ್ಯಯನ ನಡೆಸಿದರು.

ಚಂದ್ರಶೇಖರರಿಗೆ ನೋಬೆಲ್ ಪಾರಿತೋಷಕ ಬಹಳ ತಡವಾಗಿಯೇ ಬಂದಿತು. ಅಮೇರಿಕೆಯ ಪ್ರಾ. ವಿಲಿಯಮ್ ಫೌಲರ್ ಸಹ ಈ ಪಾರಿತೋಷಕದಲ್ಲಿ ಪಾಲುಗೊಂಡರು.

ಈ ಇಬ್ಬರೂ ವಿಜ್ಞಾನಿಗಳಿಗೆ, ನಕ್ಷತ್ರಗಳ ಹುಟ್ಟು ಹಾಗೂ ರೂಪರಚನೆಯ ಬಗೆಗೆ ನಡೆಸಿದ ಸಂಶೋಧನೆಗಳಿಗಾಗಿ ನೋಬೆಲ್ ಪಾರಿತೋಷಕ ನೀಡಲಾಗಿದೆ ಎಂದು 'ರಾಯಲ್ ಸ್ವೀಡಿಶ್ ಅಕೆಡೆಮಿ ಆಫ್ ಸಾಯನ್ಸಿಸ್' ಪ್ರಕಟಿಸಿತು.

ವಿಜ್ಞಾನಿ ನಿಜವಾದ ಸತ್ಯಶೋಧಕ. ಅದೇ ಅವನ ಪರಮೋಚ್ಚ ಧ್ಯೇಯ. ಇದನ್ನು ಡಾ. ಚಂದ್ರಶೇಖರರು ತಮ್ಮ ಜೀವನದಿಂದಲೇ ಪ್ರಮಾಣೀಕರಿಸಿ ತೋರಿಸಿದ್ದಾರೆ. ಹಿಂದು ತತ್ವಜ್ಞಾನದಂತೆ ಜಗತ್ತಿನ ಹಾಗೂ ಸಾಂಸಾರಿಕ ಸಂಬಂಧಗಳನ್ನು ಕಡಿದುಕೊಂಡು ವಾನಪ್ರಸ್ಥಾಶ್ರಮಕ್ಕೆ ಹೋಗಬೇಕೆಂಬ ವಿಚಾರವೂ ಅವರಿಗೆ ಅನೇಕ ಸಲ ಸುಳಿಯುತ್ತಿತ್ತು. ಆದರೆ ವೈಜ್ಞಾನಿಕ ತಪಸ್ಸು ಅವರನ್ನು ಬಲವಾಗಿ ಅಂಟಿಕೊಂಡಿತ್ತು. ಅದೇ ಅವರಿಗೆ ವೈಕುಂಠದ ದಾರಿಯಾಯಿತು. (ನಿಧನ: ೨೧-೮-೧೯೯೫). ●

## ಸಂಪರ್ಕ

# ಈಗಲೂ ಪ್ರಚಲಿತದಲ್ಲಿರುವ ಪಾರಿವಾಳ ಅಂಚೆ

• ವೃಷಭೇಂದ್ರಯ್ಯ

ಪಾರಿವಾಳಗಳನ್ನು ಸಂದೇಶವಾಹಕಗಳನ್ನಾಗಿ ಬಳಸಿಕೊಳ್ಳುವ ರೂಢಿ ಬಹು ಪ್ರಾಚೀನವಾದದ್ದು. ಇಂದಿಗೂ, ಅತ್ಯಾಧುನಿಕ ಸಂಪರ್ಕ ಮಾಧ್ಯಮಗಳು ಕ್ಷಣಕ್ಷಣಕ್ಕೂ ತಮ್ಮ ಕಾರ್ಯಸಾಮರ್ಥ್ಯವನ್ನು ಇನ್ನಷ್ಟು ಹೆಚ್ಚಿಸಿಕೊಳ್ಳುತ್ತಿರುವ ಈ ಸಂದರ್ಭದಲ್ಲೂ, ಪಾರಿವಾಳಗಳು ಈ ಉದ್ದೇಶಕ್ಕಾಗಿಯೇ ಸಾಕಲ್ಪಡುತ್ತಿವೆ ಎಂಬುದು ಅಚ್ಚರಿ ತರಿಸುವ ಮಾತು.

ಆಗಿನ ಗ್ರೀಸ್‌ನಲ್ಲಿ, ಒಲಿಂಪಿಕ್ ಪಂದ್ಯಗಳು ನಡೆಯುತ್ತಿದ್ದಾಗ ಫಲಿತಾಂಶಗಳನ್ನು ದೂರದೂರಕ್ಕೆ ತಲುಪಿಸಲು ಪಾರಿವಾಳಗಳೇ ಏಕಮಾತ್ರ ವ್ಯವಸ್ಥೆ ಎನಿಸಿದ್ದುವು. ಕ್ರಿಸ್ತಶಕ ೧೧೪೬ರಷ್ಟು ಹಿಂದೆಯೆ ಬಗದಾದಿನ ಸುಲ್ತಾನ ನಸರುದ್ದೀನ್ ಖಲೀಫ ಪಾರಿವಾಳ ಅಂಚೆಯನ್ನು ನಿಯಮಿತವಾಗಿ ನಡೆಸುತ್ತಿದ್ದನಂತೆ.

ಲಾಟರಿ ಫಲಿತಾಂಶಗಳನ್ನು, ಕ್ರೀಡೆ-ಜೂಜುಗಳಲ್ಲಿ ಗೆದ್ದವರ ಸುದ್ದಿಗಳನ್ನು, ಪ್ರಣಯಿಗಳ ಪ್ರೇಮ ಪತ್ರಗಳನ್ನು ಹೊತ್ತೊಯ್ದು ನಿಶ್ಚಿತ ಸ್ಥಳಕ್ಕೆ ಮುಟ್ಟಿಸುತ್ತಿದ್ದ ಪಾರಿವಾಳಗಳು ಯುದ್ಧಸಮಯದಲ್ಲಿ ನಿರ್ವಹಿಸುತ್ತಿದ್ದ ಜವಾಬ್ದಾರಿಯಂತೂ ತುಂಬ ಮಹತ್ವದ್ದು. ಒಂದು ನೆಲೆಯಿಂದ ಇನ್ನೊಂದು ನೆಲೆಗೆ ಗುಪ್ತ ಸಂದೇಶಗಳನ್ನು ಅವು ಸಾಗಿಸಿ, ಅಲ್ಲಿಂದ ಅದಕ್ಕೆ ಉತ್ತರ ಪಡೆದು ಹಿಂದಿರುಗುತ್ತಿದ್ದವು. ಈ ವ್ಯವಸ್ಥೆ ಅದೆಷ್ಟು ಸಮರ್ಪಕ ಮತ್ತು ಪರಿಪೂರ್ಣವಾಗಿತ್ತೆಂದರೆ ಅಲ್ಲಿ ಭೂಮಾರ್ಗ ಅಂಚೆ ಸಾಗಾಟ ಪದ್ಧತಿಯಲ್ಲಿ ಎದುರಾಗುವ ಯಾವ ಅಡೆತಡೆಗಳೂ ಇರುತ್ತಿರಲಿಲ್ಲ. ಮುಷ್ಕರ-ಗಿಷ್ಕರಗಳಂಥ ಮುಜುಗರದ ಪ್ರಸಂಗಗಳೂ ಬರುತ್ತಿರಲಿಲ್ಲ. ೧೮೭೦ರಲ್ಲಿನ ಫ್ರಾಂಕೊ-ಪರ್ಶಿಯನ್ ಯುದ್ಧದಲ್ಲಿ ಪಾರಿವಾಳಗಳ ಅಂಚೆಯಿತ್ತೆಂದೇ ಪ್ಯಾರಿಸ್ ಹೊರಜಿಲ್ಲೆಗಳೊಂದಿಗೆ ನಿತ್ಯ ಸಂಪರ್ಕವಿಟ್ಟುಕೊಳ್ಳಬಹುದಾಯಿತು.

ಎರಡನೆ ಮಹಾಯುದ್ಧದಲ್ಲಿ ಈ ಪ್ರೀತಿಬರಿಸುವ ಹಕ್ಕಿಗಳನ್ನು ಗೂಢಚಾರ ವೃತ್ತಿಗೂ ಇಳಿಸಲಾಯಿತು. ಅವುಗಳ ಕಾಲಿಗೆ ಸ್ವಯಂಚಲಿ ಮಿನಿಯೇಚರ್ ಕ್ಯಾಮರಾಗಳನ್ನು ಕಟ್ಟಿ ಶತ್ರು ಪಾಳೆಯದ ಮೇಲೆ ಹಾರಿಬಿಡಲಾಗುತ್ತಿತ್ತು. ಅಲ್ಲಿರುತ್ತಿದ್ದ ಈ ಕಡೆಯ ಛದ್ಮವೇಷಧಾರಿ ಗೂಢಚಾರರು ಇಂಥ ಪಾರಿವಾಳಗಳನ್ನು ಗುರುತಿಸಿ ತಮ್ಮ ಮಾಹಿತಿಯನ್ನು ಅವುಗಳ ಕಾಲಿಗೆ ಕಟ್ಟಿ ವಾಪಸ್ಸು ಕಳಿಸುತ್ತಿದ್ದರು. ಶತ್ರು ಪಾಳೆಯದ ಫೋಟೋಗಳು ಮತ್ತು ಮಾಹಿತಿ ದೊರೆತ ಮೇಲೆ ಕೇಳುವುದೇನು? ದಾಳಿಯ ಯೋಜನೆ ಸುಲಭವಾಗಿಬಿಡುತ್ತಿತ್ತು.

ಯುದ್ಧ ನಡೆದಾಗ ಜನರ ಬದುಕು ದುರ್ಭರ. ಒಂದು ರೀತಿಯಲ್ಲಿ ಅವರ ಪಾಡು ನಡುಗಡ್ಡೆಗಳಲ್ಲಿ ಬದುಕಿದಂತೆ. ಬಾಹ್ಯ ಜಗತ್ತಿನೊಂದಿಗೆ ಏನೇನೂ ಸಂಬಂಧವುಳಿಯುತ್ತಿರಲಿಲ್ಲ. ಹೀಗಾದಾಗ ಅವರ ನೆರವಿಗೆ ಈ ಪಾರಿವಾಳಗಳೇ ಬರುತ್ತಿದ್ದವು. ಅಷ್ಟೇ ಅಲ್ಲ, ಕೆಲವೊಮ್ಮೆ ಮುಖ್ಯ ವಾಹಿನಿಯಿಂದ ಬೇರ್ಪಟ್ಟ ತುಕಡಿಗಳಿಗೆ ಪಾರಿವಾಳಗಳೇ ಆಪತ್ಕಾರಣ. ಹೀಗೆ ಬೇರ್ಪಟ್ಟು ಬವಣೆಪಡುತ್ತಿದ್ದ ಅಮೆ

ರಿಕನ್ ತುಕಡಿಯೊಂದನ್ನು ಜರ್ಮನರ ಕೈಯಿಂದ ಪಾರುಗಾಣಿಸಿದ ಚೆರ್ ಅಮಿ ಎಂಬ ಪಾರಿವಾಳ ಇತಿಹಾಸದಲ್ಲಿ ಅಮರವಾಗಿದೆ. ಅದರ ಸ್ಮರಣಾರ್ಥ ಒಂದು 'ಪಾರಿವಾಳ ಅಂಚೆ' ವ್ಯವಸ್ಥೆಗೆ ಅಮೆರಿಕನ್ನರು 'ಚೆರ್ ಅಮಿ ಪಿಜನ್ ಪೋಸ್ಟ್' ಎಂದೇ ಹೆಸರಿಟ್ಟರು. ಕೆಲವು ದಿಟ್ಟ ಪಾರಿವಾಳಗಳಿಗೆ ಅತ್ಯುನ್ನತ ಗೌರವವಾದ 'ವಿಕ್ಟೋರಿಯಾ ಕ್ರಾಸ್' ಅನ್ನೂ ನೀಡಿದ ಉದಾಹರಣೆಗಳು ನಮಗೆ ಅಲ್ಲಿ ಸಿಕ್ಕುತ್ತವೆ.

ಸಂದೇಶವಾಹಕ ಕಾರ್ಯಕ್ಕೆ ತೊಡಗುವಂಥ ಪಾರಿವಾಳಗಳದು ಒಂದು ವಿಶಿಷ್ಟವಾದ ತಳಿ. ಅವು ಇನ್ನುಳಿದ ಪಾರಿವಾಳಗಳಂತೆಯೆ ಕಾಣುತ್ತವಾದರೂ ಈ ಪಾರಿವಾಳಗಳಿಗೆ ಗಟ್ಟಿಯಾದ ದೇಹಯಷ್ಟಿರುತ್ತದೆ. ಕತ್ತಿನ ಕೆಳಭಾಗ, ಚುಂಚುಗಳು ಭಿನ್ನವಾಗಿರುತ್ತವೆ ಮತ್ತು ಅತ್ಯಂತ ಹೊಳಪುಳ್ಳ ಕಣ್ಣುಗಳು ಇದಕ್ಕಿರುತ್ತವೆ.

ಬೆಲ್ಜಿಯಂ ಸಂಜಾತ ತಳಿಯ ಪಾರಿವಾಳಗಳಿವು. ಹೋಮರ್ ಜಾತಿಯವು ಎಂದು ಇವುಗಳನ್ನು ಗುರುತಿಸಲಾಗುತ್ತದೆ. ಈ ಪಾರಿವಾಳಗಳ ವೈಶಿಷ್ಟ್ಯವೆಂದರೆ ಎಷ್ಟು ದೂರ ಹಾರಿಹೋದರೂ ತಿರುಗಿ ಮನೆ ಸೇರುವ ಇವುಗಳ ಆತುರ. ೧೫ ಗಂಟೆಗಳಷ್ಟು ನಿಲುಗಡೆರಹಿತ ಉಡ್ಡಯನದ ನಂತರ ಗಮ್ಯಸ್ಥಾನವನ್ನು ತಲುಪಿ, ಅಗತ್ಯ ಕಾರ್ಯ ಪೂರೈಸಿ ಮತ್ತೆ ಬಂದ ಹಾದಿಯನ್ನೇ ಹಿಡಿಯುವ ಇವು ನಡುವೆ ಎಲ್ಲೂ ನೀರು ಕುಡಿಯುವುದಾಗಲಿ, ಹಸಿವು ಹಿಂಗಿಸಿಕೊಳ್ಳುವುದಾಗಲಿ ಮಾಡುವುದಿಲ್ಲ. ಏನಿದ್ದರೂ ಮನೆಗೆ ಮರಳಿಯೇ ದಾಹ ಮತ್ತು ಹೊಟ್ಟೆಯ ಹಸಿವನ್ನು ಹಿಂಗಿಸಿಕೊಳ್ಳುವುದು ಇವುಗಳ ನಿಯಮ. ಅವಶ್ಯ ಸಂದರ್ಭಗಳಲ್ಲಿ ೧,೦೦೦ದಿಂದ ೧,೫೦೦ ಕಿಲೋಮೀಟರ್‌ವರೆಗಿನ ದೂರವನ್ನು ಇವು ಕ್ರಮಿಸಬಲ್ಲವಂತೆ. ಆದರೆ ಹೀಗೆ ಕ್ರಮಿಸುವುದಕ್ಕೆ ನಿರಭ್ರ ಆಕಾಶವಿರಬೇಕಾದದ್ದು ಮುಖ್ಯ.

ಈ ತಳಿಯ ಪಾರಿವಾಳಗಳಿಗೆ ಮನೆಯ ಕುರಿತು ಇರುವ ಅಂಥ ಪ್ರೀತಿಗೆ ಕಾರಣವೇನು? ಜೀವವೈಜ್ಞಾನಿಕರು, "ಹೋಮರ್ ತಳಿಯ ಪಾರಿವಾಳಗಳ ಮಿದುಳ ಗವ್ವರದಲ್ಲಿ ಚುಂಬಕ ಶಕ್ತಿ ನಾವಿಕ ದಿಕ್ಸೂಚಿಯಂತೆ ಕಾರ್ಯ ನಿರ್ವಹಿಸುತ್ತಿರಬಹುದು, ಅದು ಸರಿಯಾದ ದಿಕ್ಕಿನಲ್ಲಿ ಹಾರಲು ಪಾರಿವಾಳಗಳಿಗೆ ಪ್ರೇರಣೆ ನೀಡುತ್ತಿರಬಹುದು," ಎನ್ನುತ್ತಾರೆ. ವಾತಾವರಣದಲ್ಲಿರುವ ವಿದ್ಯುತ್ ತರಂಗಗಳನ್ನು ಗುರುತಿಸಿ ತದನುಸಾರ ಅವು ತಮ್ಮ ದಿಕ್ಕು ಗುರುತಿಸುತ್ತವೆ ಎಂಬ ಅಭಿಪ್ರಾಯದವರೂ ಇದ್ದಾರೆ. ಅವುಗಳ ಘ್ರಾಣೇಂದ್ರಿಯ, ಶ್ರವಣೇಂದ್ರಿಯಗಳು ಬಲು ಚುರುಕಾಗಿದ್ದು ಸಾವಿರ ಮೈಲುಗಳಾಚೆಯ ತಮ್ಮ ತಾಣದ ವಾಸನೆಯ ಜಾಡುಹಿಡಿದು ಹಾರುತ್ತವೆ ಎಂಬುದಾಗಿ ಇನ್ನು ಕೆಲವರು ಪಕ್ಷಿಶಾಸ್ತ್ರಜ್ಞರು ಅಭಿಪ್ರಾಯಪಡುತ್ತಾರೆ. ಆದರೆ ಮೋಡ ಕವಿದ ವಾತಾವರಣ, ಬಿರುಗಾಳಿಯೆದ್ದು ಕತ್ತಲೆ ಮುಸುಕಿದ ಸಂದರ್ಭಗಳು ಪಾರಿವಾಳಗಳ ವಾಸನಾಗ್ರಹಣ ಶಕ್ತಿಯನ್ನು ಕುಂಠಿತಗೊಳಿಸುವುದರಿಂದ ಆಗ ಅವು ಹಾರಲಾರವಂತೆ.

ಆದರೆ ತಮ್ಮ ತಾಣದ ಆಹಾರ ಹಾಗೂ ನೀರುಗಳಿಗೇ ಇವು ಒಗ್ಗಿಕೊಂಡಿರುವುದೇ ಹೋಮರ್ ಪಾರಿವಾಳಗಳು ತಮ್ಮ ಮನೆಗೆ ಬಂದೇ ಆಹಾರ-ನೀರು ಸ್ವೀಕರಿಸುವುದಕ್ಕೆ ಕಾರಣ ಎಂಬುದು ಒಂದು ಸಾಮಾನ್ಯ ಅನಿಸಿಕೆ.

ಈ ಪಾರಿವಾಳಗಳನ್ನು ವಿಶೇಷ ಆಹಾರದ ವಿಷಯದಲ್ಲಿ ತರಬೇತಿಕೊಟ್ಟು ಬೆಳೆಸಲಾಗುತ್ತದೆ. ಅವಕ್ಕೆ ಈ ಸಂದರ್ಭದಲ್ಲಿ ವಿಶಿಷ್ಟ ರುಚಿ, ವಾಸನೆ ಮತ್ತು ಸತ್ವದ ಆಹಾರ ಹಾಗೂ ವಿಶಿಷ್ಟ ರುಚಿಯ ನೀರನ್ನೇ ಕೊಡಲಾಗುತ್ತದೆ. ಹೀಗಾಗಿ ಇದಕ್ಕೆ ರೂಢಿಯಾಗಿ ಹೋಗಿರುವ ಈ ಪಾರಿವಾಳಗಳು ತಮ್ಮ ಹಸಿವು-ನೀರಡಿಕೆಗಳನ್ನು ಮನೆಗೆ ಮರಳಿಯೇ ಪರಿಹರಿಸಿಕೊಳ್ಳುತ್ತವೆ. ಹೀಗೊಮ್ಮೆ ಸಾಕಷ್ಟು ದೀರ್ಘ ಅಂತರವನ್ನು ಕ್ರಮಿಸಿ ಬಂದ ಪಾರಿವಾಳಕ್ಕೆ ಮುಂದೆ ಒಂದೆರಡು ದಿನ ವಿಶ್ರಾಂತಿ.

ಒರಿಸ್ಸಾ ಪೊಲೀಸ್ ಇಲಾಖೆ ಇಂದಿಗೂ ಪಾರಿವಾಳಗಳನ್ನು ಸಂದೇಹವಾಹಕಗಳನ್ನಾಗಿ ಬಳಸಿಕೊಳ್ಳುತ್ತಿದೆ ಎಂಬುದು ಗಮನಾರ್ಹ ಹಾಗೂ ಆಸಕ್ತಿಕರ ವಿಚಾರ. ಇಲ್ಲಿ ಅವರು ಪಾರಿವಾಳಗಳಿಗೆ ಮೆಕ್ಕೆ ಜೋಳ, ಗೋದಿ, ಕಡಲೆ, ಮಿಲೆಟ್, ಕವಚ ತೆಗೆದ ಹಸಿರು ವಟಾಣಿ ಹಾಗೂ ಸ್ಪಿನಾಚ್ (ಬಸಳೆ



ಸೊಪ್ಪನ್ನು ಹೋಲುವ) ಸೊಪ್ಪುಗಳ ಆಹಾರ ಕೊಡಲಾಗುತ್ತದೆ. ಇವುಗಳಲ್ಲದೆ ಕಲ್ಲುಪ್ಪು, ಸಿಂಪುಗಳನ್ನು ವಾರಕ್ಕೊಮ್ಮೆ ಪಾಚಕಗಳೆಂದು ನೀಡಲಾಗುತ್ತದೆ. ಅವು ಕುಡಿಯುವ ನೀರಿಗೆ ಪೊಟ್ಯಾಶಿಯಂ ಪರಮಾಂಗನೇಟನ್ನು ಬೆರೆಸುವುದುಂಟು. ಹೀಗಾಗಿ ಈ ಪಾರಿವಾಳಗಳಿಗೆ ಇದೇ ಆಹಾರಕ್ರಮ ಬೇಕೆನಿಸುತ್ತದೆ. ಅವೆಂದೂ ಬೇರೆಡೆ ಸಾದಾ ಹಾಗೂ ಸ್ವಚ್ಛ ನೀರನ್ನು ಕುಡಿಯಲಾರವು; ಬೇರೆ ಆಹಾರವನ್ನು ಮೂಸಲಾರವು.

ಪಾರಿವಾಳಗಳಿಗೆ ತರಬೇತಿ ನೀಡಲು ಒರಿಸ್ಸಾ ಪೊಲೀಸು ಇಲಾಖೆ ಮೂರು ರೀತಿಯ ಕ್ರಮಗಳನ್ನು ಅನುಸರಿಸುತ್ತದೆ. ಏಕಮಾರ್ಗ ಸಂದೇಶರವಾನೆ ಇವುಗಳಲ್ಲಿ ವಿಶಿಷ್ಟವಾದದ್ದು. ತಂತಿ ಸಂದೇಶ ವ್ಯವಸ್ಥೆ ಇಲ್ಲದ ಜಾಗಗಳಿಗೆ ಏಕಮಾರ್ಗ ಸಂದೇಶವಾಹಕ ತರಬೇತಿ ಪಡೆದ ಪಾರಿವಾಳಗಳನ್ನು ಪಂಜರಗಳಲ್ಲಿಟ್ಟುಕೊಂಡು ಒಯ್ಯುತ್ತಾರೆ. ಅವಕ್ಕೆ ಹಸಿವಾಗುವ ಸಮಯ ನೋಡಿ ಸಂದೇಶ ಚೀಟಿಗಳನ್ನು ಕಾಲಿಗೆ ಕಟ್ಟಿ ಹಾರಿಬಿಡುತ್ತಾರೆ. ಕ್ಷಿಪ್ರದಲ್ಲೇ ತಮ್ಮ ಗೂಡು ಸೇರುವ ಈ ಏಕಮಾರ್ಗ ಸಂದೇಶವಾಹಕ ಪಾರಿವಾಳಗಳನ್ನು ಬಹುತೇಕ ಚುನಾವಣೆಗಳ ಸಂದರ್ಭಗಳಲ್ಲಿ ಬಳಸಿಕೊಳ್ಳಲಾಗುತ್ತದೆ. ೧೯೯೧ರಲ್ಲಿ ಧನಮಂಡಲ (ಕಟಕ್‌ನಿಂದ ೪೦ ಕಿಲೋ ಮೀಟರ್ ದೂರದ ಊರು) ಚಂಡಮಾರುತದಿಂದಾಗಿ ಸಂಪರ್ಕವಿಹೀನವಾಯಿತು. ಆಗ ಚುನಾವಣೆಯೂ ಆಯಿತು. ಈ ಏಕಮಾರ್ಗ ಸಂದೇಶವಾಹಕ ಪಾರಿವಾಳಗಳು ಆಗ ಇರದಿದ್ದರೆ ಕಾಲಕಾಲಕ್ಕೆ ಜಿಲ್ಲಾ ಕೇಂದ್ರಕ್ಕೆ ತಲಪಬೇಕಾದ ಚುನಾವಣಾ ವರದಿಗಳು ಶೀಘ್ರವಾಗಿ ಸಿಗುವುದೇ ದುಸ್ತರವಾಗುತ್ತಿತ್ತು.

೧೯೫೫ ಹಾಗೂ ೧೯೬೦ರಲ್ಲಿ ನೆರೆಹಾವಳಿಯುಂಟಾದಾಗ ಪರಿಹಾರ ಹಾಗೂ ಜೀವರಕ್ಷಣಾ ಕಾರ್ಯಗಳಿಗೆ ಈ ಪಾರಿವಾಳಗಳು ಎಡೆಬಿಡದೆ ಶ್ರಮಿಸಿದವು.

ಎರಡನೆಯದು ಬೂಮ್‌ರ್‍ಯಾಂಗ್ ಪದ್ಧತಿ. ಸಂದೇಶ ಕೊಂಡೊಯ್ದು ಒಂದು ಸ್ಥಳಕ್ಕೆ ತಲುಪಿಸಿದಾಗ ಅಲ್ಲಿ ಪಾರಿವಾಳಗಳಿಗೆ ವಿಶಿಷ್ಟವಾದ ಆಹಾರವನ್ನು ಮಾತ್ರ ನೀಡಿ, ಮರುಸಂದೇಶ ಚೀಟಿ ಕಟ್ಟಿ ಹಾರಿಬಿಡಲಾಗುತ್ತದೆ. ಆಹಾರವನ್ನೇನೋ ನೀಡಿರುತ್ತಾರಾದರೂ ಕುಡಿಯುವ ನೀರನ್ನು ಅವಕ್ಕೆ ಒದಗಿಸಿರುವುದಿಲ್ಲ. ಹೀಗಾಗಿ ನೀರಡಿಕೆ ತಣಿಸಿಕೊಳ್ಳಲು ಅವು ತಮ್ಮ ಮನೆಗೆ ಧಾವಿಸಲೇಬೇಕಾಗುತ್ತದೆ. ಮುಖ್ಯ ಕೇಂದ್ರದಿಂದ ಅತಿ ದೂರದಲ್ಲಿರುವ ಸ್ಥಳಗಳಲ್ಲಿ ಇಂಥ ವ್ಯವಸ್ಥೆ ಇರುತ್ತದೆ.

ಇನ್ನು ಮೂರನೆಯದು ಸಂಚಾರಿ ಪಾರಿವಾಳ

ಘಟಕ. ಒರಿಸ್ಸಾ ಸಶಸ್ತ್ರ ಪೊಲೀಸು ಪಡೆಯೊಂದಿಗೆ ವಿಶೇಷ ವಾಹನದಲ್ಲಿ ಈ ಘಟಕ ಸುತ್ತುತ್ತಿರುತ್ತದೆ. ಬೇರೆ ಬೇರೆ ಎರಡು ಠಾಣೆ, ಸ್ಥಳಗಳ ನಡುವೆ ಈ ಘಟಕದ ಪಾರಿವಾಳಗಳು ದ್ವಿಮುಖ ಸಂದೇಶ ರವಾನೆಯ ಕೆಲಸ ನಿರ್ವಹಿಸುತ್ತವೆ.

ಸಂಚಾರಿ ಪಾರಿವಾಳ ಘಟಕದ ತರಬೇತಿ ಮೂರು ಹಂತದ್ದು. ನಾಲ್ಕರಿಂದ ಆರು ವಾರಗಳ ಮರಿಯಿದ್ದಾಗಲೇ ತಾಯಿಯಿಂದ ಬೇರ್ಪಡಿಸಿ ತರಬೇತುದಾರರಿಗೆ ಒಪ್ಪಿಸಲಾಗುತ್ತದೆ. ಇಲ್ಲಿ ೪೫ ದಿನಗಳ ಪ್ರಾಥಮಿಕ ಕಲಿಕೆಯ ನಂತರ ಎರಡನೆಯ ಹಂತದ ಶಿಕ್ಷಣ. ಸುಮಾರು ಐದು ಕಿಲೋಮೀಟರ್ ದೂರದಿಂದ ಅವು ತಮ್ಮ ತಾಣಕ್ಕೆ ಮರಳುವಂತೆ ಈ ಹಂತದಲ್ಲಿ ನೋಡಿಕೊಳ್ಳಲಾಗುತ್ತದೆ. ಮೂರನೆಯ ಹಂತದಲ್ಲಿ ಪ್ರತ್ಯಕ್ಷವಾಗಿ ಅವು ಸಂದೇಶಗಳನ್ನು ಹೊತ್ತೊಯ್ಯಬೇಕು. ಹೀಗೆ ಮೂರೂ ಹಂತಗಳಲ್ಲಿ ಅವು ಸಮರ್ಥವೆಂದು ಕಂಡುಬಂದಾಗ ಘಟಕದ ಅಧಿಕೃತ ಸದಸ್ಯ ಎನಿಸುತ್ತವೆ.

ಅತಿ ಮುಖ್ಯ ಸಂದೇಶಗಳನ್ನು ಈ ಸಂಚಾರಿ ಘಟಕದಿಂದ ಕಳಿಸುವಾಗ ಎರಡು ಪಾರಿವಾಳಗಳ ಬಳಕೆ ರೂಢಿಯಲ್ಲಿದೆ. ಎರಡರ ಕಾಲಿಗೆ ಕಟ್ಟಲ್ಪಟ್ಟಿರುವುದು ಒಂದೇ ಸಂದೇಶ. ಮಾರ್ಗ ಮಧ್ಯದಲ್ಲಿ ಹದ್ದುಗಳ ದಾಳಿಗೆ ತುತ್ತಾಗಿಯೋ, ಬೇರಾವುದೆ ಕಾರಣದಿಂದಲೋ ಒಂದು ಪಾರಿವಾಳ ಗಾಯಗೊಂಡರೆ ಇಲ್ಲವೆ ಸತ್ತರೆ ಇನ್ನೊಂದರಿಂದಲಾದರೂ ಸಂದೇಶ ತಲುಪಲಿ ಎಂಬುದು ಇದಕ್ಕೆ ಕಾರಣ. ಪ್ರತಿ ವರ್ಷ ಇಂಥ ಸುಮಾರು ೨೫-೩೦ ಪಾರಿವಾಳಗಳು ಹದ್ದುಗಳಿಗೆ ಬಲಿಯಾಗುವುದುಂಟು.

ಒರಿಸ್ಸಾದಲ್ಲಿ ಪಾರಿವಾಳ ಅಂಚೆ ಪ್ರಾರಂಭವಾದದ್ದು ೧೯೪೬ರಲ್ಲಿ. ಮುಂದಿನ ವರ್ಷ ಈ ಸೇವಾವ್ಯವಸ್ಥೆ ಸುವರ್ಣ ಮಹೋತ್ಸವ ಆಚರಿಸಲಿದೆ. ಸದ್ಯ ಒರಿಸ್ಸಾ ಪೊಲೀಸು ಇಲಾಖೆ ೧,೦೦೦ ತರಬೇತಾದ ಪಾರಿವಾಳಗಳನ್ನು ವಿವಿಧ ೩೦ ಸ್ಥಳಗಳಲ್ಲಿ ಇಟ್ಟುಕೊಂಡಿದೆ. ಕಟಕ್, ಸಂಬಲಪುರ ಮತ್ತು ಬೆಹ್ರಾಮ್‌ಪುರಗಳ ವಿಭಾಗೀಯ ಕಚೇರಿಗಳೊಂದಿಗೆ ಈ ೩೦ ಸ್ಥಳಗಳು ಸಂಪರ್ಕವಿಟ್ಟುಕೊಂಡಿವೆ. ಪ್ರತಿವರ್ಷ ಒಂದೂವರೆ ಲಕ್ಷ ರೂಪಾಯಿಗಳಷ್ಟು ಮಾತ್ರ ಖರ್ಚುಳ್ಳ ಈ ವ್ಯವಸ್ಥೆ ಕಂಪ್ಯೂಟರ್ ಯುಗದಲ್ಲಿ ಇನ್ನೆಷ್ಟು ಕಾಲ ಮುಂದುವರೆಯುವುದೆಂಬುದೇ ಈಗಿನ ಪ್ರಶ್ನೆ.

●

## ಆಲೂ ಬ್ಯಾಂಡೇಜ್

**ಬೊಂ**ಬಾಯಿಯ ಭಾಯಿ ಜೇರ್‌ಭಾಯಿ ವಾಡಿಯಾ ಮಕ್ಕಳ ಆಸ್ಪತ್ರೆಯ ಸುಟ್ಟಗಾಯಗಳ ಸಂಶೋಧನಾ ವಿಭಾಗವು ಬೆಂದಗಾಯಗಳಿಗೆ ಕಟ್ಟುಹಾಕಲು ಆಲೂಗಡ್ಡೆ ಸಿಪ್ಪೆಯಿಂದ ವಿಶೇಷ ಬ್ಯಾಂಡೇಜನ್ನು ತಯಾರಿಸಿದೆಯಂತೆ. ಸಂಶೋಧನಾಲಯದ ಶೈತ್ಯಾಗಾರದಲ್ಲಿ ಸಂಗ್ರಹಿಸಿ ಇಡಲಾಗಿದ್ದ ಸಂಸ್ಕರಿತ ಮಾನವ ಚರ್ಮವು ಆಲೂಗಡ್ಡೆ ಸಿಪ್ಪೆಯಂತಿದೆ ಎಂಬ ಮಾತೇ ಈ ಸಂಶೋಧನೆಗೆ ಪ್ರೇರಕವಾಯಿತಂತೆ. ಆಲೂಗಡ್ಡೆಯ ಸಿಪ್ಪೆಯು ಬೆಂದ ಗಾಯಕ್ಕೆ ಅಂಟದು. ಅಲರ್ಜಿ ಉಂಟು ಮಾಡದು. ಮಿತವ್ಯಯದ್ದು. ಬೇಕಾದಷ್ಟು ಸಿಕ್ಕುತ್ತದೆ. ಸಂಸ್ಕರಿಸಿ ಸಂಗ್ರಹಿಸಬಹುದು. ಇದರ ಬಳಕೆಯಿಂದ ಬೆಂದಗಾಯಗಳು ಶೀಘ್ರವಾಗಿ ಗುಣವಾಗುತ್ತವೆ. ಚರ್ಮವೂ ತ್ವರಿತವಾಗಿ ತನ್ನ ಸ್ವಾಭಾವಿಕ ಬಣ್ಣವನ್ನು ಪಡೆಯುತ್ತದೆ ಎಂಬುದು ಪ್ರಯೋಗಗಳಿಂದ ಸಿದ್ಧವಾಗಿದೆ. "ಈಗಂತೂ ಆಲೂಗಡ್ಡೆಗಳನ್ನು ಸುಲಿದು, ಸಿಪ್ಪೆಯನ್ನು ಸಂಸ್ಕರಿಸಿ, ಬಟ್ಟೆಯ ಮೇಲೆ ಅಂಟಿಸಿ, ಸಂಗ್ರಹಿಸಿಟ್ಟು ಬೇಕಾದಾಗ ಬಳಸುತ್ತೇವೆ," ಎಂದು ತಜ್ಞ ವೈದ್ಯ ಡಾ. ಕೇಶ್ವಾನಿ ಹೇಳುತ್ತಾರೆ.

ಸಂಗ್ರಹ: ಕೆ. ವೆಂಕಣ್ಣಾಚಾರ್

## ಅಸಾಮಾನ್ಯರು



# ಮಿದುಳು ಲಕ್ವ ಪೀಡಿತ ಗಣಿತದ ಪ್ರೊಫೆಸರ್!

"ಮುಖ ನಮ್ಮದಕ್ಕಿಂತ ಭಿನ್ನವಾಗಿರಬಹುದು. ಆದರೆ ಭಾವನೆಗಳೆಲ್ಲ ನಮಗಿರುವಂಥವೇ ಆಗಿವೆ. ವಿಕಲಾಂಗರಿಗೂ ತಮ್ಮಲ್ಲಡಗಿರುವ ಸಾಮರ್ಥ್ಯವನ್ನು ಪ್ರದರ್ಶಿಸಲು ಒಂದು ಅವಕಾಶ ಕೊಡಿ" ಎಂಬ ಸಂದೇಶ ಸಾರುವ ಚಿತ್ರ ಟಿ.ವಿ. ಪರದೆಯ ಮೇಲೆ ಮೂಡಿದಾಗೊಮ್ಮೆ ಮನಸ್ಸು ವ್ಯಾಕುಲಗೊಳ್ಳುತ್ತದೆ. ಹೃದಯ ಭಾರವಾಗುತ್ತದೆ. ಯಾವುದೋ ಜೀವವೈಜ್ಞಾನಿಕ ಕಾರಣದಿಂದ ಅಂಗವಿಕಲತೆಗೆ ತುತ್ತಾದವರ ಬಗೆಗೆ ನಮ್ಮೀ ಸಮಾಜ ತೋರುವ ಅಸಡ್ಡೆ, ಅವಜ್ಞೆ ಸಿಟ್ಟು ತರಿಸುತ್ತದೆ. ಸಮಾಜದ ನಡವಳಿಕೆಯ ಬಗೆಗೆ ವಿಷಾದ ಮೂಡುತ್ತದೆ. ಆಗೆಲ್ಲ ಸ್ಮೃತಿಪಟಲದ ಮೇಲೆ ಜಗತ್ಪ್ರಸಿದ್ಧ ಭೌತವಿಜ್ಞಾನಿ 'ಸ್ಟೀಫನ್ ಹಾಕಿಂಗ್ಸ್'ರ ಚಿತ್ರ ಮೂಡುತ್ತದೆ.

ಜಗದ ಜನರ ದೃಷ್ಟಿಯಲ್ಲಿ ಸ್ಟಿಫನ್ ಹಾಕಿಂಗ್ಸ್ ಅಕ್ಷರಶಃ ಜೀವಚ್ಛವ. ಕೈಕಾಲು, ಕಣ್ಣು-ಮೂಗು, ಕಿವಿ-ಬಾಯಿ ಹೀಗೆ ದೇಹದ ಯಾವುದೇ ಅಂಗವೂ ಅವರ ಸ್ವಾಧೀನದಲ್ಲಿಲ್ಲ, ಆದರೆ ಅವರ ಮಿದುಳು ಮಾತ್ರ ತಾನು 'ಸೃಷ್ಟಿಯ ಅದ್ಭುತ' ಎಂಬುದನ್ನು ಸಾಬೀತು ಮಾಡುತ್ತಿದೆ. ಅವರ ಮಿದುಳಿನಲ್ಲಿ ನಡೆಯುವ ಚಿಂತನೆಯನ್ನು ಜಗತ್ತಿಗೆ ತಿಳಿಸುವ ವ್ಯವಸ್ಥೆಯನ್ನು ಕಲ್ಪಿಸಲಾಗಿದೆ. ಹಾಗಾಗಿ ಅವರೊಬ್ಬ ೨೦ನೇ ಶತಮಾನದ ಶ್ರೇಷ್ಠ ವಿಜ್ಞಾನಿ ಎಂಬ ಹೆಸರು ಗಳಿಸಲು ಸಹಕಾರಿಯಾಗಿದೆ.

ಒಂದು ಕ್ಷಣ ಈ ವ್ಯವಸ್ಥೆ ಆಗದೇ ಇದ್ದಿದ್ದರೆ? ಎಂದು ವಿಚಾರ ಮಾಡಿದರೆ ಶ್ರೇಷ್ಠ ವಿಜ್ಞಾನಿಯೊಬ್ಬರ ಚಿಂತನೆಗಳು ಜಗತ್ತಿನ ತಿಳಿವಿಗೇ ಬಾರದಂತೆ ಕಣ್ಮರೆಯಾಗುತ್ತಿದ್ದವು ಎಂಬ ಅಂಶ ಅರಿವಿಗೆ ಬಂದು ದಿಗ್ಭ್ರಮೆಗೊಳ್ಳುತ್ತೇವೆ.

ಈ ಹಿನ್ನೆಲೆಯಲ್ಲಿಯೇ 'ಅಂಗವಿಕಲರಾದವರಿಗೂ ಒಂದು ಅವಕಾಶಕೊಡಿ' ಎಂಬ ಮಾತಿನ ತಥ್ಯವನ್ನು, ಕಳಕಳಿಯನ್ನು ನಾವು ಅರಿಯಬೇಕಿದೆ.

• ಎಚ್.ಆರ್. ಸುರೇಶ್
(ಆಧಾರ: ಕೋರಿಯನ್ ನ್ಯೂಸ್)

ಯಾಕೆಂದರೆ ವಿಕಲಾಂಗರಲ್ಲದಿದ್ದರೂ ತಮ್ಮ ಪ್ರತಿಭೆಗೆ ಸಿಕ್ಕಬೇಕಾದ ಪ್ರೋತ್ಸಾಹವಿಲ್ಲದೇ ಕಮರಿ ಹೋಗುವ ಜನರೆಷ್ಟಿಲ್ಲ? ಅಂಥವರಲ್ಲಿ ವಿಕಲಾಂಗರಾದವರ ಪಾಡೇನು? ಎಂಬ ಪ್ರಶ್ನೆ ಧುತ್ತೆಂದು ವಕ್ಕರಿಸುತ್ತದೆ.

ಹೀಗಿದ್ದೂ ಈ ಪ್ರಶ್ನೆ ಪ್ರಶ್ನೆಯಾಗೇ ಉಳಿವ ಕಾಲ ದೂರವಾಗುತ್ತಾ ಬಂದಿದೆ. ಅಂಗವಿಕಲರ ಪಾಲಿಗೂ ಆಶಾಕಿರಣವೊಂದು ಮೂಡುತ್ತಿದೆ. ಇದಕ್ಕೆ ಸಾಕ್ಷಿ ನಾನೀಗ ನಿಮ್ಮ ಮುಂದಿಡಲಿರುವ ಸಂಗತಿ.

ಹ್ವಾಂಗ್ ಯೂನ್‌ಸಂಗ್ ಕೋರಿಯಾ ವಿಶ್ವವಿದ್ಯಾನಿಲಯದಲ್ಲಿ ಗಣಿತ ವಿಷಯದ ಸಹ ಪ್ರಾಧ್ಯಾಪಕ. ಮಿದುಳಿನ ಅರ್ಧಾಂಗ ವಾಯು ಪೀಡಿತನಾದರೂ ಗಣಿತವನ್ನು ಎಲ್ಲ ಪ್ರಾಧ್ಯಾಪಕರಂತೆಯೇ ಬೋಧಿಸುವ ಜಾಣ. ಅಂಗವೈಕಲ್ಯ ತನ್ನ ಬುದ್ಧಿಮತ್ತೆಯನ್ನೇನೂ ಕಸಿದುಕೊಂಡಿಲ್ಲ ಎಂಬುದನ್ನು ಸಾಬೀತುಪಡಿಸುತ್ತಿದ್ದಾನೇನೋ ಎಂಬಂತಿದ್ದಾನೆ ಆತ.

ಮೂವತ್ತನಾಲ್ಕು ವರ್ಷದ ಯೂನ್‌ಸಂಗ್ ಇದೇ ವರ್ಷದ ವಸಂತ ಋತುವಿನಲ್ಲಿ ಸಹಪ್ರಾಧ್ಯಾಪಕ ಹುದ್ದೆಗೆ ನೇಮಕಗೊಂಡ. ತನ್ನ ನೇಮಕಾತಿ ಉಪಯೋಗಕ್ಕೇನೂ ಬಾರದ್ದಲ್ಲ ಎಂಬ ಅಂಶವನ್ನು ಕೆಲದಿನಗಳಲ್ಲೇ ಸಿದ್ಧಮಾಡಿ ತೋರಿಸತೊಡಗಿದ. ಆಗವನ ಹೆಸರು ಕೋರಿಯದ ಹೆಸರಾಂತ ಪತ್ರಿಕೆಗಳಲ್ಲೆಲ್ಲ ಕಾಣಿಸಿಕೊಳ್ಳತೊಡಗಿತು. ಕೆಲ ಪತ್ರಿಕೆಗಳು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಇವನ್ನು ಸ್ಟೀಫನ್ ಹಾಕಿಂಗ್‌ರೊಂದಿಗೆ ಹೋಲಿಸಿದವು. ಆಗ ಯೂನ್‌ಸಂಗ್, "ಈ ರೀತಿಯ ಹೋಲಿಕೆ ಸರಿಯಲ್ಲ. ಈಗಾಗಲೇ ವಿಶ್ವ ವಿಖ್ಯಾತರಾಗಿರುವ ಭೌತವಿಜ್ಞಾನಿಗೂ ಈಗಷ್ಟೇ ಸಹಪ್ರಾಧ್ಯಾಪಕ ಹುದ್ದೆಗೆ ನೇಮಕಗೊಂಡಿರುವ ನನಗೂ ಎಲ್ಲಿಂದೆಲ್ಲಿಯ ಸಂಬಂಧ? ಅವರಷ್ಟು ಪ್ರಸಿದ್ಧಿಗಳಿಸಬೇಕಾದರೆ ನಾನು ಸವೆಸಬೇಕಾದ ಹಾದಿ ಇನ್ನೂ ಬಹಳಷ್ಟಿದೆ," ಎಂದು ವಿನೀತ ಭಾವದಿಂದ ಹೋಲಿಕೆಯನ್ನು ನಿರಾಕರಿಸಿಬಿಟ್ಟ.

ಕೋರಿಯಾ ವಿಶ್ವವಿದ್ಯಾನಿಲಯ ೮೨೫ ನಿಕಾಯ(ಫ್ಯಾಕಲ್ಟಿ)ಗಳನ್ನು ಹೊಂದಿದ್ದು ಇಬ್ಬರು ವಿಕಲಾಂಗರನ್ನು ಅಧ್ಯಾಪಕ ಹುದ್ದೆಗೆ ನೇಮಿಸಿಕೊಂಡಿದೆ.

ಬೀಜಗಣಿತ ಮತ್ತು ಅನ್ವಯಿಕ ಬೀಜಗಣಿತವನ್ನು ಕಿರಿಯರಿಗೂ, ರಿಂಗ್‌ಥಿಯರಿಯನ್ನು ಪದವಿ ವಿದ್ಯಾರ್ಥಿಗಳಿಗೂ ಯೂನ್‌ಸಂಗ್ ಬೋಧಿಸುತ್ತಾನೆ. "ನಾನು ತರಗತಿಯೊಳಗೆ ಕಾಲಿಡುವ ಮುನ್ನ ಬೋಧಿಸಲಿರುವ ವಿಷಯದ ಬಗೆಗೆ ಸಮಗ್ರವಾದ ಅಧ್ಯಯನ ಕೈಗೊಳ್ಳುತ್ತೇನೆ. ವಿದ್ಯಾರ್ಥಿಗಳ ಸಮಯ ಉಳಿಸಲಿಕ್ಕಾಗಿ ಪಠ್ಯದ ಪ್ರತಿಗಳನ್ನು ತಯಾರಿಸಿಕೊಳ್ಳುತ್ತೇನೆ. ತಯಾರಿಸಿಕೊಂಡು ಹೋದ ಪಠ್ಯದ ಪ್ರತಿಗಳನ್ನು ವಿದ್ಯಾರ್ಥಿಗಳಿಗೆ ನೀಡುತ್ತೇನೆ. ನಂತರವಷ್ಟೇ ಬೋಧನೆ ಆರಂಭಿಸುತ್ತೇನೆ. ಇದರಿಂದಾಗಿ ವಿದ್ಯಾರ್ಥಿಗಳಿಗೆ ನಾನು ಬೋಧಿಸುತ್ತಿರುವ ಪಠ್ಯದ ತಿಳುವಳಿಕೆ ಸರಿಯಾಗಿ ಆಗುತ್ತದೆ," ಎನ್ನುತ್ತಾನೆ ಯೂನ್‌ಸಂಗ್.

"ನನ್ನ ವಿದ್ಯಾರ್ಥಿಗಳು ಕಲಿಕೆಯನ್ನು ಗಂಭೀರವಾಗಿ ಪರಿಗಣಿಸುವವರು. ಪರಿಶ್ರಮಪಟ್ಟು ಅಭ್ಯಸಿಸುವವರು. ವಿದ್ಯಾರ್ಥಿ ಜೀವನದ ಜವಾಬ್ದಾರಿಗಳ ಬಗೆಗೆ ಆಗಾಗ ನಾನು ಅವರಿಗೆ ತಿಳುವಳಿಕೆ ಕೊಡುತ್ತಿರುತ್ತೇನೆ. ಹೀಗಾಗಿ ಅವರೆಲ್ಲ ಹೆಚ್ಚಿನ ಪರಿಣತಿ ಹೊಂದಲು ಇಚ್ಛೆಯುಳ್ಳವರೂ ಉತ್ತಮ ಸಮಾಜ ನಿರ್ಮಾಣಕ್ಕಾಗಿ ತಮ್ಮನ್ನು ಅರ್ಪಿಸಿಕೊಳ್ಳುವ ಮನೋಭಾವದವರೂ ಆಗುತ್ತಾರೆಂದು ನಾನು ಭಾವಿಸುತ್ತೇನೆ" ಎಂದು ಆಶಾವಾದವನ್ನು ವ್ಯಕ್ತಪಡಿಸುತ್ತಾನೆ.

ಸಿಯೋಲ್ (ಸೋಲ್) ನಿವಾಸಿಯಾದ ಹ್ವಾಂಗ್ ಸ್ನಾತಕ ಹಾಗೂ ಸ್ನಾತಕೋತ್ತರ ಪದವಿಗಳನ್ನು ಗಳಿಸಿಕೊಂಡದ್ದೇ ಕೋರಿಯಾ ವಿಶ್ವವಿದ್ಯಾಲಯದಲ್ಲಿ. ನಂತರ ತನ್ನ ಅಪಾರ ಜ್ಞಾನದಾಹವನ್ನು ತಣಿಸಿಕೊಳ್ಳಲು ೧೯೮೬ರಲ್ಲಿ ಅಮೆರಿಕಕ್ಕೆ ಉನ್ನತ ಶಿಕ್ಷಣಕ್ಕಾಗಿ ತೆರಳಿದ. ಕ್ಯಾಲಿಫೋರ್ನಿಯಾ ವಿಶ್ವವಿದ್ಯಾನಿಲಯಕ್ಕೆ ಸ್ಯಾನ್‌ಡಿಯೇಗೋರವರ ಮಾರ್ಗದರ್ಶನದಲ್ಲಿ ೧೯೯೨ರಲ್ಲಿ ಪಿಎಚ್.ಡಿ. ಪ್ರಬಂಧವನ್ನು ಒಪ್ಪಿಸಿದ. ಡಾಕ್ಟರೇಟೂ ಸಿಕ್ಕಿತು.

ಯೂನ್‌ಸಂಗ್ ತಾಯ್ನಾಡಿಗೆ ಮರಳಿದ್ದು

೧೯೯೩ರಲ್ಲಿ, ಸೋಲ್‌ನ ರಾಷ್ಟ್ರೀಯ ವಿ.ವಿ.ದ ಭೂಗೋಲ ವಿಶ್ಲೇಷಣಾ ಸಂಶೋಧನಾ ಕೇಂದ್ರ ದಲ್ಲಿ ಕಾರ್ಯ ನಿರ್ವಹಿಸಲಾರಂಭಿಸಿದ. ಇದೇ ಸಮಯದಲ್ಲಿ ದಕ್ಷಿಣ ಚುಂಗ್ ಚಾಂಗ್ ಪ್ರಾಂತ್ಯದ ಖೋಚಿವ್ಯೋನ್ ಶಾಲೆಯ ಮೂರು ಯೋಜನೆಗಳ ಜವಾಬ್ದಾರಿಯನ್ನೂ ಯಶಸ್ವಿಯಾಗಿ ನಿಭಾಯಿಸಿದ.

ಜನಿಸಿದ ಕೆಲತಿಂಗಳುಗಳಲ್ಲಿಯೇ ಮಿದುಳಿನ ಅರ್ಧಾಂಗವಾಯುವಿಗೆ ತುತ್ತಾದನಂತೆ ಯೂನ್ ಸಂಗ್. ಆತನ ತಾಯಿ ಹೇಳುತ್ತಾಳೆ, "ನಾನು ನನ್ನ ಮಗನಿಗೆ ಏಳನೇ ತಿಂಗಳಲ್ಲಿಯೇ ಜನ್ಮವಿತ್ತೆ. ಜತೆಗೆ ಸೂಕ್ತ ಚಿಕಿತ್ಸೆಯೂ ಸಿಕ್ಕದೆ ಉಸಿರಾಟದ ತೊಂದರೆ ಮತ್ತು ಅತಿಸಾರಕ್ಕೆ ತುತ್ತಾದ. ಆಗ ಸೋಲ್‌ನ ರಾಷ್ಟ್ರೀಯ ವಿಶ್ವವಿದ್ಯಾಲಯದ ಆಸ್ಪತ್ರೆಯ ವೈದ್ಯರ ತಂಡ ನನ್ನ ಮಗನಿಗೆ ಪುನರ್ಜನ್ಮ ನೀಡಿತು. ಆದರೂ ಅವನ ಮಿದುಳಿಗೆ ಆದ ಆಘಾತವನ್ನು ತಡೆಯಲಾಗಲಿಲ್ಲ. ಅರ್ಧಾಂಗವಾಯುವಿಗೆ ತುತ್ತಾ ದುದನ್ನು ತಪ್ಪಿಸಲಾಗಲಿಲ್ಲ. ನನ್ನ ಮಗ ಜೀವಂತ ವಾಗಿ ಉಳಿದನಲ್ಲ ಎಂಬುದೇ ಆಗ ನನಗೆ ಸಂತಸದ ವಿಷಯವಾಗಿತ್ತು. ಅನಂತರದ ಮೂರು ದಶಕಗಳವರೆಗೆ ಆತ ಅನುಭವಿಸಿದ ಕಷ್ಟ-ಕೋಟ ಲೆಗಳು ಬಣ್ಣಿಸಲಸದಳ. ಇಂದು ತನ್ನ ಕಾರ್ಯ ವನ್ನಾತ ಸಮರ್ಥವಾಗಿ ನಿರ್ವಹಿಸುತ್ತಿದ್ದಾನೆ, ನಿರ್ವ ಹಿಸಿಕೊಂಡು ಹೋಗುತ್ತಾನೆ. ಆ ಭರವಸೆ ನನ ಗಿದೆ. ಅಂತೆಯೇ ತನಗೆ ಅನುರೂಪಳಾದ ಅರ್ಧಾಂಗಿಯೊಬ್ಬಳನ್ನು ಅತ ವರಿಸುತ್ತಾನೆಂಬ ನಂಬಿಕೆಯೂ ನನಗಿದೆ."

"ಮೊದಲಿನಿಂದಲೂ ಗಣಿತ ನನ್ನ ಅಚ್ಚು ಮೆಚ್ಚಿನ ವಿಷಯವೇ. ನನ್ನ ಆಸಕ್ತಿಯನ್ನು ಕಳೆಯದ ಮತ್ತು ಸಮಸ್ಯೆಗಳಿಗೆ ಸ್ಪಷ್ಟ ನಿರೂಪಣೆಯನ್ನು ನೀಡುವ ವಿಷಯವೂ ಗಣಿತವೇ," ಎಂದನ್ನುವ ಯೂನ್‌ಸಂಗ್, "ಬೋಧನೆಯೆಂಬುದು ಅತ್ಯಂತ ಗೌರವಾನ್ವಿತ ಕೆಲಸ, ನನ್ನನ್ನು ಅದಕ್ಕೆ ಸಂಪೂರ್ಣ ಅರ್ಪಿಸಿಕೊಳ್ಳುವ ಇಚ್ಛೆ ನನ್ನದು" ಎಂದು ಮನದ ಇಂಗಿತವನ್ನು ಬಿಚ್ಚಿಡುತ್ತಾನೆ.

ಮುಂದುವರಿದ ದೇಶಗಳಲ್ಲಿ ವಿಕಲಾಂಗರನ್ನು ಗೌರವದಿಂದ ಕಾಣುವ ಬಗ್ಗೆ ಸಂತಸ ವ್ಯಕ್ತಪಡಿ ಸುವ ಯೂನ್‌ಸಂಗ್, "ಆ ದೇಶಗಳಲ್ಲಿ ವಿಕಲಾಂ ಗರು ಎಲ್ಲ ಕ್ಷೇತ್ರಗಳಲ್ಲೂ ದುಡಿಯುತ್ತಿದ್ದಾರೆ. ಹೆಸರನ್ನು ಗಳಿಸಿದ್ದಾರೆ. ಗಾಲಿಕುರ್ಚಿಯಲ್ಲಿ ಕುಳಿತು ಬರುವ ಪ್ರಾಧ್ಯಾಪಕರು, ಸಂಶೋಧಕರು, ವೈದ್ಯರು ಅಲ್ಲಿ ಕಾಣಸಿಗುವುದು ಅಪರೂಪವೇನೂ ಅಲ್ಲ. ಇದೇ ಭಾವನೆ ಜಗತ್ತಿನೆಲ್ಲೆಡೆಯೂ ಬಂದರೆ ವಿಕಲಾಂಗರು ಅಸಮರ್ಥರು, ನಮಗಿಂತ ಭಿನ್ನರು ಎಂಬ ತಿಳಿವಳಿಕೆ ಅಳಿಸಿಹೋಗುವುದರಲ್ಲಿ ಅನು ಮಾನವೇ ಇಲ್ಲ" ಎಂದು ಭರವಸೆಯಿಂದ ನುಡಿಯುತ್ತಾನೆ.

"ವಿಕಲಾಂಗತೆಯ ಬಗೆಗೆ ಜನರಲ್ಲಿನ ಪೂರ್ವಾ ಗ್ರಹಗಳನ್ನು ನಾನು ದಾಟಿ ಬರಬೇಕಾದರೆ ಬಹಳ ನೋವನ್ನು ಅನುಭವಿಸಬೇಕಾಯಿತು. ಅಡ್ಡಿ ಆತಂ ಕಗಳನ್ನು ಎದುರಿಸಬೇಕಾಯಿತು. ಆದ್ದರಿಂದ ನಾವಿಂದು 'ಅಂಗವಿಕಲತೆಯೆಂಬುದು ಅನಾನು ಕೂಲ ಮಾತ್ರವೇ ಹೊರತು ಅದಕ್ಕಿಂತ ಹೆಚ್ಚಿನ ದೇನೂ ಅಲ್ಲ, ಈ ಅನಾನುಕೂಲವನ್ನು ತೊಡೆದು ಹಾಕಲು ಏನು ಕ್ರಮ ಕೈಗೊಳ್ಳಬೇಕೋ ಅಷ್ಟರ ಬಗೆಗೆ ಮಾತ್ರ ಯೋಚಿಸಬೇಕು' ಎಂಬ ಅಮೆರಿ ಕನ್ನರ ಚಿಂತನೆಯನ್ನು ತೆರೆದ ಮನಸ್ಸಿನಿಂದ ಅಂಗೀ ಕರಿಸಬೇಕಿದೆ," ಇದು ಈ ಅಸಾಮಾನ್ಯನ ಆಶಯ. ●

---

## ತಪ್ಪು ತಿಳುವಳಿಕೆ

ಜಗದ್ವಿಖ್ಯಾತ ಫ್ರೆಂಚ್ ಚಿಂತಕ ವಾಲ್ಟೇರ್‌ನನ್ನು ಇನ್ನೊಬ್ಬ ಫ್ರೆಂಚ್ ಬುದ್ಧಿಜೀವಿ ಮಾನ್‌ಸ್ಯೂ ಬರ್ನ್ ಅತೀವವಾಗಿ ದ್ವೇಷಿಸುತ್ತಿದ್ದರು; ಸದಾ ದೂಷಿಸುತ್ತಿದ್ದರು ಕೂಡ. ಆದರೆ ವಾಲ್ಟೇರ್? ಆತ ವರ್ನ್‌ನನ್ನು ಹೃತ್ಪೂರ್ವಕವಾಗಿ ಶ್ಲಾಘಿಸುತ್ತಲೂ ಗೌರವಿಸುತ್ತಲೂ ಇದ್ದ. ಒಮ್ಮೆ ಅಭಿಮಾನಿಯೊಬ್ಬ ಇಬ್ಬರ ಇಂತಹ ವರ್ತನೆಯ ಬಗ್ಗೆ ಪ್ರಶ್ನಿಸಿದಾಗ ವಾಲ್ಟೇರ್ "ಬಹುಶಃ ನಾವಿಬ್ಬರೂ ಪರಸ್ಪರರ ಬಗ್ಗೆ ತಪ್ಪುತಿಳಿದಿರಬೇಕು" ಎಂದು ನಕ್ಕುಬಿಟ್ಟರಂತೆ.

● ಕೆ. ವೆಂಕಣ್ಣಾಚಾರ್

೨೩

# ಜೀವ ಜಂಬದಕೋಳಿ

ವಿದ್ಯುತ್ತು ಕಣ್ಣಿಗೇನೂ ಕಾಣದು. ಅದರ ಪ್ರಭಾವ ಪ್ರಕಟವಾಗುವುದು ಲೋಹದ ತಂತಿಯ ಮೂಲಕ ಹರಿದಾಗಲೆ. ಬುರುಡೆ ಬೆಳಕು ಬೀರುವುದು; ಕೊಳವೆ ಪ್ರಕಾಶಮಾನವಾಗುವದು; ಬೀಸಣಿಕೆ ತಣ್ಣನೆಯ ಗಾಳಿ ಸೂಸುವುದು; 'ಗೀಜರ್' ನೀರು ಕಾಯಿಸುವುದು; ಶೀತಪೆಟ್ಟಿಗೆ ಆಹಾರ ಹಳಸದಂತೆ, ತರಕಾರಿ ಕೊಳೆಯದಂತೆ ನೋಡಿಕೊಳ್ಳುವುದು, ಯಂತ್ರ ಸಮರ್ಪಕವಾಗಿ ಕೆಲಸ ಕೊಡುವುದು ಹೀಗೆ ಏನೇನೋ. ಅಗೋಚರ ವಿದ್ಯುತ್ತಿನ ಸಂಪರ್ಕದಿಂದ ಆಕಾರಪಡೆದ ಉಪಕರಣಗಳೆಲ್ಲ ಕಾರ್ಯ ಪ್ರವೃತ್ತ. ಜೀವದ ವಿಷಯದಲ್ಲಿಯೂ ಹಾಗೆಯೆ. ಅದೂ ಅಗೋಚರ. ಅದಿದ್ದರೆ ಮಾತ್ರ ನಮ್ಮೀ ದೇಹ ಹಲವಾರು ಚಟುವಟಿಕೆಗಳ ಗೇಹ, ಅದು ಇರುವತನಕ ಈ ಶರೀರ ಬಗೆಬಗೆಯ ವ್ಯಾಪಾರಗಳ ಬೀಡಾರ. ಕಂಗಳಕಾಂತಿ, ಕಿವಿಗಿರುವ ಆಲಿಸುವ ಶಕ್ತಿ, ನಾಲಗೆಯಿಂದ ರುಚಿನೋಡುವ ಆಸಕ್ತಿ, ಹಲ್ಲು, ಉಗುರುಗಳ ಹೊಳಪು- ಹೀಗೆ ನಖಶಿಖಾಂತ ಏನೆಲ್ಲ ಜೀವದ ನಿರ್ದೇಶನಕ್ಕೆ, ನಿಯಂತ್ರಣಕ್ಕೆ ಅನುಗುಣ.

ಬಲು ಹಿರಿದು, ಶರೀರದಲ್ಲಿ ಜೀವ ನಿರ್ವಹಿಸುವ ಪಾತ್ರ. ಅದರ ಸ್ವರೂಪ ತುಂಬಾ ವಿಚಿತ್ರ. ತಾನು ಅಗೋಚರವಾಗಿದ್ದುಕೊಂಡೆ ಶರೀರದ ವ್ಯವಹಾರವನ್ನೆಲ್ಲ ಜರುಗಿಸುತ್ತದೆ. ಹೀಗೆಂದ ಮಾತ್ರಕ್ಕೆ ಪರದೆಯ ಹಿಂದೆ ಎಳೆ ಎಳೆಗಳನ್ನು ಎಳೆಯುತ್ತ ಗೊಂಬೆಗಳನ್ನು ಕುಣಿಸುವ ಸೂತ್ರಧಾರನೇ ಈ ಜೀವ? ಇದು ಇರುವ ತನಕ, ತನು ರಸವಂತಿಕೆಯಿಂದ ನಳನಳಿಸುವ ಬಳ್ಳಿಯಂತೆ ಕಂಗೊಳಿಸುವಂಥದು. ಹಾಗೆಂದರೆ ಜೀವ ದ್ರವ ಸ್ವರೂಪವೇ? ಇದು ನೆಲೆಸಿರುವವರೆಗೆ ಧಮನಿ ಧಮನಿಯಲ್ಲಿ ರಕ್ತ ಸಂಚಾರ, ನೀರಿನ ಪೂರೈಕೆಗೆ ವ್ಯತ್ಯಯವಿಲ್ಲದಾಗ ನಲ್ಲಿನಲ್ಲಿಗಳಲ್ಲಿ ನೀರು ಹರಿಯುವಂತೆ. ಎಂದ ಮೇಲೆ ಜೀವ ಜಲವೆನ್ನೋಣವೇ? ಇದರ ವಾಸ್ತವ್ಯದಿಂದ ಅಂಗಾಂಗಗಳ ಸೋಂಕು ಬೆಚ್ಚಗಿನದು. ಹೀಗೆಂದ ಮಾತ್ರಕ್ಕೆ ಜೀವ ಎಂದರೆ ಅಗ್ನಿ ಸ್ವರೂಪವೆ? ಇದು ನೆಲೆಸಿರುವವರೆಗೆ ತನುವೆಲ್ಲವೂ ಕಾಂತಿಯುಕ್ತ. ಎಂದ ಮೇಲೆ ಜೀವ ಎಂದರೆ ಜ್ಯೋತಿಯೆ? ಇದು ವಾಸಿಸುವವರೆಗೆ ಮೂಗಿನಿಂದ ಮೊದಲುಗೊಂಡು ಕರುಳಿನವರೆಗೆ ಉಸಿರಾಟದ ಅವಿರತ ಚಲ್ಲಾಟ. ಹಾಗಾದರೆ ಜೀವ ವಾಯು ರೂಪವೆ? ಹೀಗೆಯೇ ಏನೇನೋ!

ಒಂದು ಮಾತು ಮಾತ್ರ ನಿಜ. ಜೀವ ಅತಿ ಸೂಕ್ಷ್ಮ, ಮಹಾಸಾಗರದ ಕರಾವಳಿಯ ಮಳಲ ರಾಶಿಯಲ್ಲಿಯ ಕಣಕ್ಕಿಂತಲೂ ಚಿಕ್ಕದು. ಸೂಕ್ಷ್ಮದರ್ಶಕ ಯಂತ್ರದ ಅಳವಿಗೆ ಕೂಡ ಸಿಕ್ಕದು ಇದರ ಗಾತ್ರ. ಬಣ್ಣನೆಗೆ ಕೂಡ ನಿಲುಕದ ಈಶನನ್ನು ಬಣ್ಣಿಸಹೊರಟಾಗ ''ಅಣೋರಣೀಯಾನ್ ಮಹತೋ ಮಹೀಯಾನ್'' ಎಂದೆಲ್ಲ ಎನ್ನುತ್ತೇವೆ. ಅಂತಹನ ಒಂದಂಶ ಜೀವವಾಗಿ ಜೀವಲೋಕದಲ್ಲಿ ಅನಾದಿಕಾಲದಿಂದಲೂ ಪ್ರಕಟಗೊಂಡಿತೆಂಬುದು ಗೀತೆಯ ಉಕ್ತಿ. ಇಂತಹ ಸೂಕ್ಷ್ಮಾತಿಸೂಕ್ಷ್ಮದ ರಹಸ್ಯವನ್ನು ಭೇದಿಸುವುದಾದರೂ ಎಂತು? ಅರಿತುಕೊಂಡರೂ ಅದರ ವೃತ್ತಾಂತವನ್ನು ಸಾದ್ಯಂತವಾಗಿ ವಿವರಿಸುವುದಾದರೂ ಎಂತು? ತಾವು ಎಲ್ಲವನ್ನೂ ಬಲ್ಲವರು ಎಂದು ಬಗೆಯುತ್ತ ಬಂದವರ ತಲೆ ಕೆಡಿಸುವ ಪ್ರಶ್ನೆ ಇದಲ್ಲ.

''ಜೀವ ಹೆಬ್ಬೆಟ್ಟಿನ ಮಾಟದ ಪುಟ್ಟ ಪೋರ'' ಎನ್ನುತ್ತಾರೆ ತಿಳಿದವರು. ವಿಷ್ಣುವೂ ವಾಮನನೆ. ಆತ ಕುಳ್ಳನಷ್ಟೇ ಅಲ್ಲ, ದೊಡ್ಡ ಕಳ್ಳ ಕೂಡ. ಮೂರಡಿ ನೆಲವನ್ನು ಬಲಿಯಿಂದ ಬೇಡಿಕೊಂಡು ಮೂರು ಲೋಕಗಳಲ್ಲೆಲ್ಲ ಹರಡಿಕೊಂಡವ ಆತ. ಜೀವವೂ ಅಂಥದೆ. ಬಗೆಬಗೆಯ ಯಂತ್ರಗಳನ್ನು ರೂಪಿಸಿ ನೆಲದಾಳದಲ್ಲಿ, ನೆಲದಮೇಲೆ, ಅಂತರಾಳದಲ್ಲಿ ಎಲ್ಲೆಲ್ಲೂ ನಿತ್ಯವೂ ಅಲೆದಾಡುವ ನೂತನ ತ್ರಿಲೋಕ ಸಂಚಾರಿ ನಾರದ ಈ ಜೀವ. ಮೂರು ಲೋಕದ ಮೂಲೆ ಮೂಲೆಯ ಘಟನೆಗಳನ್ನೆಲ್ಲ ಮೊಗಸಾಲೆಯಲ್ಲಿ ಕುಳಿತುಕೊಂಡವನ ಕಣ್ಣಿಗೆ ಕಟ್ಟುವಂತೆ ತೋರಿಸುವ ಮಾಂತ್ರಿಕ ಈ ಜೀವ. ದೂರವಾಣಿ-ನಭೋವಾಣಿಗಳನ್ನು ಕೇಳಿಸುವ ಕೌಶಲವಿದ್ದರೂ ಜನತೆಯ ವಾಣಿಯನ್ನು ಕೇಳಿಸಿಕೊಳ್ಳದ ಕಿವುಡ ಈ ಜೀವ. ಅಂತ್ಯಾವಸ್ಥೆಯಲ್ಲಿದ್ದವನ ಎದೆಯ ಬಾಗಿಲು ತಟ್ಟಿ ಸೆಳೆದೊಯ್ಯಲು ಬಂದ ಯಮರಾಯನನ್ನು ಕುರಿತು, ''ಹುಷಾರ್! ತಡೆ, ತಡೆ'' ಎಂದು ತಿಂಗಳುಗಟ್ಟಲೆ ಆಚೆಗೆ ತಳ್ಳುವ ಆಧುನಿಕ ಧನ್ವಂತರಿ ಈ ಜೀವ. ಕೊಳವೆಯಲ್ಲಿ ಶಿಶುವನ್ನು ಕೃತ್ರಿಮವಾಗಿ ಸಂವರ್ಧಿಸಿ ಜನಸಂಖ್ಯೆಯ ಸ್ಫೋಟದ ಅಗ್ನಿಗೆ ಇನ್ನಿಷ್ಟು ತುಪ್ಪ ಸುರಿಯುವ ಅಭಿನವ ಬ್ರಹ್ಮ ಈ ಜೀವ. ಇಂಥದೆಲ್ಲ ಒಂದೇ ಎರಡೇ! ಇದೆಲ್ಲದರ ಪರಿಣಾಮವೆಂದರೆ ಈ ಚಿಕ್ಕ ಜೀವಕ್ಕೆ ಸೊಕ್ಕು ಸ್ವಾಭಾವಿಕ. ಜೀವ ಜಂಬದ ಕೋಳಿಯಂತೆ ಮೆರೆಯುವುದಾದರೆ ಏನಚ್ಚರಿ?

ಇದಿಷ್ಟೇ ಸಾಲದು ಎನ್ನುವಂತೆ ಜೀವ ಆಸೆಗಳ ಕಪಿಮುಷ್ಟಿಯಲ್ಲಿ ಸಿಲುಕಿ ಅನುಭವಿಸುವ ಕಷ್ಟ ಅಷ್ಟಿಷ್ಟಲ್ಲ. ಎಷ್ಟಿದ್ದರೂ ಮತ್ತೆ ಮತ್ತೆ ಹೊಸ ಹೊಸದಕ್ಕೆ ಇಷ್ಟಪಡುವ ಸ್ವಭಾವ ಇದರದು. ಭರ್ತೃಹರಿ ವಿವರಿಸುವಂತೆ, ''ಏನಿಲ್ಲದಾಗ ನೂರಾಗಲಿ, ನೂರು ಸಾವಿರವಾಗಲಿ, ಸಾವಿರ ಲಕ್ಷವಾಗಲಿ, ಲಕ್ಷ ಕೋಟಿಯಾಗಲಿ'' ಎನ್ನುವ ಉತ್ಕಟ ಆಕಾಂಕ್ಷೆ. ಚಿಕ್ಕರಾಜ್ಯವಿದ್ದರೆ, ಚಕ್ರವರ್ತಿಯಾಗುವ ಅಪೇಕ್ಷೆ. ಇಂದ್ರಪದ, ಶಿವಪದ, ಹರಿಪದ ಪಡೆಯುವ ನಿರೀಕ್ಷೆ. ಆಸೆಯ ಆಚೆಯ ದಡವನ್ನು ಸೇರಿದ ಭೂಪ ಅದಾವನು? ಭಸ್ಮಾಸುರ, ಹಿರಣ್ಯಕಶ್ಯಿಪು, ರಾವಣ ಮುಂತಾದವರ ಜೀವ ಅದೇನು ಸಾಮಾನ್ಯವೆ? ನ್ಯಾಯಾನ್ಯಾಯ ವಿವೇಚನೆಯಿಂದ ಪರಿಭ್ರಷ್ಟರಾಗಿ, ಯುಕ್ತಾಯುಕ್ತ ವಿವೇಕದಿಂದ ವಂಚಿತರಾಗಿ, ಅತಿಯಾಸೆಗೆ ಒಳಗಾಗಿ, ತಮ್ಮೊಳಗಿನ ಜ್ಯೋತಿಯತ್ತ ಕಣ್ಣೆತ್ತಿ ಕೂಡ ನೋಡದೆ, ಹೊರಗಣ ಸೊಡರಿಗೆ ಮನಸೋತು ದೀಪದ ಹುಳುವಿನಂತೆ ತಮ್ಮನ್ನು ತಾವೇ ವಿಷಯಾಗ್ನಿಯ ಕುಂಡದಲ್ಲಿ ತೂರಿಕೊಂಡು ಭಸ್ಮರಾದರಲ್ಲವೆ?

ಜೀವ ಕೈಗೆಟಕುವ ನೆಲ್ಲಿಕಾಯಿಯಲ್ಲ. ಆದರೂ ಅದನ್ನು ಅಂಗೈಯೊಳಗೆ ಹಿಡಿದುಕೊಂಡೆ ಹೋಗುವ ದುಸ್ಸಾಹಸ ಕೆಲವರದು. ಆತಂಕಕಾರಕ ವ್ಯಕ್ತಿ ಇಲ್ಲವೆ ಉದ್ವೇಗಕಾರಕ ಸಂಗತಿ ಎದುರಾದಾಗ ಬಂದೊದಗುವ ಸಂದರ್ಭವೇ ಇಂಥದು. ಜೀವಿ ತನ್ನ ಜೀವವನ್ನು ಪ್ರೀತಿಸುವಷ್ಟು ಇನ್ನೇನನ್ನೂ ಪ್ರೀತಿಸಲಾರ. ಉಕ್ಕಿಬರುವ ನೀರಿನ ಪ್ರವಾಹದ ಅಪಾಯದಿಂದ ಪಾರಾಗಲು ಹೆಣ್ಣುಮಂಗ ತನ್ನ ಮರಿಯನ್ನೆ ಕಾಲ ಕೆಳಕ್ಕಿರಿಸಿ, ಅದರ ಮೇಲೆ ನಿಂತುಕೊಳ್ಳಲೂ ಹಿಂಜರಿಯಲಿಲ್ಲವೆಂದು ಬೀರಬಲ್ಲನ ಕಥೆ ಚಿತ್ರಿಸುತ್ತದೆ. ''ಆತ್ಮನಸ್ತು ಕಾಮಾಯ ಸರ್ವಂ ಪ್ರಿಯಂ ಭವತಿ'' ಎಂಬ ಋಷಿ ವಾಕ್ಯವು ಜೀವ ಪ್ರೀತಿಯ ದ್ಯೋತಕ ಎಂಬ ಮಾತಿಗೆ ಪುಷ್ಟಿ ನೀಡುವಂಥದು. ಶ್ರೀರಾಮ ಸೀತೆಯನ್ನು ತನ್ನಿಂದ ಭಿನ್ನವೆಂದು ಬಗೆಯದೆ ತನ್ನ ಜೀವವೆಂದೆ ಪರಿಗಣಿಸಿದ. ''ತ್ವಂ ಜೀವಿತಂ ತಮಸಿಮೇ ಹೃದಯಂ ದ್ವಿತೀಯಂ'' (ನೀನು ಎನ್ನಯ ಜೀವ, ನೀನೆನ್ನ ಎರಡನೆಯ ಹೃದಯ) ಎಂದು ಮೊದಲಾಗಿ ನಿವೇದಿಸುತ್ತದೆ 'ಉತ್ತರ ರಾಮಚರಿತಂ' ನಾಟಕ.

ಜೀವ ಬೆಲೆಕೊಟ್ಟು ಕೊಳ್ಳುವ ವಸ್ತುವಲ್ಲ. ಬೆಳದಿಂಗಳು, ತಂಗಾಳಿ, ಕನ್ನೆಯ ಸ್ನೇಹ, ಒಳ್ಳೆಯ ಕಾವ್ಯ ಮುಂತಾದವುಗಳು ''ಭುವನ ಭಾಗ್ಯದಿಂದ'' ಉಂಟಾದವುಗಳು; ಅವುಗಳನ್ನು ಬೆಲೆಗೊಟ್ಟು ತರಲುಂಟೆ ?- ಎಂದು ಪ್ರಶ್ನಿಸುತ್ತಾನೆ ಕನ್ನಡಕವಿ ನೇಮಿಚಂದ್ರ. ಇಂತಹವುಗಳ ಪಟ್ಟಿಗೆ ಸೇರಿದುದು ಜೀವ. ಸರ್ಪದಂಶದಿಂದ ದುರ್ಮರಣಕ್ಕೀಡಾದ ಪ್ರಿಯತಮೆ ಪ್ರಮದ್ವರೆಯನ್ನು ರುರುವು ಯಮನ ಸಲಹೆಯಂತೆ ತನ್ನ ಅರ್ಧಾಯುಷ್ಯವನ್ನು ಆಕೆಗೆ ಕೊಡಮಾಡಿ ಬದುಕಿಸಿಕೊಂಡನೆಂಬ ಮಹಾಭಾರತದ ಕಥೆ ಈ ಮಾತಿಗೆ ಅಪವಾದವಷ್ಟೇ. ಇಂಥ ಪ್ರವಾದ ಸಾರ್ವತ್ರಿಕವೂ ಸಾಧ್ಯವಾಗುತ್ತಿದ್ದರೆ ಪ್ರಪಂಚದಲ್ಲಿ ಎಲ್ಲ ಪತಿಪತ್ನಿಯರು ಏಕಕಾಲಕ್ಕೇ ಅಸುನೀಗುತ್ತಿದ್ದರು. ವೈಧವ್ಯ-ವೈಧುರ್‍ಯದ ವ್ಯಸನದಿಂದ ಪಾರಾಗುತ್ತಿದ್ದರು ಎನ್ನಬಹುದಲ್ಲ?

• ಪ್ರೊ. ಶ್ರೀನಿವಾಸ ತೋಪಖಾನೆ

# ಮೋಸಂಬಿ ರಸ ಪ್ರಸಂಗ

೧೯೮೧ರ ಒಂದು ಪ್ರಾತಃಕಾಲ, 'ಅಣ್ಣಾ' ಅವರಿಗೆ ಮೋಸಂಬಿ ರಸ ಕುಡಿಯುವ ಆಸೆ. ಸಕ್ಕರೆ-ನೀರು ಅಥವಾ ಬೆಲ್ಲದ ನೀರುಗಳಿಂದ ಮಾತ್ರ ತೃಪ್ತಿ ಹೊಂದುವುದು ಬಾಲ್ಯದಿಂದಲೂ ಬೇಂದ್ರೆಯವರಿಗೆ ಬೆಳೆದು ಬಂದ ರೂಢಿ. ಇವುಗಳನ್ನು ಬಿಟ್ಟು ಬೇರೆ ಯಾವ ಪೇಯವನ್ನೂ ಎಂಬತ್ತೈದು ವರ್ಷಗಳಲ್ಲಿ ಬಯಸದವರು, ನಸುಕಿನ ೫ ಗಂಟೆಗೆ ಮೋಸಂಬಿ ರಸ ಬಯಸಿದರು! ಆ ಕಾಲಕ್ಕೆ ಅವರ ಪ್ರಕೃತಿ ಅತ್ಯಂತ ಚಿಂತಾಜನಕ ಸ್ಥಿತಿಯಲ್ಲಿತ್ತು.

ಧಾರವಾಡದ ಅಮ್ಮಿನಗಡ ರಸಪಾನ ಗೃಹದೊಂದಿಗೆ ನನಗೆ ಸಲಿಗೆ ಇತ್ತು. ಅವರಲ್ಲಿ ಧಾವಿಸಿ ಹೋಗಿ, ಬಾಗಿಲು ಬಡೆದು ಎಬ್ಬಿಸಿ, "ಬೇಂದ್ರೆಯವರಿಗೆ ಈಗಿಂದೀಗ ಮೋಸಂಬಿ ರಸ ಕುಡಿಯುವ ಅಪೇಕ್ಷೆ ಇದೆ," ಎಂದೆ. ಅವರು ಲಗುಬಗೆಯಿಂದ ಎದ್ದು, ತಮ್ಮ ಪದ್ಧತಿಯ ಪ್ರಕಾರ ನಿತ್ಯದ ಯಂತ್ರಪೂಜೆ ಇತ್ಯಾದಿ ಮಾಡಿ, ಉತ್ತಮವಾದ ಮೋಸಂಬಿ ರಸ ತೆಗೆದು ತುಂಬಿ ಕೊಟ್ಟರು. ನಾನು ಮನೆಗೆ ಬಂದಾಗ ಏಳು ಗಂಟೆಯಾಗಿತ್ತು.

ನಾನು ಅತ್ಯಂತ ಉತ್ಸಾಹದಲ್ಲಿ ಮೋಸಂಬಿ ರಸವನ್ನು ಅಣ್ಣಾ ಅವರ ಎದುರಿಗೆ ಹಿಡಿದೆ. "ಆಸೆ ಇಂಗಿಹೋಯಿತು, ಈಗ ನನಗೆ ಅದನ್ನು ಕುಡಿಯುವ ಆಸಕ್ತಿ ಇಲ್ಲ," ಎಂದರು.

"ಹಾಗಾದರೆ ಈಗ ಈ ರಸವನ್ನು ಮಾಡಲಿ?" ಎಂದು ಕೇಳಿದೆ.

"ಹೊರಗಿನ ಆಲ-ನೆಲ್ಲಿ ಸಂಗಮಕ್ಕೆ ಸುರಿದು ಬಾ, ಹೇಳುವೆ," ಎಂದರು.

ನಾನು ಅದನ್ನೆಲ್ಲ ಆಲ-ನೆಲ್ಲಿಯ ಸಂಗಮಕ್ಕೆ ಸುರಿದೆ. ತಂದೆಯವರ ಒಂದು ಸಣ್ಣ ಇಚ್ಛೆಯನ್ನು ಪೂರೈಸಲಾಗಲಿಲ್ಲವಲ್ಲ ಎಂಬ ದುಃಖ ನನಗೆ ತುಂಬಿಬಂದಿತ್ತು.

ಕೋಣೆಯ ಒಳಗೆ ಹೋದರೆ ಬೇಂದ್ರೆಯವರೂ ಅಳುತ್ತಿದ್ದರು. ಅವರು ಅತ್ತದ್ದನ್ನೇ ನಾನು ಕಂಡಿರಲಿಲ್ಲ. "ಏನಾಯಿತೀಗ?" ಎಂದೆ.

"ಏನೂ ಇಲ್ಲ. ನನ್ನ ಪ್ರಕೃತಿ ಸಂಪೂರ್ಣ ಕೆಟ್ಟಿದೆ. ಯಮದೂತ ಕ್ಷಣಾಕ್ಷಣಕ್ಕೆ ಕರೆಯುತ್ತಿದ್ದಾನೆ. ನನಗೋ, ನನ್ನ ಸಾಂಖ್ಯಚಿಂತನೆಗೆ ಲಿಖಿತ ರೂಪ



ಬೇಂದ್ರೆ ನೆನಪು

ಕೊಡುವ ಇಚ್ಛೆ ಇದೆ. ಇದಕ್ಕಾಗಿ ನನಗೆ ಇನ್ನೂ ಹತ್ತು ವರ್ಷದ ಆಯುಷ್ಯಬೇಕು," ಎಂದರು.

"ಇದರಲ್ಲಿ ನಾನು ಮಾಡುವಂಥದೇನಿದೆ?" ಎಂದು ಕೇಳಿದೆ.

"ಇದೆ. ಅದನ್ನೇ ಹೇಳುತ್ತೇನೆ. ನನ್ನ ಎಲ್ಲ ಪುಸ್ತಕಗಳ ಹಕ್ಕು ಪ್ರಕಾಶಕರಿಗೆ ಮಾರು. ಈ 'ಶ್ರೀಮಾತಾ' ಮನೆ ಒತ್ತೆ ಹಾಕಿ ಹಣ ಪಡೆ. ಆ ಹಣದಿಂದ ನನಗೆ ಉಪಚಾರ ಮಾಡಿಸಿ ನನ್ನ ಕನಸು ನನಸಾಗುವಂತೆ ಮಾಡು. ವಚನ ಕೊಡು," ಎಂದು ಕೈ ಮುಂದೆ ಮಾಡಿದರು. ಅವರ ಕೈ ಮೇಲೆ ಅವರ ಕಣ್ಣೀರ ಹನಿ ಸುರಿಯುತ್ತಿದ್ದವು. ನನ್ನ ಕೈ ಮೇಲೆ ನನ್ನ ಕಣ್ಣೀರ ಹನಿ ಬೀಳುತ್ತಿದ್ದವು. ನಾನು ವಚನಕೊಟ್ಟೆ- "ಪುಸ್ತಕದ ಹಕ್ಕು ಮಾರದೆ, ಮನೆಯನ್ನೂ ಒತ್ತೆ ಹಾಕದೆ ನಿಮಗೆ ಉಪಚಾರ ಮಾಡಿಸಿ ಬದುಕಿಸಿಕೊಳ್ಳುವೆ."

ದುರ್ದೈವದಿಂದ ವಚನ ಭ್ರಷ್ಟನಾದೆ. ಬೇಂದ್ರೆಯವರನ್ನು ಬದುಕಿಸಿ 'ಶ್ರೀಮಾತಾ'ಕ್ಕೆ ತರಲಾಗಲಿಲ್ಲ.

• ವಾಮನ ಬೇಂದ್ರೆ

# ಉಪ್ಪಿಟ್ಟು-ಉಪನ್ಯಾಸ

ಕವಿವರ್ಯ ಬೇಂದ್ರೆಯವರಿಗೆ ಜ್ಞಾನಪೀಠ ಪ್ರಶಸ್ತಿಯನ್ನು ತಂದಿತ್ತ ಸುಪ್ರಸಿದ್ಧ ಕೃತಿ 'ನಾಕು ತಂತಿ'ಯನ್ನು ಮರಾಠಿಯಲ್ಲಿ 'ಚಾರ್ ತಂತು' ಎಂದು ಬೆಳಗಾವಿಯ ವ್ಯಂ.ಲ. ಜೋಶಿ ಎಂಬ ಅಧ್ಯಾಪಕರು ಅನುವಾದಿಸಿದ್ದಾರೆ. ಮುಂಬಯಿಯಲ್ಲೊಮ್ಮೆ ನನಗೆ ಜೋಶಿಯವರ ಭೆಟ್ಟಿಯಾಯಿತು. (ಅವರ ಮಗ ಮುಕುಂದ ಜೋಶಿ ಕೂಡ ಲೇಖಕ) ಮಾತು ಬೇಂದ್ರೆಯವರ ಕುರಿತೇ ನಡೆಯಿತು.

"ಬೇಂದ್ರೆಯವರು ಪ್ರತಿಭೆಯಲ್ಲಿ ಎಷ್ಟು ವಿಲಕ್ಷಣರೋ ಪ್ರವೃತ್ತಿಯಲ್ಲಿ ಅಷ್ಟೇ ವಿಕ್ಷಿಪ್ತರಾಗಿದ್ದರು," ಎಂದರು ಜೋಶಿ. ಅಷ್ಟೇ ಅಲ್ಲ, ಆ ಕುರಿತಾದ ತಮ್ಮ ಒಂದು ಅನುಭವವನ್ನು ಹೇಳಿದರು:

ಬೆಳಗಾವಿಗೆ ಒಮ್ಮೆ ಬೇಂದ್ರೆಯವರು ಬಂದಿದ್ದರಂತೆ. ಜೋಶಿಯವರಲ್ಲೇ ಇಳಿದುಕೊಂಡರು. ಕವಿವರ್ಯರ ಒಂದು ಉಪನ್ಯಾಸದ ಏರ್ಪಾಡೂ

# "ಯಾರಿಗೆ ಬೇಕಾಗೇದ ನಿಮ್ಮ ಕವಿತಾ?"

ಧಾರವಾಡದ ಒಂದು ಶಾಲೆಯಲ್ಲಿ ಕವಿವರ್ಯ ದ.ರಾ.ಬೇಂದ್ರೆಯವರ ಉಪನ್ಯಾಸದ ಏರ್ಪಾಡಾಗಿತ್ತು. ಉಪನ್ಯಾಸ ಮುಗಿದ ಮೇಲೆ, ಕೆಲವು ಶ್ರೋತೃಗಳು ಬೇಂದ್ರೆಯವರು ತಮ್ಮದೊಂದು ಕವನವನ್ನು ಹಾಡಿತೋರಿಸಬೇಕೆಂಬ ಅಪೇಕ್ಷೆಯನ್ನು ವ್ಯಕ್ತಪಡಿಸಿದರು. ಅದಕ್ಕೆ ಬೇಂದ್ರೆಯವರು ಸಮ್ಮತಿಸಿ, "ಯಾವ ಕವಿತಾ ಹಾಡಿ ತೋರಿಸಲಿ?" ಎಂದು ಸಭಿಕರನ್ನೇ ಪ್ರಶ್ನಿಸಿದರು. ಇಂಥ ಕವಿತೆ, ಇಂಥ ಕವಿತೆ ಎಂದು ಸಭಿಕರಲ್ಲಿ ಸಣ್ಣ ಧ್ವನಿಯಲ್ಲಿ ಚರ್ಚೆ ನಡೆಯಿತು. ಅಷ್ಟರಲ್ಲಿ, ಅನಿರೀಕ್ಷಿತವಾಗಿ, ಹಿಂದೆ ಕುಳಿತ ಸಭಿಕರೊಬ್ಬರು "ಯಾರಿಗೆ ಬೇಕಾಗೇದ ನಿಮ್ಮ ಕವಿತಾ?" ಎಂದು ದೊಡ್ಡ ಧ್ವನಿಯಲ್ಲಿ ಕೂಗಿದರು. ಆಗ, ಬೇಂದ್ರೆಯವರಿಗೆ ಅಗೌರವಸೂಚಿಸುವ, ಅನಿರೀಕ್ಷಿತವಾದ ಈ ಮಾತನ್ನು ಕೇಳಿ ಸಭೆಗೆ ಸಭೆಯೇ ಒಮ್ಮೆಲೆ ಸ್ತಬ್ಧವಾಯಿತು. ಬೇಂದ್ರೆಯವರನ್ನು ಇಷ್ಟೊಂದು ಉದ್ಧಟತನದಿಂದ ಅವಮಾನಗೊಳಿಸುತ್ತಿರುವ ವ್ಯಕ್ತಿ ಯಾರೆಂದು ಎಲ್ಲರೂ ಹೊರಳಿ ನೋಡಿದರು. ಆದರೆ, ಬೇಂದ್ರೆಯವರು ಮಾತ್ರ ನಸುನಗುತ್ತ ಕುಳಿತಿದ್ದರು. ಸ್ವಲ್ಪ ಹೊತ್ತಿನ ನಂತರ, ಬೇಂದ್ರೆಯವರೇ ವಿವರಿಸಿದರು- "ಆ ಹೆಸರಿನದೇ ನಾನು ಬರೆದ ಒಂದು ಕವಿತಾ ಇದೆ" ಎಂದು! ಆಗ, ಸಭೆಯಲ್ಲಿ ನಗೆಯ ಅಲೆ ಎದ್ದು ವಾತಾವರಣವು ಮತ್ತೆ ಪ್ರಸನ್ನವಾಯಿತು.

• ಪ್ರೊ. ಜೆ.ಡಿ. ನಾಡಕರ್ಣಿ

ಆಯಿತು. ಬೇಂದ್ರೆ ಉತ್ಸಾಹದಿಂದಲೇ ಉಪನ್ಯಾಸಕ್ಕೆ ಅಣಿಯಾದರು.

ಉಪನ್ಯಾಸ ಸ್ಥಳದ ಮೊಗಸಾಲೆಯಲ್ಲಿ ಕುಳಿತಾಗ ಬೇಂದ್ರೆಯವರಿಗೆ ಅದೇಕೋ ಉಪ್ಪಿಟ್ಟು ತಿನ್ನುವ ಆಸೆಯಾಯಿತು. ಹತ್ತಿರದ ಚಹದಂಗಡಿಯಿಂದ ತರಿಸಿಕೊಟ್ಟರಾಯಿತೆಂದರೆ ಆ ಅಂಗಡಿ ಅಂದು ತೆರೆದಿರಲಿಲ್ಲ. ಅಷ್ಟೇ ಅಲ್ಲ, ಸಮೀಪ ಯಾವ ಹೊಟೇಲೂ ಇರಲಿಲ್ಲ. ಮನೆಯಿಂದ ಹೊರಡುವ ಮುನ್ನವೇ ಅವರು ತಮ್ಮ ಇಚ್ಛೆಯನ್ನು ವ್ಯಕ್ತಪಡಿಸಿದ್ದರೆ ಒಳ್ಳೆಯದಿತ್ತು ಎಂದುಕೊಂಡರು ಜೋಶಿ.

ಒಳಗೆ ಹಾಲ್‌ನಲ್ಲಿ ಬೇಂದ್ರೆಯವರ ಉಪನ್ಯಾಸ ಕೇಳಲು ಜನ ಕಿಕ್ಕಿರಿದು ಕಾತರಿಸಿ ಕಾದಿದ್ದಾರೆ. ಆದರೆ ಉಪ್ಪಿಟ್ಟು ಬರುವ ತನಕವೂ ಕವಿವರ್ಯರು ಅಲ್ಲಿ ಹೋಗುವಂತಿಲ್ಲ. ಉಪ್ಪಿಟ್ಟು ಸಿಗುತ್ತಿಲ್ಲ ಎಂದು ಅವರಿಗೆ ಹೇಳುವುದಾದರೂ ಹೇಗೆ ಎಂಬುದು ಜೋಶಿಯವರಿಗಿದ್ದ ಆತಂಕ. ಆದರೂ ಧೈರ್ಯ ಮಾಡಿ ಇದ್ದ ಪರಿಸ್ಥಿತಿಯನ್ನು ಬೇಂದ್ರೆಯವರಿಗೆ ಅವರು ಹೇಳಿಯೇಬಿಟ್ಟರು.

"ಉಪ್ಪಿಟ್ಟು ಇಲ್ಲದಿದ್ದರೆ ಉಪನ್ಯಾಸವೂ ಇಲ್ಲ" ಎಂದು ಕೆರಳಿ ನುಡಿದುಬಿಟ್ಟರಂತೆ ಬೇಂದ್ರೆ. ಅಲ್ಲಿದ್ದ ಎಲ್ಲರಿಗೂ ಗಾಬರಿ. ಅಷ್ಟರಲ್ಲೇ ಯಾರೋ ಸೈಕಲ್ ಮೇಲೆ ಹೋಗಿ ಮನೆಯಿಂದ ಬಿಸಿಬಿಸಿ ಉಪ್ಪಿಟ್ಟು ಮಾಡಿಸಿಕೊಂಡು ತಂದರು. ಸದ್ಯ ಎಲ್ಲರೂ ನಿಟ್ಟುಸಿರುಬಿಡುವಂತಾಯಿತು.

ಬೇಂದ್ರೆಯವರು ಮುಖ ಅರಳಿಸಿಕೊಂಡರು. ಎದುರಿಗಿಟ್ಟ ಉಪ್ಪಿಟ್ಟಿನ ಪ್ಲೇಟಿಗೆ ಕೈ ಹಾಕಿ ಒಂದೆರಡು ತುತ್ತು ಬಾಯಿಗೆ ಹಾಕಿಕೊಂಡರು. ನಂತರ, "ಹೂಂ, ನಡೀರಿ ಹಾಲ್‌ಗೆ. ಜನಾ ಕಾಯ್ಲಿಕ್ಹತ್ತ್ಯಾರ. ಗದ್ದಲ ಸುರೂ ಆಗೇದ," ಎಂದು ಆ ತಟ್ಟೆಯನ್ನು ಪಕ್ಕಕ್ಕೆ ಸರಿಸಿಟ್ಟು ಸಭೆಗೆ ನಡೆದೇಬಿಟ್ಟರು.

• ಗೌರೀಶ ಕಾಯ್ಕಿಣಿ

## "ಕಾಶೀ ವಿಶ್ವೇಶ್ವರನ ಭಾಗ್ಯ"

ಪದಗಾರುಡಿಗ ಬೇಂದ್ರೆಯವರು ಶಿವಮೊಗ್ಗ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರೆಂದು ಆಯ್ಕೆಗೊಂಡ ನಂತರ ಅಥಣಿಯ ನಾಗರಿಕರು ಅವರನ್ನು ಸನ್ಮಾನಿಸಲೆಂದು ಒಂದು ಸಮಾರಂಭವನ್ನು ಏರ್ಪಡಿಸಿದರು. ಸಪ್ಪಾಣಿಕರರ ವಾಡೆಯಲ್ಲಿ ಕಾರ್ಯಕ್ರಮ. ಕಿಕ್ಕಿರಿದು ತುಂಬಿದ ಜನ ಸಮೂಹ. ವರಕವಿಗೆ ಮಾಲಾರ್ಪಣೆ ಮಾಡಬಯಸಿದ್ದವರೂ ಬಹಳ ಮಂದಿ. ಹೀಗಾಗಿ ವಿಜಾಪುರದಿಂದ ಎರಡು ಕರಂಡಕ ಮಾಲೆಗಳನ್ನು ತರಿಸಲಾಯಿತು. ಅನೇಕ ಸಂಘ-ಸಂಸ್ಥೆಗಳು, ಗಣ್ಯರು ತಮ್ಮ ಹೆಸರು ನೋಂದಾಯಿಸಿದರು.

ಆದರೆ ಮಾಲೆಗಳ ಕೊರತೆಯುಂಟಾಯಿತು. ಬೇಂದ್ರೆಯವರಿಗೆ ಹಾಕಿದ್ದ ಮಾಲೆಗಳನ್ನೇ ಮೆಲ್ಲಗೆ ವೇದಿಕೆಯ ಹಿಂಭಾಗಕ್ಕೆ ಸಾಗಿಸಿ ಅವುಗಳನ್ನು ಯಾದಿಯಲ್ಲಿದ್ದವರ ಕೈಗೆ ಕೊಡುತ್ತಲಿದ್ದರು. ಸಭಿಕರಿಗೆ ಇದು ಗೊತ್ತಾಗಿ ಗುಸುಗುಸು ಶುರುವಾಯಿತು.

ಆಗ ಬೇಂದ್ರೆಯವರು, "ನೀವು ಯಾಕ ಗುಸುಗುಸು ಪಿಸು ಪಿಸು ಮಾಡ್ಲಿಕ್ಹತ್ತೀರಿ ಅಂತ ನನಗ್ಗೊತ್ತಾಗೇದ. ಹಾಕಿದ ಮಾಲಿಗಳನ್ನs ಮತ್ತ ಮತ್ತ ಹಾಕಲಿಕ್ಹತ್ತ್ಯಾರ ಅನ್ನೂದೂ ನನಗ ತಿಳದsದ. ನಿಮಗ್ಗೊತ್ತದ ಏನು? ಕಾಶೀ ಒಳಗ ವಿಶ್ವೇಶ್ವರಗ ಏರಿಸಿದ ಬಿಲ್ವಪತ್ರಿ ಹೂಗಳನ್ನ ಪೂಜಾರು ಹೊರಗ ಕಳಿಸಿ ಮಾರೂ ವ್ಯವಸ್ಥಾ ಮಾಡತಾರ. ಅವನ್ನ ಕೊಂಡು ತಂದ ಭಕ್ತರ ಕೈಯಿಂದ ಆ ಬಿಲ್ವಪತ್ರಿ-ಹೂಗಳನ್ನ ಇಸಗೊಂಡು ಮತ್ತ ವಿಶ್ವೇಶ್ವರನ ತಲೀಗೆ ಏರಸ್ತಾರ. ಪಂಢರಪುರದ ವಿಠೋಬನ ಗತೀನೂ ಹಂಗss. ಅಲ್ರೀ, ಕಾಶೀ ವಿಶ್ವೇಶ್ವರಗ, ಪಂಢರಪುರದ ವಿಠೋಬಗ ಸಂದಂಥಾ ಆ ಭಾಗ್ಯ ಇವತ್ತ ಬೇಂದ್ರೆಗೂ ಸಂದsದ ಅಂದ ಮ್ಯಾಲೆ ಇದಕ್ಕಿಂತಾ ಹೆಚ್ಚು ಇನ್ನೇನ ಬೇಕ ಹೇಳ್ರಿ?" ಎಂದು ಹೇಳಿಬಿಟ್ಟರು.

ಸಭೆ ಚಪ್ಪಾಳೆಗಳ ತೆರೆಗಳಲ್ಲಿ ಮುಂದಿನ ನಾಲ್ಕೈದು ನಿಮಿಷಕಾಲ ತೇಲಿತು.

• ರಾಜಣ್ಣಾ ಆನಿಖಿಂಡಿ

## ಕನ್ನಡ ಕಥೆ




• ಕುಂ. ವೀರಭದ್ರಪ್ಪ

ಕಲ್ಲುಗುಂಡೊಂದು ಗ್ರಾಮದ ಇತಿಹಾಸ ಬದಲಿಸಿದ ಪ್ರಸಂಗ ಹೇಳುತ್ತೇನೆ ಕೇಳಿ. ಗಾಳಿಗೆ ಹಾರಿ ಹೋಗುವ ತರಗೆಲೆಯಂತಿದ್ದ 'ವಿ' ಎಂಬಾತ ತನ್ನ ಸಣಕಲು ಶರೀರದಲ್ಲಿ ದೇಶ ಆಮೂಲಾಗ್ರವಾಗಿ ಬದಲಾಗಬೇಕೆಂಬ ಮಹಾತ್ವಾಕಾಂಕ್ಷೆ ತುಂಬಿಕೊಂಡಿದ್ದ. ಅಸಮಾನತೆಯ ವಿರುದ್ಧ ತನ್ನ ಕುಡಿಮೀಸೆಯನ್ನು ಸಾಣೆ ಹಿಡಿಯುತ್ತಿದ್ದ. ತುರ್ತುಪರಿಸ್ಥಿತಿ ವಿರುದ್ಧ ಆವೇಶದಿಂದ ಮಾತಾಡಿದ್ದ. ರಕ್ತದಲ್ಲಿ ಪೆನ್ನದ್ದಿ ಪದ್ಯ ಬರೆದು ಪೊಲೀಸರಿಗೆ ಬೇಕಾಗಿದ್ದ. ಕನಸುಗಳಲ್ಲಿ ಕ್ರಾಂತಿಕಾರಿಗಳು ಕಾಣಿಸಿಕೊಂಡು ಹೆದರಿಸತೊಡಗಿದರು. ಕ್ರಾಂತಿಯ ಅರೆಹುಚ್ಚು ಹಿಡಿದು ತನ್ನ ಜೇಷ್ಠಪುತ್ರ ಪಟ್ಟಣದ ಮುಖ್ಯ ಬೀದಿಗಳಲ್ಲಿ ಬೆನ್ನು ಮತ್ತು ಹೊಟ್ಟೆ ಮೇಲೆ ಧಿಕ್ಕಾರಗಳನ್ನು ಬರೆದುಕೊಂಡು ಅಹರ್ನಿಶಿ ತಿರುಗಾಡಬಹುದೆಂದು ಆತನ ತಂದೆ ಊಹಿಸಿದರು. ನಿರುದ್ಯೋಗಿಯಾಗಿದ್ದ ಆತನಿಗೆ ಮದುವೆ ಮಾಡಬೇಕೆಂದು ನಿಶ್ಚಯಿಸಿ ಕಪ್ಪು ಹುಡುಗಿ ತೋರಿಸಿದರು. ಹುಡುಗಿಗಿಂತ ಆಕೆಯ ಕಪ್ಪು ಬಣ್ಣ ಇಷ್ಟಪಟ್ಟ. ಭಾರತೀಯ ಕೌಟುಂಬಿಕ ವ್ಯವಸ್ಥೆಯ ಬಗೆಗಿನ ಪುಸ್ತಕವನ್ನು ಅಂದೇ ರಾತ್ರಿ ಮುಗುಚಿಹಾಕಿದ. ಪ್ರಾಥಮಿಕ ಕೆಂಬೆಳಕು ಮುಗಿಲಿಗೆ ಅಡರಿದ್ದಾಗ ಈಗಲೇ ಮದುವೆ ಒಲ್ಲೆ ಅಂದ. ಹಾಳಾಗಿ ಹೋಗೆಂದ ಅಪ್ಪ. ಹಾಳಾಗಲೆಂಬ ಸದುದ್ದೇಶದಿಂದ 'ವಿ' ಅಜ್ಜಿಯ ವಶೀಲಿಯಿಂದ ಆಂಧ್ರದ ಗಡಿಭಾಗ ಸೇರಿದ. ತನ್ನ ಇಪ್ಪತ್ತನೇ ವಯಸ್ಸಿಗೇನೆ ಐದು ಮಕ್ಕಳಿಗೆ ತಾಯಿಯಾಗಿದ್ದ ಅಕ್ಕ ಒಲ್ಲದ ಮನಸ್ಸಿನಿಂದ ತಮ್ಮನಿಗೆ ಆಶ್ರಯ ನೀಡಿದಳು, ಸಂಕೋಚದಿಂದ ಒದ್ದಾಡುತ್ತಿದ್ದ 'ವಿ' ನಕ್ಸಲೈಟ್ ಬಗ್ಗೆ ತಿಳಕೋ ಬೇಕಂತ ತೆಲುಗುಸಾಹಿತ್ಯದ ಬಗ್ಗೆ ತಲೆ ಕೆಡಿಸಿಕೊಂಡ. ಬಗಲಲ್ಲಿ ದಪ್ಪನೆ ಪುಸ್ತಕಗಳನ್ನು ಬೆವರಿಗೆ ಬಲಿಕೊಡುತ್ತ ಕನ್ನಡ ಸಂಘದವರ ಗಮನಸೆಳೆದ. ಆದಿಕವಿ ಪಂಪನ ಹೆಸರನ್ನಷ್ಟೆ ಕೇಳಿದ್ದ ಅವರು ಇವನು ಅದರ ಕಸಿ ಇದ್ದಿರಬೇಕೆಂದುಕೊಂಡರು. ಶರೀರದೊಳಗಿನ

---

**ಹೇಮಾ-ಹೇಮಿಗಳ ಪೌರುಷಕ್ಕೆ ಸವಾಲು ಹಾಕುತ್ತಿರುವ ಆ ಗುಂಡನ್ನು ಎತ್ತಿದವರಿಗೆ ಬಹುಮಾನವಾಗಿ ನೀಡಬೇಕೆಂದು ಒಂದೂವರೆ ಸೇರು ತೂಕದ ಬೆಳ್ಳಿಯ ಕಡಗವನ್ನು ಚೇರ್ಮನ್ ಶಂಕರರೆಡ್ಡಿಯ ಬಳಿ ಇಟ್ಟದ್ದು ನಿಜವೊ ಸುಳ್ಳೊ ಎಂಬುದೇ ಒಂದು ಜಿಜ್ಞಾಸೆಯ ವಿಷಯವಾಗಿಬಿಟ್ಟಿತು.**

---

ಶಾರೀರ ಮೆಚ್ಚಿದರು. ಗತಿಕಾಣಿಸಬೇಕೆಂದು ಅವರವರೇ ನಿಶ್ಚಯಿಸಿ ಮೇಷ್ಟ್ರು ಕೆಲಸಕ್ಕೆ ಅರ್ಜಿ ಹಾಕಿಸಿದರು. ಎರಡನೆ ಪಗಾರಕ್ಕೆ ಬೆಂಗಳೂರು ನೋಡಬೇಕೆಂದುಕೊಂಡಿದ್ದ ಆತನಿಗೆ ಕೆಲಸ ಸಿಕ್ಕಿತು. ಯಾರೂ ಇಷ್ಟಪಡದ 'ವಾ' ಎಂಬ ಗ್ರಾಮವೊಂದಿತ್ತು. ಅಲ್ಲಿ ಅಂಥೋರಿದ್ದಾರೆ ಇಂಥೋರಿದ್ದಾರೆ ಅಂತ ಹೆದರಿಸಿದರು. ಸೊಪ್ಪು ಹಾಕಲಿಲ್ಲ. ಆದ್ರು ತಗೊಂಡ. ಪಾಯಿಜಾಮದೊಳಗಿನ ಕಾಲುಗಳನ್ನು ಲಟಗೂ ಪಟಗೂ ಹಾಕುತ್ತ 'ವಾ' ಕಡೆ ಹೆಜ್ಜೆ ಹಾಕಿದ. ಬಿಕೋ ಅಂತಿದ್ದ ಬಯಲಿಗಾಗಲೀ; ನದಿಗಳಂತೆ ಭ್ರಮೆಹುಟ್ಟಿಸುತ್ತಿದ್ದ ಬಿಸಿಲಿಗಾಗಲಿ; ಆಕಾಶಕ್ಕೂ ಭೂಮಿಗೂ ತರಗೆಲೆಯ ಸೇತುವೆ ಕಟ್ಟುತ್ತಿದ್ದ ಸುಂಟರಗಾಳಿಗಳಿಗಾಗಲೀ ಕ್ರಾಂತಿಕಾರಿ ಕೇರ್ ಮಾಡಲಿಲ್ಲ. ಆತನನ್ನು ಮಂಗಳಗ್ರಹದಲ್ಲಿ ಪ್ರತಿಷ್ಠಾಪಿಸಲು ಒಂದೆರಡು ಸುಂಟರಗಾಳಿಗಳು ಮಾಡಿದ ಪ್ರಯತ್ನ ಸಫಲವಾಗಲಿಲ್ಲ. ಆತ್ಮಲಿಂಗದಂತೆ ನೆಲಕಚ್ಚಿ ಕುಂತಿದ್ದ. ತ್ರಿವಿಕ್ರಮನಂತೆ ಒಂದೊಂದು ಹೆಜ್ಜೆಗೆ ಒಂದೊಂದು ಲೋಕ ಅಳೆಯುತ್ತ ಎಂದೋ ಜೀವಂತವಿದ್ದ ಹಳ್ಳಪ್ರವೇಶಿಸಿದ. ಪೊದೆಯಿಂದ ಹೊರಬಂದ ನರಿಯೊಂದು ಮುಗಿಲು ಕಳಚಿ ಬೀಳುವಂತೆ ಊಳಿಟ್ಟು ಆತನಿಗೆ ಶುಭಕೋರಿತು.

ನರಹುಳುಗಳಿಲ್ಲದ ಬಯಲಲ್ಲಿ ನಡೆದೂ ನಡೆದೂ; ಪ್ರತಿಹೆಜ್ಜೆಗೆ ರಸ್ತೆಯಿಂದ ವಂಚಿತಗೊಂಡಿರುವ ಭಾರತದ ಗ್ರಾಮಗಳ ಬಗ್ಗೆ ಮಮ್ಮಲನೆ ಮರುಗುತ್ತ; ನಿಡುಸುಯ್ಯು ಬಿತ್ತುತ್ತ; ಬಯಲನ್ನೇ ಕಥೆ ಮಾಡಿದರೆ ಹೇಗೆಂಬ ಆಲೋಚನೆ ಬೆಳೆಯುತ್ತ; ತಾನು ಮಹಾಕಥೆಗಾರನಾದೇನೆಂಬ ಕನಸು ಕಾಣುತ್ತ; ಅಂತೂ ಇಂತೂ ಗ್ರಾಮ ಸಮೀಪಿಸಿದ. ಕುಡಿದು ಮಲಗಿದ್ದ ಇಬ್ಬರ ಮೇಲೆ ಕುರಿ ಹಿಂಡು ನಡೆದ ಹೋಗಿದ್ದನ್ನು ನೋಡಿ ಮೂಕವಿಸ್ಮಿತನಾದನು. ಮುರುಕು ತಡಿಕೆಯ ಮರೆಯಲ್ಲಿ ಬತ್ತಲಾಗಿ ಕೂತಿದ್ದ ಹೆಂಗಸಿನ ಬೆನ್ನನ್ನು ಗಂಡಸೊಬ್ಬ ಉಜ್ಜುತ್ತಿದ್ದುದು ಕಂಡು ಕಥೆಗೆ ವಸ್ತು ಸಿಕ್ಕಹಾಗೆಯೇ ಎಂದುಕೊಂಡ. ಗಂಡಸರು ಹೆಂಗಸರು ಅರೆನಗ್ನರಿದ್ದ ಕೇರಿಯಲ್ಲಿ ಮುಳುಗಿ ಕೋಣ ಕುಯ್ಯುತ್ತಿದ್ದ ಝೋಪಡಿಗಳ ನಡುವೆ ಉದಿಸಿದನು. ಒಂದೇ ಒದೆತಕ್ಕೆ ಅಷ್ಟು ದೂರ ಬೀಳುವಂತಿದ್ದ ಮಣ್ಣಿನ ಮನೆಗಳೊ, ಉಫ್ಫೆಂದು ಊದಿದರೆ ಅಷ್ಟು ದೂರ ಸರಿಯುವ ಝೋಪಡಿಗಳೋ; ಮಣ್ಣಿನ ಮನೆಯೊಳಗವಿತಿರುವ ಕಾದಂಬರಿಗಳನ್ನು ಹೆಕ್ಕಬೇಕೆಂದುಕೊಂಡ; ಝೋಪಡಿಗಳೊಳಡಗಿರುವ ಕವಿತೆಗಳನ್ನು ತಿಕ್ಕಿ ತೊಳೆದು ಆಭರಣ ಸೋಪಾದಿಯಲ್ಲಿ ಧರಿಸಬೇಕೆಂದುಕೊಂಡ. ಮೈತುಂಬ ಕಣ್ಣು ಮುಡಿದು ನೋಡುತ್ತ; ಮೈತುಂಬ ಕಿವಿಮುಡಿದು ಕೇಳುತ್ತ; ಮಾರ್ಕ್ಸ್ ಏಂಗೆಲ್ಸ್ ಕ್ಯಾಸ್ಟ್ರೋ ಚೆಗುವೆರಾರೇ ಮೊದಲಾದವರನ್ನು ಶ್ವೇದರಂಧ್ರಗಳಲ್ಲಿ ತುಳುಕುತ್ತ; ಕನುಸನ್ಯಾಲರೆರಡು ಕಣ್ಣುಗಳಿಂದ ಇಕ್ಕೆಲದ ಮಹಡಿಗಳನ್ನು ಅಳೆಯುತ್ತ 'ವಿ'ಯು ಶಾಲೆಗುಡಿಯೆಂಬ ಮೂರು ಗೋಡೆಯ ಕಟ್ಟಡ ಪ್ರವೇಶಿಸಲು ಅಲ್ಲಿ ಹತ್ತಾರು ಮಂದಿಯೊಡನೆ ಇಸಪೀಟು ಆಡುವುದರಲ್ಲಿ ಮಗ್ನನಾಗಿದ್ದ ಶಾಲಾಮಾಸ್ತರನೂ; ಸಿಲೇಟಿನಲ್ಲಿ ಕಳೆದುಕೊಂಡ ತಮ್ಮ ಕಣ್ಣುಗಳನ್ನು ಹುಡುಕುವುದರಲ್ಲಿ ಮಗ್ನರಾಗಿದ್ದ ನಾಳಿನ ಭವ್ಯಭಾರತದ ಪ್ರಜೆಗಳೂ, ಯಾರೋ ನೀಡಿಸಿಕೊಳ್ಳಲಿಕ್ಕೆ ಬಂದಿರುವವನೆಂಬಂತೆ ಕರುಣೆಯಿಂದ ನೋಡಿದರು.

'ವಿ' ಶಾಲಾ ಇನ್‌ಛಾರ್ಜ್ ತಗೊಂಡ. ಕೇವಲ ಮೇಲ್ಜಾತಿ ಹುಡುಗರಿದ್ದುದರಿಂದ ಅದಕ್ಕೆ ಹಳೆಮಾಸ್ತರ ಹೇಳಿದ ಸಬೂಬುಗಳನ್ನು ಎಡಗಿವಿಯಿಂದ ಕೇಳಿ ಬಲಗಿವಿಯಿಂದ ಬಿಟ್ಟ. ದೇಶದ ಅವ್ಯವಸ್ಥೆ ಕುರಿತು, ಸಾಮಾಜಿಕ ಅಸಮಾನತೆ ಕುರಿತು 'ವಿ' ಉಪನ್ಯಾಸ ನೀಡಿದ. ಅಕ್ಷರದ ಬೆಳಕಿನಿಂದಲೇ ಕುಗ್ರಾಮವನ್ನು ಸುಗ್ರಾಮಮಾಡಲು ಸಾಧ್ಯ ಎಂದಾಗ ಇಸಪೀಟು ಸದಸ್ಯರು ಗಹಗಹಿಸಿ ನಕ್ಕರು. ಅಂದಿನಿಂದ ಶುರುವಾಯಿತು ಸಮಾಜವನ್ನು ಮೇಲೆತ್ತಲು 'ವಿ' ಪರದಾಟ. ಅಡಿಯಿಂದ ಮುಡಿಯವರೆಗೆ ಕುಷ್ಠರೋಗ ಬಡಕೊಂಡಿರೋ ಇದ್ನ ಹೆಂಗಪ್ಪಾ ರಿಪೇರಿ ಮಾಡೋದಂತ 'ವಿ' ಪರಿಪರಿಯಾಗಿ ಚಿಂತಿಸುತ್ತಿರಲು, "ದಿನಕ್ಕದಿನೆಂಟು ಕಿಲೋಮೀಟರು ನಡೆದೂ ನಡೆದೂ ಮೈಯಾಗಿರೋ ಮೂರು ಪಾವು ಮಾಂಸಾನ ಕರಗಿಸಿ

ಕೊಂಡು, ಎರಡೂವರೆ ಚಟಾಕು ರಕ್ತಾನೂ ಕಳ ಕೊಂಡು, ಇಲ್ಲೇ ಠಿಕಾಣಿ ಹೂಡಲು ಮನಿ ಹುಡುಕು" ಎಂದು ಅಂತರಾತ್ಮ ಬಾಯಿಬಾಯಿ ಬಿಟ್ಟಿತು. ಕನ್ನಡದೊಂದಿಗೆ ತೆಲುಗು ಮಿಕ್ಸುಮಾಡಿ ಮನೆ ಹುಡುಕತೊಡಗಿದನು. ಹೀಗೆ ಅಹರ್ನಿಶಿ ಹುಡುಕತೊಡಗಿದ ಆತನಿಗೊಂದು ಎರಡು ಕೋಣೆಯ ಮನೆ ಸಿಕ್ಕಿತು. ಅದು ಕೆಮಿಸ್ಟ್ರಿಗೊಂದು ತೆರನ, ಸೀನಿದಾಗೊಂದು ತೆರನ ಮಣ್ಣು ದುರಿಸಿ ಶುಭಹಾರೈಸುತ್ತಿತ್ತು. ಅದರ ಮಾಲಿಕ ಗುರಪ ಕಳೆದ ಐದು ವರ್ಷದಲ್ಲಿ ನಾಲ್ಕು ಕೊಲೆ ಮಾಡಿ ಊರಿಂದ ಸೈ ಅನ್ನಿಸಿಕೊಂಡಿದ್ದನು. ಐದನೆ ಕೊಲೆ ತನ್ನದೇ ಆಗಬಹುದೆಂದು ಗ್ರಾಮದ ಸದ್ ಗೃಹಸ್ಥರು ಪಿಸಿಪಿಸಿ ಮಾತಾಡಿಕೊಂಡರು. ಆದರೆ ಗುರಪ 'ವಿ'ಯ ಬಹುವಚನ ಸಂಬೋಧನೆಗೆ ಸಮ್ಮೋಹಿತಗೊಂಡು ಕ್ರಮೇಣ ತಾನು ಯಾಕೆ ಕೊಲೆ ಮಾಡಬೇಕಾಗಿ ಬಂತೆಂಬುದರ ಬಗ್ಗೆ ಹೇಗೆ ಕೊಲೆಮಾಡಿದೆನೆಂಬುದರ ಬಗ್ಗೆ ಕಣ್ಣಿಗೆ ಕಟ್ಟುವಂತೆ ವರ್ಣಿಸಲು 'ವಿ'ಯು ಜಲಜಲ ಬೆವೆತನು. ಗುರಪನನ್ನು ಹೇಗೆ ಅರ್ಥೈಸಬೇಕೋ 'ವಿ'ಗೆ ತಿಳಿಯಲಿಲ್ಲ. ಗ್ರಾಮದ ಸದ್‌ಗೃಹಸ್ಥರಿಗಿಂತಲೂ ಆತ ಸದ್‌ಗೃಹಸ್ಥನಾಗಿದ್ದ. ಆಳದಲ್ಲಿ ಮಗುವಿನದೇ ಮನಸ್ಸನ್ನು ಬಚ್ಚಿಟ್ಟುಕೊಂಡಿದ್ದ. ಜೈಲಿನಲ್ಲಿದ್ದಾಗ ಸಹ ಖೈದಿಗಳಿಂದ ಪ್ರಗತಿಪರ ವಿಚಾರಗಳನ್ನು ಕಲಿತುಕೊಂಡಿದ್ದ. ಜಮೀನ್ದಾರರು ತಮಗೆಂದೇ ಕಟ್ಟಿಸಿಕೊಂಡಿದ್ದ ಚಾವಡಿ ಕಟ್ಟೆಗೆ ದಿನಕ್ಕೊಮ್ಮೆಯಾದರೂ ಕೂತು ಚುಟ್ಟ ಸೇದುತ್ತಿದ್ದ. ಫರಾನ ಮೊಗುಡು ಗುರಪನ ಕಡೆ ಶೂದ್ರರು ಪಿರಮಿಡ್ ನೋಡುವಂತೆ ನೋಡುತ್ತಿದ್ದರು. ಆತ ಈತನನ್ನು ಇವತ್ತು ಕೊಲೆ ಮಾಡಬಹುದು ನಾಳೆ ಕೊಲೆ ಮಾಡಬಹುದು ಅಂತ ಘಳಿಗೆಗಳನ್ನು ಎಣಿಸುತ್ತಿದ್ದ ಗ್ರಾಮಸ್ಥರು. ಅವರ ಮನೋಭಾವಕ್ಕೆ 'ವಿ'ಗೆ ನಗಬೇಕೋ ಅಳಬೇಕೋ ಅರ್ಥವಾಗಲಿಲ್ಲ.

ಕಪ್ಪೆಗಳನ್ನು ತಕ್ಕಡಿಯಲ್ಲಿಟ್ಟು ತೂಗಿದಂಥ ಮಾಸ್ತರಿಕೆಗೆ ಕೆಲವು ದಿನ ರಜೆ ಹಾಕಿ 'ವಿ' ಸ್ವಸ್ಥಳಕ್ಕೆ ಹೋಗಿದ್ದಾಗ ಗ್ರಾಮದ ಹೊರವಲಯದಲ್ಲಿ ಅನಾಥ ಹೆಣ ಕಾಣಿಸಿಕೊಂಡಿತ್ತು. ಎತ್ತರ ಅಗಲಗಳಿಂದಾಗಿ 'ವಿ'ಯನ್ನೇ ಹೋಲುತ್ತಿತ್ತು. ಆದರೆ ಮುಖವನ್ನು ಜಜ್ಜಿ ಕೊಲೆಮಾಡಲಾಗಿತ್ತು. ಗ್ರಾಮದ ಸದ್‌ಗೃಹಸ್ಥರು ಅದು 'ವಿ' ಮಾಸ್ತರನದೇ ಹೆಣವೆಂದು ಕಥೆ ಕಟ್ಟಿ ಪೊಲೀಸರ ಸಮಕ್ಷಮ ಪಂಚನಾಮೆ ಮಾಡಿಸಿದರು. ತಾವೇ ಸ್ವಂತ ಖರ್ಚಿಟ್ಟು ತಂದೆ ತಾಯಿಗಳಿದ್ದ ಊರಿಗೆ ತಂತಿಕೊಟ್ಟರು. ಸ್ವಂತೂರಿನ ರಾಜ್ಯೋತ್ಸವ ಕಾರ್ಯಕ್ರಮದಲ್ಲಿ ಮುಖ್ಯ ಅತಿಥಿಯಾಗಿ ಭಾಷಣ ಬಿಗಿಯುತ್ತಿದ್ದ 'ವಿ'ಗೆ ಅಂಚೆಯಣ್ಣ ತಂತಿ ಮುಟ್ಟಿಸಿದ. ತಾನು ಕೊಲೆಯಾಗಿರುವ ವಿಷಯ ತಿಳಿದು ಕಥೆಗಾರ 'ವಿ' ದಿಗ್‌ಭ್ರಾಂತನಾದ. ಕೂಡಲೇ ಹೊರಟು ತಲುಪಿದ. ಮೂಗಿನ ಮೇಲೆ ಬೆರಳಿಟ್ಟರು. ಅಯ್ಯೋ ಸತ್ತಿಲ್ಲಲ್ಲ! ಪರಿತಪಿಸಿದರು. ಗರಿಗರಿ ಇಸ್ತ್ರಿ ಬಟ್ಟೆ ತೊಡುತ್ತಿದ್ದವರು ತಂತಮ್ಮ ಗಚ್ಚಿನ ಮನೆಗಳಲ್ಲಿ ಅಡಗಿಕೂತರು.

ಕೊಲೆಪಟ್ಟ ಕಟ್ಟಿಕೊಂಡಿದ್ದ ಗುರಪ ಜನರ ನೀಚತನಕ್ಕೆ ರೋಸಿದ. ಕಂಠದ ಮಟ ಕುಡಿದು ಗೌಡರ ಓಣಿಗೆ ಹೋಗಿ ಹೊಸಹೊಸ ಬಯ್ಗಳನ್ನು ಪ್ರಯೋಗಿಸಿದ. ಅದನ್ನು ಸುತ್ತ ಹತ್ತು ಹಳ್ಳಿಯ ಜನರು ಕೇಳಿಸಿಕೊಂಡರು. ಅಂದಿನ ಗುರಪ ಮತ್ತು 'ವಿ' ಮತ್ತಷ್ಟು ಹತ್ತಿರವಾದರು.

ಮಹಾ ಹಳ್ಳಿಗನಂತೆ ವರ್ತಿಸುವ ಪೋಲಿ ಮೇರು ಶಂಕರ ರೆಡ್ಡಿಯ ಛೇರ್ಮನ್ನುಗಿರಿಯಿಂದಾಗಿಯೆ ಗ್ರಾಮ ಎಲ್ಲ ಸೌಲಭ್ಯಗಳಿಂದ ವಂಚಿತಗೊಂಡಿರುವ ಬಗ್ಗೆ ಗುರಪ ಖೇದದಿಂದ ನುಡಿದ. ಆತನ ಮಾತು ವೇದ ವಾಕ್ಯ. ಸರಕಾರಿ ನೌಕರರು ಯಾರು ಬಂದರೂ ಆತ ಹೇಳಿದಂತೆ ಕೇಳಬೇಕು. ಹೊಸದಾಗಿ 'ವಿ'ಗೆ ಅಂಥದೇ ಅನುಭವವಾಯಿತು. ಆ ಕೆಲಸ ಈ ಕೆಲಸಕ್ಕೆ ರೆಡ್ಡಿ ಹೇಳಿಕಳಿಸಿದ. 'ವಿ' ಹೋಗಲಿಲ್ಲ, ತಾನಾಯಿತು, ತನ್ನ ಕೆಲಸವಾಯಿತು.. ಮುಂದುವರಿದ ರೆಡ್ಡಿ ಜನಾಂಗದ ಕಣ್ಣು ಪಿಸರಾಗುವಂತೆ 'ವಿ' ಶೂದ್ರರ ಮಕ್ಕಳನ್ನು ಶಾಲೆಗೆ ತುಂಬಿಕೊಂಡಿದ್ದ. ಅಕ್ಷರದ ಬಗ್ಗೆ ಕಕ್ಕುಲಾತಿ ಹೊಂದಿದ್ದ ದಲಿತರ ಮಕ್ಕಳನ್ನು ನಡುದಾರಿಯಲ್ಲೇ ಬೆದರಿಸಿ ಮನೆಗೆ ಕಳಿಸಲಾಗುತ್ತಿತ್ತು. ಆ ಶಾಲೆಗೆ ಮಕ್ಕಳನ್ನು ಕಳಿಸುವ ದಲಿತರನ್ನು ಮಾತಿನಿಂದ

ಹಿಂಸಿಸಲಾಗುತ್ತಿತ್ತು. ಕ್ರಾಪು ಬಿಡಲರಿಯದ; ಬಟ್ಟೆ ತೊಡಲರಿಯದ; ಅಡುಗೆ ಮಾಡಲರಿಯದ, ಉಣ್ಣಲರಿಯದ; ಡೇಗಲರಿಯದ; ತಲೆ ಎತ್ತಿ ನುಡಿಯಲರಿಯದ; ಬೀಸು ಹೆಜ್ಜೆಹಾಕಿ ನಡೆಯಲರಿಯದ, ಟಾರು ರಸ್ತೆ ನೋಡಲರಿಯದ; ಬಸ್ಸು-ರೈಲು ಏರಲರಿಯದ, ಹಗುರರಿಯದ ಡುಬ್ಬಗಳ ಶೂದ್ರ ದಲಿತರನ್ನು ಹೆಂಗಪ್ಪಾ ಸಾಮಾನ್ಯ ಮಟ್ಟದಿಂದ ಮೇಲೆತ್ತುವುದು ಎಂಬ ಚಿಂತೆಯಲ್ಲಿ; ಬಗೆಬಗೆಯ ಸರ್ಕಸ್ಸು ಮಾಡುತ್ತಿದ್ದ 'ವಿ'ಯ ಬಗ್ಗೆ ಗುರಪ ಮುತವರ್ಜಿ ವಹಿಸಿದ. ಇಂಥ ಗ್ರಾಮದಲ್ಲಿ ಬುದ್ಧಿ ಬಲದ ಜೊತೆ ಖಂಡಬಲವಿರಬೇಕೆಂದು ಪುಸಲಾಯಿಸಲಾಯಿತು. ಬೆಳಿಗ್ಗೆ, ಸಂಜೆ ಹಾಲು ಕುಡಿಸುವುದು, ವಾರಕ್ಕೊಪ್ಪತ್ತು ನಾನ್‌ವೆಜ್ಜು. ದಿನಕ್ಕೆರಡು ತಾಸು ವ್ಯಾಯಾಮ. 'ವಿ' ದಿನಕ್ಕೊಂದು ಛಂದದಲ್ಲಿ ಅರಳತೊಡಗಿದ. ಎತ್ತರದ ಆಳು, ಅಗಲ ಮೈಕಟ್ಟು, ಆಗಷ್ಟೇ ಕಪ್ಪು ಬಣ್ಣಕ್ಕೆ ತಿರುಗಿದ್ದ ಕುಡಿ ಮೀಸೆ, ಹೀಗೆ ಬದಲಾದ 'ವಿ'ಯನ್ನು ಲೈನು ಹೊಡೆಯದಿರುವರೆ!

'ವಿ' ಅದೇ ತಾನೆ ವ್ಯಾಯಾಮದ ನಂತರ ಸ್ನಾನ ಮುಗಿಸಿ ಫ್ರೆಷ್ ಆಗಿದ್ದಾಗ ಹುಡುಗಿಯೊಬ್ಬಳು ಮನೆ ತೂರಿಕೊಂಡು ಬಂದಳು. ಆಕೆ ಆತನ ಓಲ್ಡ್ ಸ್ಟೂಡೆಂಟು. ಛೇರ್ಮನ್ರ ಆರನೆ ನಂಬರಿನ ಮುದ್ದು ಮಗಳು. ಹೆಸರು ಹೇಮಾವತಿ. ಮೈನೆರೆತ ವರ್ಷ ಒಪ್ಪತ್ತಿನಲ್ಲಿ ಎಲ್ಲೆಲ್ಲಿ ಊದ್ಕೋಬೇಕೋ ಅಲ್ಲಲ್ಲಿ ಊದ್ಕೊಂಡು ಸೊಂಪಾಗಿ ಕಾಣಿಸುತ್ತಿದ್ದಳು. ಜಂತಿ ಸಂದಿಯಿಂದ ಇಲಿ ಮಣ್ಣುದುರಿಸತೊಡಗಿತು. ಸಂತೋಷ-ಸಂಕೋಚ ಏಕಕಾಲಕ್ಕೆ. 'ವಿ' ಮುದುಡಿಕೊಂಡ. "ಯಾವುದಾದ್ರು ಕಥೆ ಪುಸ್ತಕ ಕೊಡ್ರಿ" ಅಂದಳು. 'ಗೋರ್ಕಿ ಕಥೆಗಳು' ಕೊಟ್ಟ. "ನೀವು ಬರ್ದಿರೋದು ಕೊಡ್ರಿ"



ಅಂದಳು. 'ಇನ್ನಾದರೂ ಸಾಯಬೇಕು' ಕೊಟ್ಟ. ಹೋದಳು. ಮರುದಿನ ತಂದುಕೊಟ್ಟಳು. ಜಂತಿ ನಡುವೆ ಮತ್ತೆ ಇಲಿಯ ಹುಡುಗಾಟ. ಓದಿರು ವಳೋ, ಇಲ್ಲೋ! "ಕಥ ಗಿಥ, ಕಾಗೆ, ಹಸಿವು ಅಂತ ಕಥೆ ಬರೀತೀರಲ್ಲಾ, ಪ್ರೇಮದ ಬಗ್ಗೆ ಬರೆದಿರೋ ಒಂದು ಕಥೇನೂ ಇದರಲ್ಲಿಲ್ವೇ?" ಮಾತಾಡಿದಳು ಅರಳು ಹುರಿದಂತೆ. ಪರವಾ ಇಲ್ಲ, ಓದಿದ್ದಾಳೆ. ಒಂದಿಷ್ಟು ಹರಟಿದಳು. ಮತ್ತೊಂದು ಒಯ್ದಳು.

ಎಷ್ಟು ಹಾಳಾಗಿದೆ ಅಂತ ಪುಸ್ತಕ ತೆರೆದು ನೋಡಿದ. ಅದರಲ್ಲಿ ಪೆದ್ದು ಪೆದ್ದಾದ ಒಂದು ಪ್ರೇಮಪತ್ರವಿತ್ತು. 'ವಿ' ಓದಿಕೊಂಡ. ಖುಷಿಪಟ್ಟ. ಆ ಖುಷಿಯಲ್ಲಿ ಒಂದು ಪ್ರೇಮದ ಬಗ್ಗೆ ಮರುದಿನ ಬಂದ ಆಕೆಗೆ ಓದಿ ಹೇಳಿದ. ಸಂಕೇತ, ಪ್ರತಿಮೆ ಕುರಿತು ವಿವರಿಸಿದ. 'ಮೈಸೂರ ಮಲ್ಲಿಗೆ' ಕೊಟ್ಟ. "ಇಂಥಿಂಥ ಪದ್ಯ ಓದು" ಅಂದ. ಅವರಿಬ್ಬರ ನಡುವೆ ಸಖ್ಯ ಬೆಳೆಯಿತು. ಹಲವು ಕಡೆ ಹಲವು ರೀತಿಯಲ್ಲಿ ಸಂಧಿಸತೊಡಗಿದರು. ಆಕೆಯ ಅಂಗಾಂಗಗಳಿಗೆ ಸೊಗಸಾದ ಭಾಷ್ಯ ಬರೆದ. ಪ್ರೇಮಕ್ಕಿರುವ ಅಗಾಧ ಶಕ್ತಿಯ ಅರಿವಾಯಿತು. ಹತ್ತರ ಪೈಕಿ ಒಂದರಂತೆ ಪ್ರೇಮ ಕಥೆಗಳನ್ನು ಬರೆಯಬೇಕೆಂದುಕೊಂಡ. ಪ್ರೇಮದ ಕಂಪನಗ ಳನ್ನು ಪರಿಚಯಿಸಿದವಳಿಗೆ ಏನಾದರೊಂದು ಕೊಡದಿರಲಾದೀತೆ? "ಏನಾದರೂ ಕೇಳು" ಅಂದ. ಒಂದು ಚೀಲ ಚಿನ್ನ: ಐದು ಚೀಲ ಬೆಳ್ಳಿ; ಐನೂರೆಕರೆ ಜಮೀನಿಗೆ ಒಡೆಯರ ಮಗಳು ಏನು ಕೇಳುವಳು! ಆತನ ಮೈಯ ಮಾಂಸಖಂಡಗಳನ್ನು ಸ್ಪರ್ಶಿಸಿದಳು. "ಚಪ್ಪರ ಚನ್ನಪ್ಪನ ಗುಂಡು ಎತ್ತ ಬೇಕು" ಅಂದಳು. ವಿಚಿತ್ರ ಬಯಕೆ? ಅದು ಇರುವುದರ ಬಗ್ಗೆ ಹೇಳಿದಳು. ಗುಂಡು ಎತ್ತಿದವರ ಕಾಲಿಗೆ ತೊಡಿಸಿರೆಂದು ಚಪ್ಪರದ ಚನ್ನಪ್ಪ ಎಂಬಾತ ಒಂದೂವರೆ ಸೇರು ತೂಕದ ಬೆಳ್ಳಿ ಕಡಗವನ್ನು ತನ್ನಪ್ಪ ಛೇರ್ಮನ್ ಶಂಕರರೆಡ್ಡಿ ಇಟ್ಟಿ ರುವನೆಂದು ಹೇಳಿದಳು. ಶಂಕರರೆಡ್ಡಿಗೆ ನಲವ ತ್ತೈದು ವರ್ಷದ ಮಗನೂ ಇದ್ದಾನೆ. ಐದು ವರ್ಷದ ಮಗನೂ ಇದ್ದಾನೆ. ಹದಿನಾರು ಹದಿನೇಳು ವರ್ಷದ ಹೇಮಾವತಿ ಆ ಕುಟುಂಬದಲ್ಲಿ ಚಿಕ್ಕಮ್ಮ, ಅತ್ತೆ, ಅಜ್ಜಿ ಏನೆಲ್ಲ ಆಗಿ ಗುರುತಿಸಲ್ಪಡುತ್ತಿದ್ದಾಳೆ. ಆಕೆಯ ತಾಯಿ ಮತ್ತೆ ಈಗ ಎಂಟೊಂಬತ್ತು ತಿಂಗಳ ಗರ್ಭಿಣಿ.

ವಿಚಿತ್ರ ಕೌಂಟುಬಿಕ ವ್ಯವಸ್ಥೆ. 'ವಿ' ಮೊದ ಮೊದಲು ಇಂಥ ಜಮೀನ್ದಾರಿ ಕೌಟುಂಬಿಕ ವ್ಯವಸ್ಥೆ ಬಗ್ಗೆ ತಲೆ ಕೆಡಿಸಿಕೊಂಡಿದ್ದುಂಟು. ಕೊನೆಗೆ ಆತ ತಲೆ ಕೆಡಿಸಿಕೊಳ್ಳಲಾರಂಭಿಸಿದ್ದು ಚಪ್ಪರ ಚನ್ನಪ್ಪ ನಾಮಾಂಕಿತ ಕಲ್ಲುಗುಂಡಿನ ಬಗ್ಗೆ. ಮರು ದಿನವೇ ವೇಷ ಮರೆಸಿಕೊಂಡವನಂತೆ ಹೋಗಿ ನೋಡಿದ. ಸುಮಾರು ಹದಿನೆಂಟು ಹತ್ತೊಂಬತ್ತು ಮಣದ ಗುಂಡು ಅದು. ಕಳೆದ ಹದಿನೈದಿಪ್ಪತ್ತು ವರ್ಷಗಳಿಂದ ಪೌರುಷಕ್ಕೆ ಸವಾಲು ಹಾಕುತ್ತಿರುವು ದಂತೆ. ಅಂತರಂಗ ಶುದ್ಧಿಯ ಕಡೆಗೆ ಹೆಚ್ಚು ಗಮನ ಕೊಡುತ್ತಿದ್ದ 'ವಿ' ಎಲ್ಲ ಗುರಪಗೆ ಹೇಳಿಕೊಳ್ಳದೆ ಇರಲಿಲ್ಲ. ತಮ್ಮ ಮಾಸ್ತರು ಪ್ರೇಮವೆಂಬ ಖೆಡ್ಡ ದಲ್ಲಿ ಬಿದ್ದಿರುವುದನ್ನು ಆ ತ್ರಿಕಾಲ ಜ್ಞಾನಿ ಬಲ್ಲ. ಇನ್‌ಡೈರೆಕ್ಟಾಗಿ ಆತನೂ ಸಪೋರ್ಟು ಕೊಡುತ್ತಿದ್ದ ನೆಂಬುವುದರಲ್ಲಿ ಅನುಮಾನವಿಲ್ಲ. ಅದನ್ನು ಎತ್ತಲು ಹೋಗಿ ಮೀಸೆ ಮಣ್ಣು ಮಾಡಿಕೊಂಡ ಹೇಮಾಹೇಮಿಗಳ ವಿವರ ನೀಡಿದ. ಸ್ವತಃ ಗುರ ಪನೇ ಇಂಥ ಪ್ರಯತ್ನ ಮಾಡಿ ವಿಫಲನಾಗಿದ್ದನು. ವಸ್ತುಸ್ಥಿತಿ ಹೀಗಿರುವಾಗ ಸಸ್ಯಾಹಾರಿ ಮಾಸ್ತರ ನೊಬ್ಬ ಯಾವುದೋ ಹುಡುಗಿ ಹೇಳಿದಳೂಂತ ಗುಂಡು ಎತ್ತುವ ಆಸೆ ಪ್ರಕಟಿಸುವುದೆಂದರೇನು! ಮಾನವ ಪ್ರಯತ್ನಕ್ಕೆ ಮಿಗಿಲಾದುದು ಯಾವುದೂ ಇಲ್ಲ. ಹುಡುಗ ನೋಡಲಿಕ್ಕೆ ಗಾಂಡೀವಿಯಂತಿರು ವನು, ಎತ್ತಿದರೂ ಎತ್ತಬಹುದು, ಎತ್ತಿದರೆ ಸ್ವರ್ಗ, ಎತ್ತದಿದ್ದರೆ ನರಕ.

ಛಲದಂಕಮಲ್ಲ ಗುರಪ ಅವತ್ತಿನಿಂದ ಕೈಕಟ್ಟಿ ಕೂಡ್ರಲಿಲ್ಲ. ಮನೆಯಲ್ಲಿ ಗಡಾರಿ, ಉಸುಕಿನ ಚೀಲ ತಂದು ಹಾಕಿದ. ಇದನ್ನು ಹೀಗೆ ಎತ್ತಬೇಕು, ಅದನ್ನು ಹಾಗೆ ಎತ್ತಬೇಕು, ಮೊಣಕಾಲು ಚಿಪ್ಪು ಭದ್ರವಾಗಬೇಕಾದರೆ ಇದನ್ನು ತಿನ್ನಬೇಕು, ಟೊಂಕ ಸುಭದ್ರವಾಗಬೇಕಾದರೆ ಅದನ್ನು ತಿನ್ನಬೇಕು ವ್ಯಾಯಾಮ, ಆಹಾರ ವಿಹಾರಗಳಿಗೆ ಸಂಬಂಧಿ

ಸಿದ ಅಧಿನಿಯಮಗಳನ್ನು ಗುರುಪ ಕಟ್ಟು ನಿಟ್ಟಾಗಿ ಜಾರಿಗೆ ತಂದ. ಪ್ರೇಮಕ್ಕೆ ಶರಣಾಗಿದ್ದ 'ವಿ' ಅವುಗಳನ್ನು ಪಾಲಿಸದೆ ಇರಲಿಲ್ಲ, ಕೇಳೋರಿಲ್ಲ, ಹೇಳೋರಿಲ್ಲ, ಹಿಂದಿಲ್ಲ, ಮುಂದಿಲ್ಲ, ಅಲ್ಲದೆ 'ವಿ' ಬಂಡಾಯದ ಬೋಳು ಬದನೆಕಾಯಿಗಳನ್ನು ಮೂಲೆಗೆ ಸರಿಸಿಬಿಟ್ಟಿದ್ದ. ಬರೆದರೆ ಪ್ರೇಮಕಥೆಗಳನ್ನೇ ಬರೆಯಬೇಕೆಂದು ದೃಢ ನಿಶ್ಚಯಮಾಡಿದ್ದ. ಗುಂಡು ಎತ್ತುವ ಪಟ್ಟುಗಳ ಜೊತೆಗೆ ಪ್ರೇಮದ ಪಟ್ಟುಗಳನ್ನು ಕಲಿಯತೊಡಗಿದ. ಗುಂಡೆತ್ತುವ ಪಟ್ಟುಗಳನ್ನು ಮಾಜಿ ಪೈಲ್ವಾನ್ ಗುರಪ ಕಲಿಸತೊಡಗಿದರೆ ಪ್ರೇಮದ ಪಟ್ಟುಗಳನ್ನು ಹೇಮಾ ಕಲಿಸಲಾರಂಭಿಸಿದಳು.

ಗುರಪ ತನ್ನ ಕೊರಳಲ್ಲಿದ್ದ ಹುಲಿ ಉಗುರನ್ನು ತೆಗೆದು 'ವಿ'ಯ ಕೊರಳಿಗೆ ಹಾಕಿದ. ವಾರಕ್ಕೆರಡು ಮೂರು ಬಾರಿ "ಹೃದಯ ತಿನ್ರಿ, ಲಿವರ್ ತಿನ್ರಿ, ಕಿಡ್ನಿ ತಿನ್ರಿ, ತೊಡೆ ತಿನ್ರಿ, ಮಿದುಳು ತಿನ್ರಿ" ಎಂದು ತಂದು ಕೊಡುತ್ತಿದ್ದರೆ ತುಪ್ಪದಲ್ಲಿ ಇಡೀ ರಾತ್ರಿ ನೆನೆದ ಒಣಕೊಬ್ಬರಿ, ಉತ್ತತ್ತಿಗಳನ್ನು ಹೇಮಾ ಕದ್ದು ಮುಚ್ಚಿ ತಂದುಕೊಡುತ್ತಿದ್ದಳು. ಹೀಗೆ ಸಖತ್ ಪ್ರೋಟೀನು, ವಿಟಮಿನ್ನು. 'ವಿ' ವಾರಕ್ಕೊಂದು ಪಂಚೇರು ಊದತೊಡಗಿದ. ಗಡಾರಿಯನ್ನು ಎಡಗೈಯಿಂದ ಬಲಗೈಗೆ ವರ್ಗಾಯಿಸುವುದನ್ನು ಕಲಿತ. ಈ ವಾರ ಮೊಳಕಾಲವರೆಗೆ ಬಂದ ಉಸುಕಿನ ಚೀಲ ಮುಂದಿನ ವಾರ ಸೊಂಟಕ್ಕೆ ಬಂತು. ಮುಂದೊಂದು ವಾರ ಅದು ಹೆಗಲಿಗೇರಿತು. ಇಡೀ ಗ್ರಾಮಕ್ಕೆ ಗ್ರಾಮ ಗಾಢ ನಿದ್ರೆಯಲ್ಲಿ ಮುಳುಗಿದ ಮೇಲೆ ಗುರಪ, 'ವಿ' ಕಂಬಳಿ ಹೊದ್ದು ರಾಮದೇವರ ಗುಡಿ ತಲುಪುತ್ತಿದ್ದರು. ಯಾರಾದರೂ ನೋಡಿದರೆ ಇವರು ತುಡುಗಿಗೆ ಹೊರಟವರೆಂದು ತಿಳಿದುಕೊಳ್ಳಬೇಕು. ಜೊತೆಗೆ ಅವರೀರ್ವರು ಆಜಾನುಬಾಹುಗಳು ಬೇರೆ. ಹುಣುಸೇ ಮರದಲ್ಲಿಂದ ದೆವ್ವ ಖಾಲಿ ಮಾಡಿದರೆ ಅರಳೆ ಮರದಿಂದ ಬ್ರಹ್ಮಪಿಶಾಚಿ ಖಾಲಿಮಾಡಿ ಬಚಾವಾದವು. ಗುಡಿಯ ಮೂಲೆ ಮುರುಕಟ್ಟನಲ್ಲಿ ರೋಮಾಂಟಿಕ್ ಮೂಡಿನಲ್ಲಿರುತ್ತಿದ್ದ ಇಲಿ ಹೆಗ್ಗಣಗಳು ತಮ್ಮ ಪ್ರಿಯತಮೆಯರೊಂದಿಗೆ ಮೂತಿ ತೂರಿಸಿ ಇಣುಕಿನೋಡತೊಡಗಿದವು. ಗುಡಿಯ ಮೇಲ್ಛಾವಣಿಗಂಟಿ ಶೀರ್ಷಾಸನ ಹಾಕಿ ಪ್ರಾಣಾಯಾಮ ಮಾಡುತ್ತ ತಂತಮ್ಮ ಕುಂಡಲಿನೀ ಶಕ್ತಿಯನ್ನು ವೃದ್ಧಿಸಿಕೊಳ್ಳುತ್ತಿದ್ದ ತೂಗು ಬಾವಲಿಗಳು ಕೀಚ್‌ಕೀಚ್ ಸದ್ದು ಮಾಡುತ್ತ ಆ ಎರಡು ನರಹುಳುಗಳನ್ನು ಶಪಿಸತೊಡಗಿದವು. ಡೋಂಟ್ ಕೇರ್ ಮಾಸ್ಟರ್‌ಗಳಾದ ಅವರು ಪ್ರಾಂಗಣ ತಲುಪುತ್ತಿದ್ದರು. ದೇಹದ ಮುಕ್ಕಾಲುವಾಸಿ ಉಡುಪು ತೆಗೆದು ಬೀದಿನಾಯಿಗಳಿಗೆ ಮೂಸಲು ಬಿಡುತ್ತಿದ್ದರು. ಆ ಪ್ರಾಂಗಣ ಪಾರ್ಲಿಮೆಂಟು ಇದ್ದಂಗಿತ್ತು. ಚಪ್ಪರ ಚನ್ನಪ್ಪನ ಗುಂಡು ಒಳ್ಳೆ ಪ್ರಧಾನ ಮಂತ್ರಿ ಥರ ವಿರಾಜಮಾನವಾಗಿದ್ದರೆ ಅದಕ್ಕಿಂತ ಜೂನಿಯರ್ ಗಾತ್ರದ ಗುಂಡುಗಳು ಕ್ಯಾಬಿನೇಟ್ ದರ್ಜೆಯ ಸಚಿವರಂತಿದ್ದವು. ಇನ್ನೂ ಕಡಿಮೆ ಗಾತ್ರದ ಗುಂಡುಗಳು ನಿಷ್ಪ್ರಯೋಜಕ ರಾಜ್ಯ ಸಚಿವರಂತಿದ್ದವು. ರಾಜ್ಯ ಸಚಿವರಿಂದ ಕ್ಯಾಬಿನೇಟ್ ದರ್ಜೆ ಸಚಿವರನ್ನು ವಿಚಾರಿಸಿಕೊಂಡು ಪ್ರಧಾನ ಮಂತ್ರಿಯನ್ನು ತಲುಪಬೇಕಿತ್ತು. ಕ್ಯಾಬಿನೇಟ್ ದರ್ಜೆಯವರೆಗೆ ಸರಾಗವಾಗಿ ಹೋಗಿ ಬಂದಿದ್ದ ಗುರಪ ಮೊದಮೊದಲು ರಾಜ್ಯ ಸಚಿವರನ್ನು ಹೇಗೆ ವಿಚಾರಿಸಿಕೊಳ್ಳಬೇಕೆಂಬ ಬಗ್ಗೆ ಡೆಮಾನ್‌ಸ್ಟ್ರೇಟ್ ಮಾಡಿ ತೋರಿಸಿದ. ನೋಡಲು ಕೆಲಸಕ್ಕೆ ಬಾರದವುಗಳಂತಿದ್ದ ಅವು ಮಾನವ ಸ್ಪರ್ಶಕ್ಕೆ ಎಗರಿಬೀಳುತ್ತಿದ್ದವು. ಅವು ಹಿಡಿತಕ್ಕೆ ಸಿಕ್ಕುವ ಮಾಂಸಖಂಡಗಳ ಬಗ್ಗೆ; ಅವುಗಳನ್ನು ಹುರಿಗೊಳಿಸುವ ಕ್ರಮದ ಬಗ್ಗೆ ಗುರಪ ವಿವರಿಸಿದ. ಹೆಣ್ಣನ್ನು ವಶಪಡಿಸಿಕೊಳ್ಳುವ ಕ್ರಮದಲ್ಲಿಯೇ ಗುಂಡನ್ನು ಅರ್ಥ ಮಾಡಿಕೊಳ್ಳಬೇಕೆಂದು ಹೇಳಿದ. ಮೂಲತಃ ಗುರಪನೂ ಅನೇಕ ಹೆಣ್ಣುಗಳ ಮೇಲೆ

---

'ನಾನು ಯಾರು?' ಎಂದು ಪ್ರಶ್ನಿಸಿಕೊಂಡು ಉತ್ತರ ಕಂಡುಕೊಳ್ಳಲು ಯತ್ನಿಸುವುದೇ ಎಲ್ಲ ದುಃಖಗಳಿಗೆ ಕೊನೆ ಹಾಡಿ ನಿತಾಂತ ಶಾಂತಿಯಲ್ಲಿ ವಿರಮಿಸಲು ಏಕಮಾತ್ರ ಮಾರ್ಗ.

–ಶ್ರೀ ರಮಣ ಮಹರ್ಷಿ

---

ಮೈಯಾಡಿಸಿ ಅನುಭವ ಉಳ್ಳವನು. ಗ್ರಾಮದ ಒಂದಿಬ್ಬರು ಹುಡುಗರು ಥೇಟ್ ಆತನನ್ನೇ ಹೋಲುತ್ತಿದ್ದವು. ಅವು ಜಮೀನ್ದಾರರ ಹುಡುಗರಾದ್ದರಿಂದ ಏಕವಚನದಿಂದ ಮಾತಾಡಿಸುತ್ತಿದ್ದವು. "ನೋಡ್ರಿ ಮಾಸ್ತರೇ ನನ್ಗೆ ಹುಟ್ಟೋವು..... ನನ್ಗೇ ಹಿಂಗಾಡ್ತವೆ" ಅಂತ ಖೇದ ವ್ಯಕ್ತ ಪಡಿಸುತ್ತಿದ್ದ.

ರಾಜ್ಯ ಸಚಿವರನ್ನು ಎತ್ತಿ ಇಳಿಸುವ ಪ್ರಯತ್ನದಲ್ಲಿದ್ದಾಗ ಕಳುವಿಗೆ ಹೋಗುವವರು ಎದುರಾದರೆ ಹಾದರಕ್ಕೆ ಆ ಮನೆಯಿಂದ ಈ ಮನೆಗೆ; ಈ ಮನೆಯಿಂದ ಆ ಮನೆಗೆ ಹೋಗುವವರೂ ಪರಿಚಯವಾದರು. ಇರುಳಿನಲ್ಲಿ ಮಾತ್ರ ಗ್ರಾಮದ ವಿರಾಟ್ ದರ್ಶನವಾಗುವುದು, ಇರುಳು ಮತ್ತು ಗ್ರಾಮದ ಅನೂಹ್ಯ ಸಂಬಂಧ ಅಕ್ಷರದ ಚಿಮುಟಿಗೆಗೆ ಸಿಕ್ಕುವುದಿಲ್ಲ. ಸಂತೃಪ್ತತೆಯ ಮುಖವಾಡ ಧರಿಸಿದ ಅತೃಪ್ತಕಾಮನೆಗಳು, ಧರ್ಮದ ಮುಖವಾಡದೊಳಗೆ ಅಧರ್ಮೀಯ ಮಸಲತ್ತುಗಳು. ಹೆಣ್ಣುಗಳೊಳಗೆ ಗಂಡುಗಳು; ಗಂಡುಗಳೊಳಗೆ ಹೆಣ್ಣುಗಳು, ಹೆಣ್ಣುಗಂಡು ಬೇರಲ್ಲಿ ಕಾಣ್‌ಭೋ! ಹೊಸಹೊಸ ಅರ್ಥಗಳ ಮಿಣುಕು ಹುಳಗಳು 'ವಿ'ಯ ತಲೆಯೊಳಗೆ ಹಾರಾಡತೊಡಗಿದವು. ಮಾರ್ಕ್ಯೂಜ್, ಕುಂದೆರಾ, ಏಟ್ಸ್, ಎಲಿಯಟ್ ಮುಂತಾದವನ್ನು ಓದಿ ಪಡೆವ ಜ್ಞಾನಕ್ಕಿಂತ, 'ವಿ' ಆ ಗ್ರಾಮದ ಸವ್ವಾರೆವ್ವ, ಸಾವಿತ್ರಿ, ಕೊಕ್ಕ ನಾರಾಣ್, ತಿಮ್ಮ ಮುಂತಾದವರಿಂದ ಪಡೆದ ಪ್ರಾಕ್ಟಿಕಲ್ ನಾಲೇಜ್ ದೊಡ್ಡದು.

'ವಿ' ಈ ನಾಲೇಜ್ ಸಂಪಾದಿಸಿಕೊಳ್ಳುತ್ತಲೆ ರಾಜ್ಯ ಸಚಿವರನ್ನು ಅರಗಿಸಿಕೊಂಡು ಕ್ಯಾಬಿನೇಟ್ ದರ್ಜೆ ಸಚಿವರವರೆಗೆ ಬಂದಿದ್ದ. ಒಂದೊಂದಕ್ಕೂ ಒಂದೊಂದು ವಿನ್ಯಾಸ. ಕೆಲವು ಮುಟ್ಟಿದರೆ ಮಾತು ಕೇಳುತ್ತಿದ್ದವು, ಕೆಲವು ತಿಣುಕಿದರೂ ಮಾತು ಕೇಳುತ್ತಿರಲಿಲ್ಲ. ಕೆಲವಕ್ಕೆ ಉಸಿರನ್ನು ಜಠರದಲ್ಲಿ ಕೇಂದ್ರೀಕರಿಸಬೇಕಿತ್ತು. ಕೆಲವಕ್ಕೆ ನಾಭಿಯಲ್ಲಿ ಕೆಲವಕ್ಕೆ ಎದೆಯಲ್ಲಿ ಕೆಲವಕ್ಕೆ ಮಸ್ತಿಷ್ಕದಲ್ಲಿ.

'ವಿ' ಚಪ್ಪರ ಚನ್ನಪ್ಪನ ಗುಂಡು ಎತ್ತಲು ಗುರಪನ ನೇತೃತ್ವದಲ್ಲಿ, ಅದೂ ಮಧ್ಯರಾತ್ರಿಯಲ್ಲಿ, ತಾಲೀಮು ನಡೆಸಿರುವ ಸಂಗತಿ ಬಗ್ಗೆ ಗ್ರಾಮದಲ್ಲಿ ಗುಸು ಗುಸು ಆರಂಭವಾಯಿತು. ಕದ್ದು ಮುಚ್ಚಿ ನೋಡುತ್ತಿದ್ದ ಕೆಲವರು ಕ್ರಮೇಣ ರಾಜಾರೋಷವಾಗಿ ನೋಡತೊಡಗಿದರು. ಶೂದ್ರರು ಪರವಾಗಿ ಮಾತಾಡಿದರೆ ಜಮೀನ್ದಾರಿ ಕೂಟದವರು ವಿರುದ್ಧವಾಗಿ ಮಾತಾಡತೊಡಗಿದರು. ಅವರ ಮಾತಿನಲ್ಲಿ ವ್ಯಂಗ್ಯ ಸ್ನೋ-ಪೌಡರು ಬಡಿದುಕೊಂಡಿತ್ತು. ಗುರಪ ಬೆಂಗಾವಲಿದ್ದುದರಿಂದ 'ವಿ'ಯ ಎದುರಿಗೆ ಮಾತಾಡುವ ಧೈರ್ಯ ಯಾರಿಗೂ ಇರಲಿಲ್ಲ.

ಪ್ರಧಾನ ಮಂತ್ರಿ ಲೇವಲ್ಲಿಗೆ ಬಂದಾಗ ಗುರಪ ತಾನೂ ಒಂದು ಪ್ರೇಮ ಪ್ರಕರಣದಲ್ಲಿ ಸಿಲುಕಿಕೊಂಡ. ಹೊಲದಲ್ಲಿ ತನ್ನ ಕೊಲೆಗೆ ಸಂಚುಮಾಡಿದವನ ನಾದಿನಿಯ ಜೊತೆ ದಿನಾಲು ಮಲಗಿ ಬರತೊಡಗಿದ. ಕೆಲಸ ಮುಗಿಸಿಕೊಂಡು ಬಂದು ಪ್ರಧಾನ ಮಂತ್ರಿಯನ್ನು ಎತ್ತುವ ಪಟ್ಟುಗಳನ್ನು ಕಲಿಸತೊಡಗಿದ. ಆದರೆ ಅದು ದಿನಗಳೆದಂತೆ ತೊಡೆಮಟಬಂತು. ಜನ ಹೋ ಹೋ ಅಂದರು, "ಮೇಸ್ಟ್ರನ್ನೇನು ಎತ್ತೇಬಿಟ್ಟರು, ಒಂದೂವರೆ ಸೇರಿನ ಬೆಳ್ಳಿಕಡಗವನ್ನು ಧರಿಸಿಯೇ ಬಿಟ್ಟರು" ಎಂದು ಮಾತಾಡಿಕೊಂಡರು. ಹೇಮಾ ದುಪ್ಪಟಿ ಹೊದ್ದುಕೊಂಡು ಕದ್ದು ಬಂದು 'ವಿ' ಗುಂಡೆತ್ತುವುದನ್ನು ನೋಡಿಕೊಂಡು ಹೋದಳು.

ಒಂದು ರಾತ್ರಿ ಪ್ರಧಾನ ಮಂತ್ರಿ ಸಲೀಸಾಗಿ ಸೊಂಟದವರೆಗೆ ಬಂತು. ಆದರೆ ಸೊಂಟಕ್ಕೆ ಭಾರಿ ಉಳುಕುಮಾಡಿ ನೆಲಕ್ಕೆ ಕುಸಿದುಬಿಟ್ಟಿತು. ಅಮ್ಮಾ ಅಪ್ಪಾ ಅಂತ ನರಳಿದ 'ವಿ' ಹಾಸಿಗೆ ಹಿಡಿದ. "ನಿಮ್ಗಿದೆಲ್ಲಾ ಯಾಕ್ಬೇಕ್ರಿ" ಎಂದು ಡಾಕ್ಟರು ಸೂಜಿ ಮಾಡಿ ಹೋದರು. ಒಂದು ಹೊತ್ತಿನಲ್ಲಿ ಹೇಮಾವತಿ ಬಂದು ಸೊಂಟಕ್ಕೆ ಮುಲಾಮು ಸವರಿದಳು. "ಅದನ್ನು ಎತ್ತಿ ಕಡಗ ಧರಿಸೋ ಗಂಡಸು ಈ ಭೂಮಿಯ ಮ್ಯಾಲ ಇದ್ದಂತಿಲ್ಲ" ಎಂದು ನಿಟ್ಟುಸಿರು ಬಿಟ್ಟಳು. "ಇನ್ನು ಮೇಲೆ ಆ ಗುಂಡಿನ ಸಹವಾಸಕ್ಕೇ ಹೋಗಬೇಡಿ" ಎಂದು ಬುದ್ಧಿವಾದ ಹೇಳಿದಳು.

'ವಿ' ಸ್ಕೂಲಿಗೆ ಹೋಗಿದ್ದಾಗ ಪ್ರಧಾನ ಮಂತ್ರಿ ಕಡೆಗೆ ನೋಡುತ್ತ ಕೂತಿರುತ್ತಿದ್ದ. ಅದೂ ಇವನ ಕಡೆ ನೋಡಿ ಅಣಕಿಸುತ್ತಿತ್ತು. ಅವನ ಅಂತರಂಗ

ದಲ್ಲಿ ಅದು ಹೊಸ ಹೊಸ ಅರ್ಥಗಳನ್ನು ಸೃಷ್ಟಿಸ ತೊಡಗಿತು. ಹಾಗೇ ಸಹ್ಯವಾದ ಕಂಪನಗಳನ್ನು. ಹೇಮಾಳನ್ನು ಮೆಚ್ಚಿಸಲೆಂದೇ ಅಲ್ಲವೆ ತಾನು ಗುಂಡನ್ನು ಎತ್ತಲು ಪ್ರಯತ್ನಿಸಿದ್ದು. ಇರುಳಿನ ದರ್ಪದಾಟದಲ್ಲಿ ಗ್ರಾಮದ ಸಕಲಾಚರ ನೋಡಿದ್ದು. ನೂರಾರು ಶ್ರೇಷ್ಠ ಲೇಖಕರನ್ನು ಗ್ರಾಮದ ಅನಕ್ಷರ ಸ್ಥರಲ್ಲಿ ನೋಡಿದ್ದು, ತಮ್ಮಿಬ್ಬರ ಪ್ರೇಮವನ್ನು ಬಲ ಗೊಳಿಸಿದ್ದು ಆ ಚಪ್ಪರ ಚನ್ನಪ್ಪನ ಗುಂಡೇ. ಅದರೊಳಗೆ ಅಂಥ ಶಕ್ತಿ ಬಂದಿರುವುದು ಚಪ್ಪರದ ಚನ್ನಪ್ಪನಿಂದ. ಆತನಿಗೆ ಅದು ಒಲಿಯಿತು. ಅದ ಕ್ಕೆಂದೇ ಆತ ಒಂದೆಕರೆ ಗದ್ದೆ ಮಾರಿದ್ದರಿಂದ ಬಂದ ಹಣದಿಂದ ಬೆಳ್ಳಿಕಡಗ ಮಾಡಿಸಿ ಭೀರ್ಮಣ್ನ ಬಳಿ ಇಟ್ಟು ದೇಶಾಂತರ ಹೋಗಿದ್ದ. ಆತ ಅದನ್ನು ಎತ್ತಿ ಇಳಿಸುತ್ತಿದ್ದ ಎಂಬುದು ಒಂದು ಮಹತ್ವದ ಸಂಗತಿಯಾಗಿದ್ದರೆ; ಭೀರ್ಮಣ್ನ ಬಳಿ ಬೆಳ್ಳಿ ಕಡಗ ಇಟ್ಟಿರುವನೆಂಬುದು ಇನ್ನೊಂದು ಮಹತ್ವದ ಸಂಗತಿ. ಅದನ್ನು ಎತ್ತಿಳಿಸಿದವರ ಹೆಸರು ಇತಿಹಾಸದ ಪುಟಗಳಲ್ಲಿ ನಮೂದಾಗುತ್ತದೆ. ಆ ಭಾಗ್ಯ ತನ್ನದಾಗಲಿಲ್ಲವೆಂದು 'ವಿ' ಮರುಗಿದ. ರಾತ್ರಿ ಬಿದ್ದ ಕನಸಿನಲ್ಲಿ ಗುಂಡು ಕಾಣಿಸಿಕೊಂಡಿತು. ಆದರೆ 'ನನ್ನ ಬಗ್ಗೆ ಕಥೆ ಬರೀಬಾರ್ದ'ಂತು. ಸರೆ ಅಂದ. ಬೇಟೆ ಅಂತ ಬರೆದೂಬಿಟ್ಟ. ಅದು ಪ್ರಕಟಗೊಂಡೂಬಿಟ್ಟಿತು. ಇಡೀ ಕುಟುಂಬದಲ್ಲಿ ಕನ್ನಡ ಓದಲೂ ಬಲ್ಲ, ಬರೆಯಲೂ ಬಲ್ಲ ಹೇಮಾ ತಾನು ಕಥೆಯನ್ನು ಓದಿರುವುದಾಗಿ ಹೇಳಿದಳು. ಪತ್ರಿಕೆಯವರು ಕಳಿಸಿದ ಗೌರವಧನಕ್ಕಿಂತ ಆಕೆ ಕೊಟ್ಟ ಗೌರವತನುವಿಗೆ ಬೆಲೆಕಟ್ಟಲಾದೀತೆ?

ಒಂದು ದಿನ 'ವಿ' ಅಲ್ಲಿಗೆ ಇಪ್ಪತ್ತು ಮೈಲಿ ದೂರ ಪಟ್ಟಣದಲ್ಲಿ ಭಲೆ ಸ್ಟೈಲಿನಿಂದ ನಡೆಯುತ್ತಿದ್ದಾನೆ. ಪ್ರೇಮದ ವರ್ಣಮಾಲೆ ಕಲಿಸಿದ ಗೆಳತಿ ಹೇಮಾಳನ್ನು ನೆನೆದು ಒಂದು ಹೆಜ್ಜೆಗೆ ರೋಮಾಂಚನಗೊಳ್ಳುತ್ತಿದ್ದಾನೆ, ಹಾಗೆಯೇ ಸೊಂಟ ಉಳಕಿಸಿ ಅಜೇಯವಾಗಿ ಉಳಿದಿರುವ ಪ್ರಧಾನ ಮಂತ್ರಿ ಗುಂಡನ್ನು ನೆನೆದೇ ಇನ್ನೊಂದು ಹೆಜ್ಜೆಗೆ ಮಂಕಾಗುತ್ತಿದ್ದಾನೆ, ಹಾಗೆಯೇ ಮತ್ತೊಂದು ಹೆಜ್ಜೆಗೆ ಮಂಕು ಸರಿಪಡಿಸಿಕೊಂಡು ಧೀರೋದಾತ್ತ ಹೆಜ್ಜೆ ಇಡುತ್ತ ನಡೆಯುತ್ತಿದ್ದಾನೆ. ಅಚಾನಕ್ ಒಂದು ದೃಶ್ಯ ಆತನ ಗಮನ ಸೆಳೆಯುತ್ತದೆ.

ಅದೆಂದರೆ...

ಲಾರಿಗೆ ಕೆಲವು ಹಮಾಲರು ಲೋಡು ಮಾಡುತ್ತಿದ್ದಾರೆ. ಅವರೆಲ್ಲ ಬೇರೆ ಬೇರೆ ಗಾತ್ರದ ದೈತ್ಯರೇ. ನೂರಾರು ಕೇಜಿ ತೂಕದ ಹುರುಳಿ ಚೀಲಗಳನ್ನು ಒಬ್ಬ ಲೀಲಾಜಾಲವಾಗಿ ಎತ್ತಿ ಲಾರಿಗೆ ಎಸೆಯುತ್ತಿದ್ದಾನೆ. ಒಬ್ಬೊಬ್ಬರು ಒಂದೊಂದು ಪುಟ್ಟ ಬೆಟ್ಟಗಳೇ. ಸೂರ್ಯನ ನಲವತ್ತಾರು ಡಿಗ್ರಿ ಸೆಲ್ಸಿಯಸ್ಸಿಗೆ ಅವರ ದೇಹದ ಮಾಂಸಖಂಡಗಳು ಕಪ್ಪಗೆ ಮಿರಿಮಿರಿ ಮಿಂಚುತ್ತವೆ. ಕ್ಷಣಾರ್ಧದಲ್ಲಿ ಲಾರಿ ಲೋಡು ಮುಗಿಯುತ್ತದೆ. ಡರ್ರ್ ಎಂದು ಸದ್ದು ಮಾಡುತ್ತ ಲಾರಿ ಅತ್ತ ಚಲಿಸುತ್ತಿದ್ದಂತೆ ಇತ್ತ ಈ ಕಾರ್ಲ್‌ಮಾರ್ಕ್ಸ್ ಹೋಗುತ್ತಾನೆ. ಸಾಹಿತ್ಯದ ಭಾಷೆ ಉಪಯೋಗಿಸಿ ದೈತ್ಯರ ಗಮನ ತನ್ನೆಡೆಗೆ ಸೆಳೆಯುತ್ತಾನೆ. ಚಹಪಾನಕ್ಕೆ ಆಹ್ವಾನ ನೀಡುತ್ತಾನೆ. ಅವರು ಒಪ್ಪಿ ಹಿಂಬಾಲಿಸುತ್ತಾರೆ.

'ವಿ' ಅವರೊಂದಿಗೆ ಹತ್ತಿರದ ಗಜಾನನ ರೆಸ್ಟೋರೆಂಟ್‌ನಲ್ಲಿ ಕೂತುಕೊಂಡ. ತಾನು ಬಹು ದೊಡ್ಡ ಜಮೀನ್ದಾರನೆಂಬ ಗತ್ತನ್ನು ದೇಹದಾದ್ಯಂತ ಪ್ರಕಟಿಸುತ್ತ ಎಂಥೆಂಥೋರನ್ನೆಲ್ಲ ತಾನು ಬಾಡಿಗಾರ್ಡುಗಳಾಗಿ ಇಟ್ಟುಕೊಂಡಿರುವೆನೆಂಬ ನೋಟವನ್ನು ಎಲ್ಲಕಡೆ ಬೀರಿದ. ಎಲ್ಲರು ಗಡಗಡ ನಡುಗುತ್ತಿರುವರೆಂದು ಬಗೆದ. ಈ ವ್ಹಾಶಾನ್ ಠೇಂಕಾರಿ ದೈತ್ಯರಿಗೆ ಕೇವಲ ಚಹಕುಡಿಸಲಿಷ್ಟಪಡಲಿಲ್ಲ. ತಿಂಡಿ ತಗೊಳ್ಳಲೇಬೇಕೆಂದು ಒತ್ತಾಯಿಸಿದ. ಹಾಗೆ ಒತ್ತಾಯಿಸಿದರೆ ದೈತ್ಯರು ಸುಮ್ಮನಿದ್ದಾರೆಯೇ! ಅದು, ಇದು, ಎಲ್ಲವನ್ನೂ ಆರ್ಡರ್ ಮಾಡಿ ಗಬಗಬ ತಿಂದು ಮುಗಿಸಿದರು. 'ವಿ' ಒಳಗೊಳಗೆ

---

ಸಿಟ್ಟಿನ ಕೈಯಲ್ಲಿ ಬುದ್ಧಿ ಕೊಟ್ಟವ ತನ್ನನ್ನು ತಾನೇ ಅಪಾಯಕೊಡ್ಡಿಕೊಳ್ಳುತ್ತಾನೆ. ಇದು ನನಗೂ ಸಾಕಷ್ಟು ಸಲ ನಿತ್ಯದ ಅನುಭವಕ್ಕೆ ಬಂದಂಥ ಮಾತಾಗಿದೆ.

–ಮಹಾತ್ಮಾ ಗಾಂಧಿ

---

ಹಲ್ಲುಕಡಿದ. ಐವತ್ತೆಂಟು ರೂಪಾಯಿ ಮೌಲ್ಯದ ಬಿಲ್ ಬಂತು. ನೋಡಿದ, ಹೊಟ್ಟೆ ಉರಿಯಿತು. ಅವನ ಫ್ಯೂಡಲ್ ಮನಸ್ಸು ರೆಕ್ಕೆ ಸರಿಪಡಿಸಿಕೊಂಡಿತು. ತನ್ನ ಜೇಬಿನಲ್ಲಿ ಇಂಥ ಎಷ್ಟೋ ನೋಟು ಗಳಿವೆ ಎಂಬ ಧಿಮಾಕಿನಿಂದ ಜೇಬಿಗೆ ಬೆರಳಿರಿಸಿದ. ಅಲ್ಲಿದ್ದ ಒಂದೇ ಒಂದು ನೋಟನ್ನು ತೆಗೆದು ಬಿಲ್ ಕಕ್ಕಿದ್ದಾಯ್ತು. ನಂತರ ಅವರಿಗೆ ಸಿಗರೇಟು, ಪಾನಬೀಡ.

ಮಾತಾಡಲು ಅವರೊಂದಿಗೆ ಅರಳಿಮರದಡಿ ಇದ್ದ ಕಟ್ಟೆ ಕಡೆಗೆ ನಡೆದ. 'ವಿ' ಮೇಲೆ ಕೂತ. ಅವರೆಲ್ಲ ಕೆಳಗಡೆ. ವಿಧೇಯ ವಿದ್ಯಾರ್ಥಿಗಳಂತೆ. ಆಜ್ಞಾಧಾರಕ ಈಟಿಗಳಂತೆ.

"ಕೊಲೆ ಗಿಲೆ ಮಾಡೋ ಕೆಲ್ಸ ಐತಾ ಗೌಡಾ.... ಯಾರ್ದಾರ ಕೈ ಕಾಲು ಮುರ್ದು ತರೋದೈತಾ.... ರೇಟು ಮಾತಾಡಿ ಮುಗ್ಸಿ ಬುಡ್ರಿ" ಹೆಡ್ ದೈತ್ಯ 'ವಿ'ಗೆ ಕೇಳಿಸುವಂತೆ ಪಿಸುಗುಟ್ಟಿದ.

ಅದನ್ನು ಕೇಳಿದೊಡನೆ 'ವಿ' ಬಾಯಿ ಒಣಗಿತು.

ಆದರೂ 'ವಿ' ತನ್ನ ಗ್ರಾಮದಲ್ಲಿರೋ ಚಪ್ಪರ ಚನ್ನಪ್ಪನ ಗುಂಡಿನ ಬಗ್ಗೆ; ಒಂದೂವರೆ ಸೇರು ಬೆಳ್ಳಿ ಕಡಗದ ಇನಾಮಿನ ಬಗ್ಗೆ ಎಲ್ಲ ವಿವರಿಸಿದ.

ಅದನ್ನು ಕೇಳಿದ ಅವರಿಗೆಲ್ಲ ನಿರಾಶೆ ಕವಿಯಿತು; ಇಷ್ಟಕ್ಕಾಕೆ ತಮಗಿಷ್ಟೊಂದು ಮೇಯಿಸಬೇಕಿತ್ತೇ ಮಹಾನುಭಾವ! ತಿರಸ್ಕಾರದಿಂದ ನೋಡಿದರು. ಆದರೆ ಅವರ್‍ಯಾರೂ 'ವಿ'ಯ ಲಕ್ಷ್ಮಣ ರೇಖೆ ದಾಟಲಿಚ್ಛಿಸಲಿಲ್ಲ, ದಿನ ನಿಗದಿಪಡಿಸಿದ. ಒಪ್ಪಿದರು. ಪ್ರಯಾಣದ ವೆಚ್ಚಕ್ಕೆ ಕೊಡಲು ಹೋದ. ಮಹಾನ್ ಸ್ವಾಭಿಮಾನಿಗಳಾದ ದೈತ್ಯರು ಪಡೆಯುವರೇ!

ದೈತ್ಯರು 'ವಿ'ಯಲ್ಲಿ ಎಂಥದೋ ವಿಶೇಷ ಗುರುತಿಸಿದರು.

ತಮ್ಮನ್ನು ತಾವು ಬಿಚ್ಚಿಕೊಂಡರು.

ಅವರು ಆ ಪಟ್ಟಣದ ಪ್ರಸಿದ್ಧ ಬೇಡ ಜನಾಂಗಕ್ಕೆ ಸೇರಿದ್ದಂಥವರು. ಹಿಂದೆ ಅಲೆಮಾರಿ ದರೋಡೆಕೋರರಾಗಿದ್ದರು. ರಾಜ್ಯದಿಂದ ರಾಜ್ಯಕ್ಕೆ ಸಂಚರಿಸುತ್ತಿದ್ದರು. ಅಷ್ಟೇ ನುರಿತ ಬೇಟೆಗಾರರಾಗಿದ್ದಂಥವರು ಕೂಡ. ಓಡುವ ಜಿಂಕೆಯನ್ನು ಬೆಂಬತ್ತಿ ಹಿಡಿಯುತ್ತಿದ್ದರು. ಪುಟಿದೋಡುವ ಮೊಲವನ್ನು ಕಲ್ಲೆಸೆದು ಕೊಲ್ಲುತ್ತಿದ್ದರು. ಅವರ ಕಥೆ ಕಮ್ಮಟದುರ್ಗದ ಗಂಡುಗಲಿ ಕುಮಾರರಾಮನಿಂದ ಶುರುವಾಗುತ್ತದೆ. ಅವನ ಸೈನ್ಯದಲ್ಲಿದ್ದರಂತೆ. ಅವನ ಕೊಲೆಯಾದನಂತರ ಚದುರಿಬಿಟ್ಟರಂತೆ.

ಎಷ್ಟು ದಿನ ದರೋಡೆ ಬೇಟೆಯಿಂದ ಬದುಕುವುದಾದೀತು? ಬಲಿಷ್ಠ ಜಮೀನ್ದಾರರು ಇವರನ್ನು ತಮ್ಮ ಗಾದೆ ಸೇರಿಸಿಕೊಂಡರು. ಇವರೆಲ್ಲ ಒಬ್ಬೊಬ್ಬರು ಒಂದೊಂದು ಅಸ್ತ್ರದಂತೆ. ಸ್ವಾಮಿ ಭಕ್ತಿಗೆ ಪ್ರಾಣಕೊಡಲು ಹಿಂಜರಿಯಲಾರರು. ಅನ್ನ ಇಟ್ಟವರಿಗೆ ದ್ರೋಹ ಬಗೆಯಲಾರರು. ಎದುರು ಬಿದ್ದವರನ್ನು ಮುಗಿಸದೆ ಇರಲಾರರು.

ಇವರಿಂದ ಜಮೀನಿಗೆ ಒಡೆಯರಾದವರು ಮಾಡಿಸಿದ ಕೊಲೆಗಳೆಷ್ಟೋ?

ಹೊರಿಸಿ ತರಿಸಿದ ಹೆಣ್ಣುಗಳೆಷ್ಟೋ?

ಮಾಡು ಅಂದರೆ ಮಾಡುತ್ತಾರೆ ಅಷ್ಟೆ. ಸರಿ-ತಪ್ಪು, ಪಾಪ-ಪುಣ್ಯ, ಸ್ವರ್ಗ-ನರಕಗಳ ಬಗ್ಗೆ ತಲೆಕೆಡಿಸಿಕೊಳ್ಳಲಾರರು. ಅವರು ಮೃತ್ಯುಂಜಯರಷ್ಟೇ ಅಲ್ಲ, ಇಚ್ಛಾ ಮರಣಿಗಳು ಕೂಡ. ಇವರ ಪ್ರಾಣ ಪಕ್ಷಿಯ ಪಂಜರಕ್ಕೆ ಬಾಗಿಲಿರುವುದಿಲ್ಲ. ಅದು ಸದಾ ತೆರೆದೇ ಇರುತ್ತದೆ. ಹಾರಲು ಅದು ಸ್ವತಂತ್ರ.

ಪ್ರಸ್ತುತ 'ವಿ'ಗೆ ಆಪ್ತರಾದ ದೈತ್ಯರು ಮಾಟಗಾರ ಬೇಡರು. ಅವರ ಸಂಬಂಧಿಕರಲ್ಲಿ ಅನೇಕರು ದಕ್ಷಿಣಭಾರತದ ಎಲ್ಲ ಕೇಂದ್ರೀಯ ಕಾರಾಗೃಹಗಳಲ್ಲಿರುವರಂತೆ. ಅವರು ಕಳೆದ ಹತ್ತು ವರ್ಷಗಳಿಂದ ಪುಲಿಮಾಲದ ಪುರಷೋತ್ತಮ ರೆಡ್ಡಿಯ ಆಜ್ಞಾಧಾರಕರು. ರೆಡ್ಡಿ ಇವರನ್ನೆಲ್ಲ ಕಾನೂನು, ದಂಡ ಸಂಹಿತೆ ಮುಂತಾದ ಪರಿಮಳದಿಂದ ದೂರ ಇಟ್ಟು ರಕ್ಷಿಸುತ್ತಿದ್ದಾನೆ. ಇವರ ಮನೆಗಳಲ್ಲಿ ಪ್ರತಿತಿಂಗಳು ಗ್ರಾಸ ಸರಬರಾಜಾಗುತ್ತದೆ. ಅಗತ್ಯವಿದ್ದಾಗ ಅಂದರೆ ತಾನು ಪ್ರಯಾಣಿಸುವಾಗ, ಕೋರ್ಟು ಕಛೇರಿಗೆ ಅಡ್ಡಾಡುವಾಗ, ತನ್ನ ಕೈಯಾರೆ ಕೊಲೆ ಮಾಡಬೇಕೆನ್ನಿಸಿದಾಗ ಇವರು ರೆಡ್ಡಿಯ ಹಿಂದೆ-ಮುಂದೆ, ಅಕ್ಕಪಕ್ಕ ಇದ್ದು ರಕ್ಷಣೆ ಕೊಡುತ್ತಾರೆ. "ಇಂಥವರನ್ನು ಕೊಲೆ ಮಾಡಿ, ಇಂಥವರ ಕಣ್ಣು ತಗೊಂಡು ಬನ್ನಿ, ಇಂಥವರ ಕಾಲು-ಕೈ

ಕಡ್ಕೊಂಡು ಬನ್ನಿ" ಎಂದು ರೆಡ್ಡಿ ಆಗೊಮ್ಮೆ ಈಗೊಮ್ಮೆ ಇವರಿಗೆ 'ಆರ್ಡ್ರು' ಮಾಡುತ್ತಿರುತ್ತಾನೆ. ಇವರು ಕರಾರುವಾಕ್ಕಾಗಿ ಮಾಡಿ ಮುಗಿಸುತ್ತಾರೆ. ನಾಯಿ ತನ್ನ ಯಜಮಾನನಿಗೆ ದ್ರೋಹ ಬಗೆದೀತು. ಆದರೆ ಇವರು ದ್ರೋಹ ಬಗೆಯಲಾರರು. ಕನಸಿನಲ್ಲಿ ಸಹ. ಅಂಥ ಸಂದರ್ಭ ಬಂದರೆ ಪ್ರಾಣ ಕೊಟ್ಟಾರು.

ರೆಡ್ಡಿಯ ಬಲಗೈ ಬಂಟರು ತಾವು; ನಿಜ; ಆತ ತಮ್ಮ ಯೋಗಕ್ಷೇಮ ನೋಕೊಳ್ತಿದ್ದಾನೆ; ನಿಜ, ಆದರೆ ಇವರು ಪ್ರತಿಯೊಂದಕ್ಕೂ ರೆಡ್ಡಿಯನ್ನವಲಂಬಿಸುವುದಿಲ್ಲ. ಪ್ರತಿನಿತ್ಯ ತಮಗೆ ಬೇಕಾದ ಎರಡು ಸೇರು ಬೆಣ್ಣೆ; ಐದು ಕೇಜಿ ಮಾಂಸ; ಎರಡು ಕೇಜಿ ಬೆಲ್ಲ ಮಸಾಲೆ ವಗೈರೆಗೆ ತಲಾ ಇನ್ನೂರೋ ಮುನ್ನೂರೋ ದುಡಿದುಕೊಳ್ಳುತ್ತಾರೆ. ಇವರ ಅಡುಗೆ ಮನೆಯೊಳಗೇ ಒಂದು ಕಳ್ಳಭಟ್ಟಿ ಇದೆ. ಕೇಜಿಗಟ್ಟಲೆ ತಿನ್ನುವುದು; ದಿನಗಟ್ಟಲೆ ಕೆಲಸಮಾಡುವುದು; ಕ್ವಿಂಟಾಲ್ ಬಗ್ಗೆ ಇವರಿಗೆ ತಿರಸ್ಕಾರ, ಒಂದೂವರೆ ಕ್ವಿಂಟಾಲ್‌ಗೆ ಸ್ವಲ್ಪ ತಿಣುಕುತ್ತಾರೆ. ಓಲಿಂಪಿಕ್ಸ್‌ಗಳಲ್ಲಿ ಭಾರ ಎತ್ತಿ ಪದಕಗಿಟ್ಟಿಸಿಕೊಂಡವರು ಇವರ ಮುಂದೆ ಏನೂ ಅಲ್ಲ.

ಇವರು 'ವಿ'ಯನ್ನು ನಂಬಿದರು. ಮುಗಿಯಿತು. ಅವರನ್ನು ಬದಲಿಸಲು ತ್ರಿಮೂರ್ತಿಗಳಿಗೂ ಸಾಧ್ಯವಿಲ್ಲ. ಮಾಡುತ್ತೇವೆ ಅಂದರೆ ಮಾಡುತ್ತಾರೆ. ಬರ್ತೇವೆ ಅಂದರೆ ಬಂದೇ ಬಿಡ್ತಾರೆ.

ಅವರು ಬರುವೆವೆಂದು ಹೇಳಿದ್ದ ದಿನದ ಅರುಣೋದಯಕ್ಕೂ ಪೂರ್ವದಲ್ಲಿ 'ವಿ' ಎದ್ದ. ಬಯಲು ಕಕ್ಕಸು ಮುಗಿಸಿಕೊಂಡು ಕಾಲುವೆ ಬಳಿಗೆ ಬಂದಾಗ ಹೇಮಾ ಸಿಕ್ಕಳು. ಅವಳ ಸೊಂಟದ ಮೇಲೆ ತಾಮ್ರದ ಕೊಡಪಾನ ಥಳಥಳ ಹೊಳೆಯುತ್ತಿತ್ತು. ಮುಟ್ಟಾದ ಮೂರು ದಿನದ ವಿಶೇಷ ಸ್ನಾನಮಾಡಿದ್ದ ಅವಳು ಅರಣೋದಯಕ್ಕಿಂತ ಹೆಚ್ಚು ಕಾಂತಿದಾಯಕವಾಗಿದ್ದಳು.

'ವಿ' ಅವಳ ಮುಖದಲ್ಲಿ ಮುಖ ಇಟ್ಟು ನೋಡಿದ. ತನ್ನ ಉದ್ದನೆಯ ಮೂಗನ್ನು ಆವಳ ನೀಳ ನಾಸಿಕಕ್ಕೆ ತಾಕಿಸಿದ. "ಹೇಮಾ ತುಂಬ ಚಂದ ಕಾಣ್ತೀದೀ" ಅಂದ. ಆಕೆಯ ಮುಖ ಎಂಬ ಪಾರಿಜಾತ ಅರಳಿತು. ಘಂ ಮೂಡಿಸಿತು. "ಶುರುಮಾಡಿದ್ರಾ ನಿಮ್ಮ ವರಸೆ" ಎಂದಳು. ದಂತಕಾಂತಿ ಚೆಲ್ಲಿದಳು. "ಪೋಲಿಕಲ್ಲು ಜಾತ್ರೆಗೆ ಹೊರಟಿದ್ದೀನಿ.... ಬರ್ತೀರಾ?" ಅಂದಳು.... ಹಿಂಗ್ಹಿಂಗೇ ಅಂತ ಹೇಳಿದ. ಸಂತೋಷದಿಂದ ಪುಳಕಗೊಂಡಳು. ಚಪ್ಪರ ಚನ್ನಪ್ಪನ ಗುಂಡು ಎತ್ತುವುದನ್ನು ನೋಡುವುದು ಅವಳ ಹಳೆ ಕನಸು. ಈ ದಿನ ಅದು ಈಡೇರಲಿದೆಯಂತೆ. ಜಾತ್ರೆ ಕ್ಯಾನ್ಸಲ್ ಮಾಡಿದಳು.

ಸೂರ್ಯೋದಯವಾದಂತೆ ಸುದ್ದಿ ಊರ ತುಂಬ ಹರಡಿತು. ಸುತ್ತ ಇರುವ ಹತ್ತಾರು ಊರುಗಳಿಗೂ, ಗುರಪನಿಗಂತೂ ಸಂಭ್ರಮವೋ ಸಂಭ್ರಮ. ಯಾರೋ ಊರಿಗೆ ಬರಲಿರುವರಂತೆ, ಚಪ್ಪರ ಚನ್ನಪ್ಪನ ಅಜೇಯ ಗುಂಡು ಎತ್ತಲಿರುವರಂತೆ. ಎತ್ತಿ ಬೆಳ್ಳಿ ಕಡಗ ಧರಿಸಲಿರುವರಂತೆ.

---

'ಬಿಂದು ಬಿಂದು ಸೇರಿ ಸಿಂಧು' ಎನ್ನುತ್ತೇವಲ್ಲ. ಆ ಬಿಂದುಗಳಲ್ಲಿ ಪರಸ್ಪರ ಸಹಕಾರವಿರುವುದರಿಂದಲೇ ಸಮುದ್ರವಾಗುತ್ತದೆ. ಇದು ಮನುಷ್ಯರಿಗೂ ಅನ್ವಯಿಸುವ ಮಾತು.

-ಮಹಾತ್ಮಾ ಗಾಂಧಿ

---

ಮಾತುಗಳೂ ವಜ್ರ ವೈಢೂರ್ಯ ಧರಿಸಿದವು.

ಸೂರ್ಯ ನೆತ್ತಿಗೆ ಬಂದ. ಮಾಟಗಾರ ಬೇಡರು ಗ್ರಾಮ ಪ್ರವೇಶಿಸಿದರು. ಕಣ್ಣುಗಳಿಗೆ ಹಬ್ಬ ಮಾಡಿದರು. ಸೌಜನ್ಯ ಮೈವೆತ್ತಂತೆ; ಅಮಾಯಕ ಕಂದಮ್ಮಗಳಂತೆ.... ಸಂಕ್ಷಿಪ್ತ ಊಟ ಮುಗಿಸಿ ಕೂತಿದ್ದ ಅವರನ್ನು ಕದ್ದು ನೋಡಿದವರೆಷ್ಟೋ; ಖುದ್ದು ಮಾತಾಡಿಸಿದವರೆಷ್ಟೋ....

ಪುಲಿಮಾಲದ ಜಮೀನ್ದಾರ ಪುರಷೋತ್ತಮರೆಡ್ಡಿಯ ಅಂಗರಕ್ಷಕರಂತೆ ಅಂಥಿಂಥ ಕೊಲೆಗಳನ್ನು ಇಂಥಿಂಥವರು ಮಾಡಿರುವುದುಂಟಾ?.... ಪುಲಿಮಾಲದವರಿಗೂ ಚೆಲ್ಲಲಚೆಲಿಮಲದವರಿಗೂ ಹಾವು ಮುಂಗುಸಿ ಸಂಬಂಧ. ಎರಡೂಕಡೆ ಆಗೊಮ್ಮೆ ಈಗೊಮ್ಮೆ ಅಕಾಲಮರಣ ಸಂಭವಿಸುತ್ತಿರುತ್ತವೆ. ಸದರೀ ಗ್ರಾಮದ ಶಂಕರ ರೆಡ್ಡಿಯ

ನಾಲ್ಕನೇ ಹೆಂಡತಿಯ ತವರೂರು ಚೆಲ್ಲಲಚಲಿ ಮಲ!!

ದೇವರೇ! ಯಾವುದೇ ಅಹಿತಕರ ಘಟನೆ ಸದರೀ ಗ್ರಾಮದಲ್ಲಿ ಸಂಭವಿಸದಿರಲಿ!

ರಕ್ತದಿಂದ ನೆಲ ಅಪವಿತ್ರವಾಗದಿರಲಿ!

ಛೇರ್ಮನ್ ಶಂಕರರೆಡ್ಡಿ ಕಾಲಿಗೆ ಬುದ್ಧಿ ಹೇಳದಿರಲಿ!

ತನ್ನ ಇಳಿವಯಸ್ಸಿನಲ್ಲೂ ಪುಟ್ಟಪುಟ್ಟ ಮಕ್ಕಳಿಗೆ ತಂದೆಯಾಗುತ್ತಿರುವ ಛೇರ್ಮನ್ ಶಂಕರರೆಡ್ಡಿ ಕಾಲಿಗೆ ಬುದ್ಧಿ ಹೇಳುವುದುಂಟೆ? ಎಲ್ಲರೂ ಬಂದು ನೋಡುವಂತೆ ಗ್ರಾಮದ ಜನರಿಗೆ ಬುದ್ಧಿ ಹೇಳಿದ.

ತಾನೇ ತಮ್ಮ ಕುಟುಂಬದ ಯಾವತ್ತೂ ಹಿರಿ ಕಿರಿಯ ಸದಸ್ಯರೊಂದಿಗೆ ಚಾವಡಿ ಕಟ್ಟೆ ಮೇಲೆ ವಿರಾಜಮಾನಗೊಂಡ. ಆತನ ಸ್ತ್ರಿ ಸದಸ್ಯರೆಲ್ಲ ತಿಜೋರಿಯಲ್ಲಿನ ಮುಖ್ಯ ಮುಖ್ಯ ಆಭರಣ ಧರಿಸಿದ್ದರು. ಒಬ್ಬೊಬ್ಬರ ಧವಳ ಕಾಂತಿಯ ದೇಹದ ಮೇಲೆ ಕಡಿಮೆ ಎಂದರೆ ಒಂದೊಂದು ಕಿಲೋ ಬಂಗಾರ. ಎಲ್ಲರಿಗಿಂತ ಮುಂದೆ ತನ್ನ ದೇಹವೇ ಅಮೂಲ್ಯ ಮೌಕ್ತಿಕಾಭರಣವೆಂಬಂತೆ ಒಂಚೂರು ಬಂಗಾರ ಧರಿಸಿರದೆ ಹೇಮಾವತಿ ಕೂತಿದ್ದಳು. ಗ್ರಾಮದ ಪಡ್ಡೆಗಳೆಲ್ಲ ಆಕೆಯ ಕಡೆ ನೋಡುತ್ತಿದ್ದರೆ ಆಕೆಯ ಬೊಗಸೆಗಂಗಳಿಂದ ಮಾನಸ ಪಕ್ಷಿಗಳು 'ವಿ' ಕಡೆ ಹಾರತೊಡಗಿದ್ದವು.

ಹನಿಹನಿಯಂತೆ ಹರಿದು ಬಂದ ಜನ ದರೋಜಿ ಕೆರೆಯಂತೆ ಸೇರಿದರು. ಎಲ್ಲರ ಕಣ್ಣುಗಳು ಪ್ರಧಾನ ಮಂತ್ರಿ ಮೇಲೆ. ಪ್ರಧಾನ ಮಂತ್ರಿಯನ್ನು ದುರ್ಬಲ ಮಾಡಲೆಂದು ಕೆಲ ದೃಷ್ಟಿಗಳು ಪ್ರಧಾನ ಮಂತ್ರಿಗೆ ಹೊಸ ಶಕ್ತಿ ಸಂಚಯ ಮಾಡುತ್ತಿದ್ದ ಕೆಲವು ದೃಷ್ಟಿಗಳು.

ಪ್ರೇಮಪರಾಗಕ್ಕೆ ಹೆಸರಾದ ಶಾನುಭೋಗರ ನಾಯಿಯೊಂದು ಭಲೆ ಠೀವಿಯಿಂದ ವರ್ತುಲ ಪ್ರವೇಶಿಸಿತು. ಚಪ್ಪರ ಚನ್ನಪ್ಪನ ಗುಂಡನ್ನು ಮೂಸಿತು. ತನ್ನ ಪೃಷ್ಠಭಾಗವನ್ನು ಅದಕ್ಕೆ ಗಸಗಸಾಂತ ತಿಕ್ಕಿತು. ಹಿಂಗಾಲೆತ್ತಿತು. ಇನ್ನೇನದು ಹೊಯ್ದೇಬಿಟ್ಟಿತು ಅನ್ನುವಷ್ಟರಲ್ಲಿ 'ವಿ'ಯ ಸ್ಟೂಡೆಂಟ್ ಕಳ್ಸೆಸಿದ. ಅದು ಕ್ಲಾರಿನೇಟ್ ವಾದನ ಮಾಡುತ್ತ ಓಡಿ ಹೋಯಿತು.

ಜನ ನೆಮ್ಮದಿಯ ಉಸಿರು ಬಿಟ್ಟರು.

ಸುಮಂಗಲೆಯರು ಬಂದು ಗುಂಡಿಗೆ ದೃಷ್ಟಿ ನೀವಳಿಸಿದರು.

ಕೊಕ್ಕ-ಬುಕ್ಕ ಬಜಾರಿ, ಕೊಂಗ-ನಿಂಗ ತಪ್ಪಟೆ ಬಾರಿಸತೊಡಗಿದರು.

ಪವುಳಿಯಲ್ಲಿನ ಸಂಪಿಗೆ ಮರ ಧಾರಾಳವಾಗಿ ಹೂವು ಉದುರಿಸಿತು.

ಮಾಟಗಾರ ಬೇಡರು ವರ್ತುಳ ಪ್ರವೇಶಿಸಿದರು. ಜನ ಕರತಾಡನ ಮಾಡಿತು. ದೈತ್ಯರು ನಮ್ರಚಿತ್ತರಾಗಿ ಜನರಿಗೆ ಕೈ ಮುಗಿದರು.

ಎತ್ತರದ ಸುಖಾಸನದ ಮೇಲೆ ಛೇರ್ಮನ್ ಇವರೇನು ಮಹಾ ಎಂಬಂತೆ ನೋಡುತ್ತಿದ್ದ.

ದೈತ್ಯರು ಅಂಗಿಬಿಚ್ಚಿದರು. ಭೂಮಿಗೆ ನಮಸ್ಕರಿಸಿದರು. 'ವಿ' ಎಂಬ ಸೂತ್ರಧಾರ ಅವರೆಲ್ಲರ ಹಸ್ತಲಾಘವ ಮಾಡಿ ಶುಭಕೋರಿದ. ಗುರಪ ಅವರ ಹಣೆಗೆ ಲೇಪಿಸಿದ ಸಂಕಲಮ್ಮನ ಕುಂಕುಮ.

ಅವರು ದಿಢೀರನೆ ಪ್ರಧಾನ ಮಂತ್ರಿಗೆ ಕೈ ಹಚ್ಚಲಿಲ್ಲ.

ಅವರ ಕಿರಿತಮ್ಮ ನಿಂತಲ್ಲಿಂದ ಮುಗಿಲಿಗೆ ಕುಪ್ಪಳಿಸಿದ. ಬಯಲಲ್ಲಿ ಲಾಗಗಳ ಮೇಲೆ ಲಾಗ, ತಲೆಕೆಳಗಾಗಿ ನಡೆದ, ಬೆಂಕಿಯನ್ನು ನುಂಗಿದ, ಕಲ್ಲನ್ನು ಬಾಯೊಳಗಿಟ್ಟು ಕರಕರ ಜಮಡಿದ, ಪುಡಿ ಮಾಡಿ ಉಗುಳಿದ.

ಜನಸ್ತೋಮ 'ಹೋ' ಎಂದು ಹರ್ಷೋದ್ಗಾರ ಮಾಡಿತು.

ಇನ್ನೊಬ್ಬ ಉದ್ದನೆಯ ಕೋಲು ಕೈಗೆತ್ತಿಕೊಂಡ. ಎಲ್ಲರೂ ತನ್ನಕಡೆಗೇ ಕಲ್ಲು ಬೀಸುವಂತೆ ವಿನಂತಿಸಿದ. ಜನ ಹಾಗೇ ಮಾಡಿದರು. ಬಡಿಗೆ ತಿರುಗಿಸಲಾರಂಭಿಸಿದ, ಬಡಿಗೆ ಗೋಚರಿಸಲಿಲ್ಲ. ಬೀಸಿದ ಕಲ್ಲುಗಳು ಬೀಸಿದವರನ್ನು ತಲುಪಿದವು. ಚದುರಿದರು ಚದುರರ್. ಎದೆಯ ಮಾಂಸ ಖಂಡಗಳನ್ನು ಹುರಿಮಾಡಿ ಮೇಲೆ ಕೆಂಡದುಂಡೆಗಳನ್ನು ಸುರಿದುಕೊಂಡ. ಸುಡಲಿಲ್ಲ.

ಜನಸ್ತೋಮ 'ಹೋ' ಎಂದು ಹರ್ಷೋದ್ಗಾರ

ಮಾಡಿತು.

ಮತ್ತೊಬ್ಬ ಚಕ್ಕಡಿ ಗಡಾರಿಯನ್ನು ಎಡಗೈಯಿಂದ ಮೇಲೆತ್ತಿ ತಿರುಗಿಸಿದ. ಚಕ್ಕಡಿಯ ಎರಡೂ ಚಕ್ರಗಳನ್ನು ಎರಡೂ ಕೈಗಳಿಂದ ಹಿಡಿದೆತ್ತಿ ಹತ್ತು ಮಾರುದೂರ ಎಸೆದು ರಂಜಿಸಿದ.

ಮಗುದೊಬ್ಬ ಸ್ಟೇಟ್ ದರ್ಜೆಯ, ಕ್ಯಾಬಿನೇಟ್ ಸಚಿವರನ್ನು ಹಿಗ್ಗಾ ಮುಗ್ಗಾ ಎಸೆದಾಡಿದ.

ಜನ 'ಹೋ' ಅಂದರು.

ಇವೆಲ್ಲ ಮಾಡಿದಷ್ಟು ಸುಲಭವಲ್ಲ ಚಪ್ಪರ ಚನ್ನಪ್ಪನ ಗುಂಡು ಎತ್ತುವುದೆಂದರೆ! ಅಂತ ಕೆಲವರು, ಇವೆಲ್ಲ ಮಾಡಿದವರಿಗೆ ಅದೇನು ಮಹಾ ಅಂತ ಕೆಲವರು.

ಯಾರೂ ಎತ್ತದಂಗೆ ಚಪ್ಪರ ಚನ್ನಪ್ಪ ಗುಂಡಿಗೆ ಮಂತ್ರಿಸಿರುವನೆಂದು ಕೆಲವರು,

ದೈತ್ಯರ ಹಿರಿಯ ಅದುವರೆಗೆ ಕೂತಿದ್ದವನು ಎದ್ದ.

ಈಗವನು ಬಂದು ತಮಗೆ ನಮಸ್ಕಾರ ಮಾಡ್ತಾನೆ ಎಂದುಕೊಂಡ ಛೇರ್ಮನ್ನು.

ಆದರೆ ಆತ 'ವಿ'ಗೆ ನಮಸ್ಕರಿಸಲು ಬಂದ. ಆದರೆ 'ವಿ' ಕೈ ಕುಲುಕಿ ಶುಭಕೋರಿದ.

ತಂದೆ ಬಳಿ ಕೂತಿದ್ದ ಹೇಮಾ ಉಸಿರು ಬಿಗಿಹಿಡಿದಳು. ಇಷ್ಟಗಲ ತೆಗೆದಳು ಕಣ್ಣು.

ಆತ ಜನರತ್ತ ಕೈ ಮುಗಿದ. ಜನ ಹೋ ಅಂದರು. ಬಾರೋ ಮಗ್ನೇ! ಗುಂಡು ಕರೆಯಿತು ಹೋದ. ಅದರ ನುಣುಪಲ್ಲಿ ತನ್ನ ಪ್ರತಿಬಿಂಬ ನೋಡಿಕೊಂಡ.

ಹಲಗೆಗಳ ಸದ್ದು ಮುಗಿಲಿಂದ ಚುಕ್ಕೆಗಳನ್ನು ಉದುರಿಸತೊಡಗಿತು.

ಅದಕ್ಕೆ ನಮಸ್ಕರಿಸಿ ಮುತ್ತುಕೊಟ್ಟ. ಕಣ್ಣುಗಳಿಂದ ಸ್ಪರ್ಶಿಸಿದ.

ಅದು ಕನ್ನಡಿಗಿಂತಲೂ ನುಣುಪಾಗಿತ್ತು. ಒಂದು ಕಾಲದಲ್ಲಿ ಚನ್ನಪ್ಪ ಅದನ್ನು ದಿನಂಪ್ರತಿ ನೂರು ಸಾರಿ ಎತ್ತಿ ಇಳಿಸುತ್ತಿದ್ದನಂತೆ. ಅದರದು ತೆಕ್ಕೆಗೂ ಮೀರಿದ ಗಾತ್ರ.

ಆತ (ನಾಗಲದಿನ್ನಿ ಕರಿಯಪ್ಪ) ಆಲಂಗಿಸಿಕೊಂಡ. ತನ್ನಿಂದ ಅದನ್ನು ಮಿಸುಕಾಡಿಸಲು ಸಾಧ್ಯವಿಲ್ಲವೆಂಬಂತೆ ನಟಿಸಿದ. ಜನ ಹೋ ಅಂತು. ಗುಂಪಿನಿಂದ ನಿರಾಶೆ, ಹತಾಶೆ ಪ್ರತಿಧ್ವನಿಸಿತು. ಛೇರ್ಮನ್ ಶಂಕರರೆಡ್ಡಿಯ ಮುಖದಲ್ಲಿ ಸಂತಸದ ಎಳೆಗಳು ಕಾಣಿಸಿಕೊಂಡವು.

'ವಿ' ಭರವಸೆಯ ನೋಟ ಹೇಮಾವತಿ ಕಡೆ ಬೀರಿದ.

"ಕೈಲಾಗೊಲ್ಲ, ಕೈಲಾಗೊಲ್ಲ...." ಜನರಲ್ಲಿ ಕೆಲವರು ಕೂಗಿದರು.

ಶಾನುಭೋಗರ ನಾಯಿ ಗುಂಪಿನಿಂದ ಹೊರಬಂದು ತುಂಬ ಖುಷಿಯಿಂದ ಬಾಲ ಅಲ್ಲಾಡಿಸಿತು.

ಕರಿಯಪ್ಪ ಗುರಪನಿಗೆ ಔಡಲ ಎಣ್ಣೆ ತರಲು ಸೂಚಿಸಿದ. ಗುರಪ ಅರ್ಧ ಸೇರು ಅಪ್ಪಟ ಔಡಲೆಣ್ಣೆ ತಂದುಕೊಟ್ಟ. ಕರಿಯಪ್ಪ ಅದನ್ನು ಮೈತುಂಬ ಲೇಪಿಸಿಕೊಂಡ.

ಇದೇನು ಹುಚ್ಚಾಟ, ಮೈಗೆ ಎಣ್ಣೆ ಹಚ್ಚಿಕೊಂಡು ಗುಂಡು ಎತ್ತುವುದುಂಟೆ? ಜನ ಮನಸೇಚ್ಛೆ ಗೊಣಗಿದರು.

ಹಲಗೆಗಳು ಮಾಡಿದ ಧ್ವನಿ ಮುಗಿಲಿಗೆ ಮುಟ್ಟಿತು.

ಜನಸ್ತೋಮ ಬಿಟ್ಟಗಣ್ಣು ಬಿಟ್ಟಂತೆ ನೋಡುತ್ತಿರಲು ಕರಿಯಪ್ಪ ಲೀಲಾಜಾಲವಾಗಿ ಗುಂಡನ್ನೆತ್ತಿ ಹೆಗಲ ಮೇಲಿಟ್ಟುಕೊಂಡುಬಿಟ್ಟ.

ಜನ ಚಪ್ಪಾಳೆ ತಟ್ಟಿ ಕುಣಿದಾಡಿದರು.

ಹೇಮಾಳ ಸಂತೋಷಕ್ಕೆ ಮೇರೆ ಇರಲಿಲ್ಲ.

ಛೇರ್ಮನ್ನನ ಮುಖಕ್ಕೆ ಪೂರ್ಣಗ್ರಹಣ ಹಿಡಿಯಿತು.

ಗುಂಡನ್ನು ಹೆಗಲಮೇಲಿಟ್ಟುಕೊಂಡ ಕರಿಯಪ್ಪ ಓಡತೊಡಗಿದ. ಹೊತ್ತುಕೊಂಡೇ ಊರನ್ನು ಐದು ಸಾರಿ ಪ್ರದಕ್ಷಿಣೆ ಹಾಕಿದ. ಅದನ್ನು ಮೇಲೆ ತೂರಿಬಿಡಲೇನು ಎಂಬಂತೆ ಜನರ ಕಡೆ ನೋಡಿದ.

"ಕೆಳಕ್ಕಿಳಿಸಿಬಿಡು.... ಸಾಕು! ಸಾಕು....." ಜನ ಒಕ್ಕೊರಲಿನಿಂದ ಕೂಗಿದರು.

ಕರಿಯಪ್ಪ ಅದನ್ನು ನಿಧಾನವಾಗಿ ಕೆಳಗಿಳಿಸಿ ನಮಸ್ಕರಿಸಿದ. 'ವಿ'ಗೂ ನಮಸ್ಕರಿಸಲು ಬಂದ. 'ವಿ' ಆತನನ್ನು ಹೆಮ್ಮೆಯಿಂದ ಆಲಂಗಿಸಿಕೊಂಡ.

ಗುರಪನೂ ಅಷ್ಟೇ.

ಗುರಪ ಮೊದಲಾಗಿ ಛೇರ್ಮನ್ ಶಂಕರ್‌ರೆಡ್ಡಿ ಕಡೆಗೆ ನೋಡಿದರು. ಅಪಾರ ಜಸ್ತೋಮ ತಮ್ಮ ನೋಟವೆಂಬ ಮಾಲೆ ಮಾಡಿ ತಮ್ಮ ಕೊರಳಿಗೆ ಹಾಕಿ ಗೌರವ ಸೂಚಿಸುತ್ತಿದ್ದಾರೆ ಎಂಬುದಾಗಿ ಭಾವಿಸಿದವನಾದ ಛೇರ್ಮನ್ ಪ್ರಸನ್ನವದನನಾದನು.

ಛೇರ್ಮನ್ ಏನಾದರೂ ಅಪ್ಪಣೆ ಕೊಡಿಸಬಹುದೆಂಬ ನಿರೀಕ್ಷೆಯಲ್ಲಿ ಜನಸ್ತೋಮ.

ಆದರೆ ಅಲ್ಲಿಂದ ಯಾವ ಪ್ರತಿಕ್ರಿಯೆ ಬಾರದಿದ್ದಾಗ...

ಗುರಪನೇ ಕಟ್ಟೆ ಮೇಲೆ ನಿಂತು,

"ಛೇರ್ಮನ್ರೇ, ಕರಿಯಪ್ಪ ಗುಂಡು ಎತ್ತಿದ್ದಾಯ್ತಲ್ಲ.... ಚಪ್ಪರ ಚನ್ನಪ್ಪನಿಟ್ಟಿರೋ ಬೆಳ್ಳಿ ಕಡಗ ತಂದುಕೊಡ್ರಿ" ಎಂದು ಕೂಗಿ ಹೇಳಿದ.

"ಹೌದು...", "ಹೌದು..." ಜನರೂ ಬೆಂಬಲಿಸಿದರು.

ಶಂಕರರೆಡ್ಡಿ ಎದ್ದು ನಿಂತು ಗಂಟಲು ಸರಿಪಡಿಸಿಕೊಂಡ.

"ಯಾವ ಬೆಳ್ಳಿಕಡಗ ಏನ್ಕಥೆ.... ನಮಗೆ ಚಪ್ಪರ ಚನ್ನಪ್ಪ ಗೊತ್ತಿಲ್ಲ.... ಆತ ನಮತ್ರ ಯಾವ ಬೆಳ್ಳಿ ಕಡಗ ಇಟ್ಟಿಲ್ಲ" ಎಂದು ಹೇಳಿದೊಡನೆ ಜನ ಪಾತಾಳಕ್ಕಿಳಿಬಿಟ್ಟಿತು.

ಗುರಪ ಛೇರ್ಮನ್ ಕಡೆ ದುರುಗುಟ್ಟಿದ.

ಛೇರ್ಮನ್ 'ಏ' ನಿರೀಕ್ಷಿಸಿದ್ದಂತೆ ಸುಳ್ಳು ಹೇಳಿದ. ಆತಗೆ ಬೇಕಾಗಿದ್ದು ಅದೇ. ಛೇರ್ಮನ್ ಸುಳ್ಳು ಹೇಳಿ ಗ್ರಾಮಕ್ಕೆ ಅವಮಾನಮಾಡಿದರೆಂದು ಗ್ರಾಮಸ್ಥರು ಭಾವಿಸಿದರು. ಸಾರ್ವಜನಿಕವಾಗಿ ಜಮೀನ್ದಾರರ ವ್ಯಕ್ತಿತ್ವ ಅಪಮೌಲ್ಯಗೊಂಡಿತು.

'ಏ' ಜನರ ಮುಂದೆ ನಿಂತು "ಕರಿಯಪ್ಪ ಚಪ್ಪರ ಚನ್ನಪ್ಪನ ಗುಂಡು ಎತ್ತಿದ. ಆದ್ರಿಂದ ಈತಗೆ ಚಪ್ಪರ ಚನ್ನಪ್ಪನ ಹೆಸರಲ್ಲಿ ಬೆಳ್ಳಿ ಕಡಗ ಕೊಡುವುದೋ ಬೇಡವೋ..." ಎಂದ. ಜನ "ಹೌಹೌದು ಕೊಡಬೇಕು" ಎಂದರು. "ಛೇರ್ಮನ್ರು ಕೊಡಬೇಕು" ಎಂದು ಕೂಗಿದರು. ರೆಡ್ಡಿ ಖಡಾಖಂಡಿತ ನಿರಾಕರಿಸಿದ.

ನಾಗಲದಿನ್ನಿ ಕರಿಯಪ್ಪ ಬೇಡವೆಂದರೂ 'ಏ' ಕೇಳಲಿಲ್ಲ. ಹಿಂದಿನ ದಿನ ಪಡೆದ ಪಗಾರ ಜೇಬಿನಲ್ಲಿತ್ತು. ಅದರಿಂದ ನೂರೈವತ್ತು ತೆಗೆದು ಗುರುಪನ ಟವಲ್ಲಿಗೆ ಹಾಕಿದ. ಗುರಪ ಎಲ್ಲರ ಬಳಿಗೆ ಟವಲ್ ಒಯ್ದ. ಎಲ್ಲರೂ ಶಕ್ತಿ ಮೀರಿ ಹಾಕಿದರು. ಹೇಮಾವತಿ ಕೂಡ ಟವಲ್ಲಿಗೆ ನೂರು ರೂಪ್ಯಾ ಕಳಿಸಿದಳು. ಆ ಕ್ಷಣ ಎರಡೂವರೆ ಮೂರು ಸಾವಿರದಷ್ಟು ಸಂಗ್ರಹವಾಯಿತು.

ಅಷ್ಟು ಹಣದಿಂದ ಅದೇ ಗ್ರಾಮದ ಶೂದ್ರರಿಂದ ಒಂದೂವರೆ ಬೆಳ್ಳಿ ಸಂಗ್ರಹಿಸಿದ್ದಾಗಲೀ, ಕಂಸಾಲಿ ಪಂಪಣ್ಣಾಚಾರಿಯಿಂದ ಕಡಗ ಮಾಡಿಸುವುದಾಗಲೀ, ಸಾರ್ವಜನಿಕರ ಸಮಕ್ಷಮ ಕರಿಯಪ್ಪನಿಗೆ ಕೊಟ್ಟಿದ್ದಾಗಲೀ, ಕಡಗ ಸ್ವೀಕರಿಸಿದ ಆತ ಕಣ್ಣು ತುಂಬಿ ಬಾಯಿ ಕಟ್ಟಿ ಕೃತಜ್ಞತೆ ಸೂಚಿಸಿದ್ದಾಗಲೀ, ಗ್ರಾಮಕ್ಕೆ ಗ್ರಾಮವೇ ನಾಗಲದಿನ್ನಿ ಸಹೋದರರನ್ನು ಗಡಿಮುಟ್ಟಿಸಿ ಬಸ್ಸು ಹತ್ತಿಸಿ ಕಳಿಸಿದ್ದಾಗಲೀ ತಡವಾಗಲಿಲ್ಲ.

ಈ ಗುಂಡೆತ್ತಿದ ಪ್ರಕರಣದಿಂದ ಆ ಗ್ರಾಮದ ಇತಿಹಾಸವೇ ಬದಲಾಯಿತು. ಅಂದರೆ -

೧) ಮುಂದೆ ಕೆಲವು ತಿಂಗಳುಗಳಲ್ಲಿ ಗ್ರಾಮ ಪಂಚಾಯ್ತಿಗೆ ನಡೆದ ಚುನಾವಣೆಯಲ್ಲಿ ಭಾರಿ ಬಹುಮತದಿಂದ ಗುರಪ ಛೇರ್ಮನ್ನಾಗಿ ಆಯ್ಕೆಗೊಂಡ. ಶಂಕರರೆಡ್ಡಿ ಅವಮಾನ ತಡೆಯಲಾಗದೆ ತಮ್ಮ ವಾಸ್ತವ್ಯವನ್ನು ಬಳ್ಳಾರಿಗೆ ಬದಲಾಯಿಸಿದರು. ಆ ಗ್ರಾಮಕ್ಕೆ ಟಾರು ರಸ್ತೆಯಾಯಿತು. ನೂರಾರು ದಲಿತರು ಜೀತದಿಂದ ಮುಕ್ತಿ ಪಡೆದರು. ಚಾವಡಿ ಕಟ್ಟೆ ಮೇಲೆ ಶೂದ್ರ ದಲಿತರು ಕೂತು ಕಷ್ಟ ಸುಖ ಹೇಳಿಕೊಳ್ಳತೊಡಗಿದರು.

೨) ಚಪ್ಪರ ಚನ್ನಪ್ಪನ ಗುಂಡಿಗೆ ನಾಗಲದಿನ್ನಿ ಕರಿಯಪ್ಪನ ಗುಂಡು ಎಂದು ಪುನರ್ ನಾಮಕರಣವಾಯಿತು.

೩) ಶಂಕರರೆಡ್ಡಿ ತನ್ನ ಮಗಳು ಹೇಮಾವತಿಯನ್ನು ಪೋಲಿಯೋ ಪೀಡಿತ ಶ್ರೀಮಂತ ವರನಿಗೆ ಕೊಟ್ಟು ಮದುವೆ ಮಾಡಿ ಸೇಡು ತೀರಿಸಿಕೊಂಡ.

೪) ಇದರಿಂದ ಬೇಸತ್ತ 'ಏ' ಸುದೀರ್ಘ ರಜೆ ಮೇಲೆ ಸ್ವಂತ ಊರಿಗೆ ಮರಳಿಬಂದ. ●

ಈ ಪುಸ್ತಕ

# ಶ್ರೀಮದ್ಭಗವದ್ಗೀತೆ ಹಾಗೂ ಆಡಳಿತ ವ್ಯವಸ್ಥೆ

• ಶ್ರೀನಿವಾಸ ಮ. ಕಟ್ಟಿ

ವಿಶ್ವವ್ಯಾಪಿಯಾದ ವ್ಯಾಪಾರ ಹಾಗೂ ದೂರ ಸಂಪರ್ಕ ಸಾಧನಗಳು ನಮ್ಮ ನಿತ್ಯ ಜೀವನದಲ್ಲಿ ಅಗಾಧವಾದ ಬದಲಾವಣೆಯನ್ನು ತಂದಿವೆ. ಈ ಕಾರಣದಿಂದಾಗಿ ನಮ್ಮ ಐಹಿಕ ಚಟುವಟಿಕೆಗಳು ವಿಸ್ಮಯಪೂರ್ಣ ರೀತಿಯಲ್ಲಿ ವೃದ್ಧಿಸಿವೆ. ಈ ಚಟುವಟಿಕೆಗಳು ಸರಳವಾಗಿ ನಡೆಯಲು ಹಾಗೂ ಚಟುವಟಿಕೆಗಳ ಮೇಲೆ ಸಂಪೂರ್ಣ ನಿಯಂತ್ರಣ ಸಾಧಿಸಲು ಪರಿಣಾಮಕರವಾದ ಆಡಳಿತ ವ್ಯವಸ್ಥೆಯ ಅವಶ್ಯಕತೆ ಉಂಟಾಗಿದೆ. ಈ ಕಾರಣದಿಂದಲೇ ಜಗತ್ತಿನ ಎಲ್ಲ ಮುಂದುವರಿದ ದೇಶಗಳ ಶಿಕ್ಷಣಪದ್ಧತಿಯಲ್ಲಿ ಆಡಳಿತ ವ್ಯವಸ್ಥೆಗೆ (Management Science) ಅಗ್ರ ಸ್ಥಾನ.

ಆಡಳಿತ ವಿಜ್ಞಾನ ನಿಸ್ಸಂದೇಹವಾಗಿಯೂ ಹೊಸ ವಿಷಯ. ಆದರೆ ಈ ವಿಷಯದಲ್ಲಿ ಪ್ರಾಚೀನ ಭಾರತೀಯ ಗ್ರಂಥಗಳು ಮಾರ್ಗದರ್ಶನ ಮಾಡಬಲ್ಲವೆ? ಇತ್ತೀಚೆಗೆ ಅನೇಕ ವಿದ್ವತ್ಪೂರ್ಣ ಹಾಗೂ ರೋಚಕವಾಗಿರುವ ಗ್ರಂಥಗಳು ಪ್ರಕಟವಾಗಿವೆ. ಅವುಗಳ ಪೈಕಿ "ದ ಗೀತಾ ಆ್ಯಂಡ್ ದಿ ಮ್ಯಾನೇಜಮೆಂಟ್" ಒಂದು. ಇದರ ಲೇಖಕರು ಸ್ವಾಮಿ ಬೋಧಾನಂದ ಎನ್ನುವವರು. ಅವರ ಪರಿಚಯ ನನಗಿಲ್ಲ. ಆದರೆ ಈ ಗ್ರಂಥವನ್ನೋದಿದಾಗ ಸ್ವಾಮಿಗಳು ವಿದ್ವಾಂಸರೆಂದೂ ಅವರಿಗೆ ಆಡಳಿತ ವಿಜ್ಞಾನದ ಆಳವಾದ ಜ್ಞಾನ ಹಾಗೂ ಅನುಭವವಿದೆಯೆಂಬುದೂ ಗೊತ್ತಾಗುವುದು.

ಒಂದು ಸಂಸ್ಥೆಯಲ್ಲಿ ಕೆಲಸಮಾಡುವ ವ್ಯಕ್ತಿಗಳ ಯೋಗ್ಯತೆ ಹಾಗೂ ಕ್ಷಮತೆಯ ಸಂಪೂರ್ಣ ಲಾಭ ಪಡೆಯುವುದೇ ಆಡಳಿತ ವಿಜ್ಞಾನದ ಪರಮಗುರಿ. ಇದಕ್ಕಾಗಿ ಅನೇಕ ಮುಂದುವರಿದ ದೇಶಗಳಲ್ಲಿ ಪ್ರಯೋಗಗಳು ನಡೆದಿವೆ. ಅಮೇರಿಕದಲ್ಲಿ ಪ್ರಚಲಿತವಾಗಿರುವ ಒಂದು ಸಿದ್ಧಾಂತದ ಪ್ರಕಾರ ವಿಶಾಲವಾದ ಕಾರ್ಯಾಲಯ, ಆಧುನಿಕ ಸೌಲಭ್ಯಗಳು, ಸುಖಕರವಾದ ಆಸನಗಳು, ವಾಲ್ ಟೂ ವಾಲ್ ಕಾರ್ಪೆಟ್, ವಾತಾನುಕೂಲ ಮುಂತಾದವನ್ನು ಒದಗಿಸಿದರೆ ವ್ಯಕ್ತಿಯು ಸಂಪೂರ್ಣ ಕಾರ್ಯಕ್ಷಮತೆಯೊಂದಿಗೆ ಕೆಲಸ ಮಾಡುತ್ತಾನೆ. ಈ ಸಿದ್ಧಾಂತವನ್ನು ಒರೆಗೆ ಹಚ್ಚಿದಾಗ ಆಂಶಿಕವಾಗಿ ಸಫಲವೂ

ಆದವು. ಆದರೆ ಸುಖ-ಸೌಲಭ್ಯಗಳ ಒಂದು ಸೀಮೆಯ ನಂತರ ಕಾರ್ಯಕ್ಷಮತೆ ಕುಗ್ಗಿದ್ದು ಅನುಭವಕ್ಕೆ ಬಂದಿತು.

ಈ ಕುರಿತು ಜಪಾನಿನಲ್ಲಿಯೂ ಒಂದು ಪ್ರಯೋಗ ನಡೆಯಿತು. ಅದೆಂದರೆ ಕೆಲಸ ಆರಂಭಿಸುವ ಮೊದಲು ವ್ಯಕ್ತಿಗಳಲ್ಲಿ ಚೈತನ್ಯ ತುಂಬುವ ಉದ್ದೇಶದಿಂದ ಲಘು ವ್ಯಾಯಾಮ ಮಾಡಿಸುವುದು. ಇದರಿಂದ ಆಲಸ್ಯ ದೂರವಾಗಿ ವ್ಯಕ್ತಿಯು ಉತ್ಸಾಹದಿಂದ ಕೆಲಸ ಮಾಡುತ್ತಾನೆ ಎಂಬ ವಿಚಾರ ಈ ತತ್ವದ ಹಿನ್ನೆಲೆಯಲ್ಲಿದೆ. ಈ ಪ್ರಯೋಗ ಕೂಡ ಆಂಶಿಕವಾಗಿಯೇ ಸಫಲವಾಯಿತು; ಕೆಲವು ಸಮಯದ ನಂತರ ವಿಫಲವೂ ಆಯಿತು. ವ್ಯಕ್ತಿಗಳ ಕಾರ್ಯಕ್ಷಮತೆ ಮತ್ತೆ ಕುಗ್ಗ ತೊಡಗಿತು.

ಸ್ವಾಮಿ ಬೋಧಾನಂದರ ಅಭಿಪ್ರಾಯದಲ್ಲಿ ಮೇಲಿನ ಎರಡೂ ಪ್ರಯೋಗಗಳಲ್ಲಿ ಒಂದು ಮಹತ್ವದ ಕೊರತೆಯಿದೆ. ವ್ಯಕ್ತಿಯನ್ನು ಕೇವಲ ಭೌತಿಕ ವಸ್ತುವಾಗಿ ಪರಿಗಣಿಸಿದ್ದೇ ತಪ್ಪು. ಅವರ ಪ್ರಕಾರ ಭೌತಿಕತೆಯ ಜೊತೆಗೆ ಆಧ್ಯಾತ್ಮಿಕತೆಯನ್ನು ಬೆರೆಸದಿದ್ದರೆ ಯಾವದೇ ಆಡಳಿತ ಸಿದ್ಧಾಂತವೂ ಅಪೂರ್ಣವಾಗಿಯೇ ಉಳಿಯುವುದು.

ಗುಣಧರ್ಮಕ್ಕೆ ಅನುಗುಣವಾಗಿ ಕಾರ್ಯ ಮಾಡುವಂತೆ ಪ್ರೇರಿಸಿದರೆ, ಯಾವನೇ ಮನುಷ್ಯ ಪೂರ್ಣ ಕ್ಷಮತೆಯನ್ನು ಉಪಯೋಗಿಸಿ ಕಾರ್ಯ ಮಾಡುವನೆಂದು ಗೀತೆ ಹೇಳಿದೆ. ಒಬ್ಬ ವ್ಯಕ್ತಿ ವಿಜ್ಞಾನಿಯಾಗಲು ಜೀವರಸಾಯನದಲ್ಲಿ ಪದವಿ ಪಡೆದು, ನಂತರ ಬ್ಯಾಂಕಿನಲ್ಲಿ ಮ್ಯಾನೇಜರನಾದರೆ ಆ ಕಾರ್ಯ ಅವನ ಗುಣಧರ್ಮಕ್ಕೆ ವಿಪರೀತವಾಗುವುದು. ಕಾರ್ಯಕ್ಷಮತೆ ಹಿಗ್ಗಲು ಮಾಡುವ ಕಾರ್ಯ ವ್ಯಕ್ತಿಯ ಅಭಿರುಚಿಗೆ ಅನುಸಾರವಾಗಿರಬೇಕು. ಈ ವಿಷಯವಾಗಿ ಭಗವದ್ಗೀತೆ ನಮಗೆ ಇನ್ನೊಂದು ಪಾಠ ಕಲಿಸುತ್ತಿದೆ. ಅದೆಂದರೆ ಕೆಲಸದ ನಂತರ ಸಿಗುವ 'ಫಲ' ಕೆಲಸಕ್ಕೆ ಪ್ರೇರಣೆಯಾಗುವುದಿಲ್ಲ ಎನ್ನುವುದು. ಕೆಲಸಕ್ಕೆ ಸರಿಯಾದ ಪಾರಿಶ್ರಮಿಕ ಸಿಗಬೇಕು. ಆದರೆ ಪಾರಿಶ್ರಮಿಕದ ಜೊತೆಗೆ 'ತೃಪ್ತಿ'ಯೂ ಸಿಗಬೇಕು.

ಹಾಗಾದಾಗ ವ್ಯಕ್ತಿ ಕೆಲಸದಲ್ಲಿ ತನ್ನನ್ನು ತಾನು ಸಂಪೂರ್ಣವಾಗಿ ತೊಡಗಿಸಿಕೊಂಡು ಕೆಲಸದಲ್ಲಿ ಉಚ್ಚ ದರ್ಜೆಯ ಕೌಶಲವನ್ನು ತೋರಿಸುವನು. ನಿಜವಾಗಿಯೆಂದರೆ ದೊಡ್ಡ ವೇತನ ಮಾತ್ರ ಕಾರ್ಯಕುಶಲತೆಗೆ ಪ್ರೇರಣೆಯಾಗಲಾರದು. ಭಗವದ್ಗೀತೆಯಲ್ಲಿ ಪ್ರಣೀತವಾದ ಹಾಗೂ ಆಡಳಿತದ ವಿಚಾರದಲ್ಲಿ ಮಹತ್ವಪೂರ್ಣವಾದ ವಿಚಾರವೆಂದರೆ ಯಾವ ವ್ಯಕ್ತಿಯು ತನ್ನ ಕಾರ್ಯವನ್ನು ಭಗವದಾರಾಧನೆ ಎಂದು ಮಾಡುವದಿಲ್ಲವೋ, ಯಾವ ವ್ಯಕ್ತಿಗೆ ತನ್ನ ಕಾರ್ಯದಲ್ಲಿ ಅಸೀಮವಾದ ಆನಂದ ಹಾಗೂ ತೃಪ್ತಿ ದೊರೆಯುವದಿಲ್ಲವೋ, ಆ ಕಾರ್ಯವನ್ನು ಅವನು ತನ್ಮಯತೆಯಿಂದ ಮಾಡಲಾರನು ಎನ್ನುವುದು. ಕಾರ್ಯದಲ್ಲಿ ತನ್ಮಯತೆ ಇರದಿದ್ದರೆ ಕಾರ್ಯಕ್ಷಮತೆ ಹಾಗೂ ಕೌಶಲಗಳನ್ನು ಅವನು ಮಾಡುವ ಕೆಲಸದಲ್ಲಿ ಕಾಣಲಾರೆವು. ಇದು ಆಡಳಿತ ವಿಜ್ಞಾನದ ಅತ್ಯಂತ ಸರಳ ಸಿದ್ಧಾಂತ. ವ್ಯಕ್ತಿಯ ಕಾರ್ಯ ಕೌಶಲಕ್ಕೆ ಭೌತಿಕಶಕ್ತಿ ಮಾತ್ರವಲ್ಲದೆ ಆಧ್ಯಾತ್ಮಿಕ ಶಕ್ತಿಯೂ ಪ್ರೇರಕವಾಗಬೇಕು ಎನ್ನುವುದು 'ಆಡಳಿತ' ವಿಜ್ಞಾನಕ್ಕೆ ಭಗವದ್ಗೀತೆಯ ಮಾರ್ಗದರ್ಶನ.

ಸಂಸ್ಥೆಯ ನೇತೃತ್ವವು ಎಲ್ಲ ಕೆಲಸಗಾರರನ್ನು ತನ್ನ ವಿಶ್ವಾಸದಲ್ಲಿ ತೆಗೆದುಕೊಳ್ಳಬೇಕೆನ್ನುವುದು 'ಆಡಳಿತ ವಿಜ್ಞಾನದ ಇನ್ನೊಂದು ಮಹತ್ವದ ತತ್ವ. ಸಂಸ್ಥೆಯ ಆಡಳಿತ ವ್ಯವಸ್ಥೆ ಒಂದು ಸಾಮೂಹಿಕ ಹೊಣೆಗಾರಿಕೆ. ಇದೊಂದು ಸಾಮೂಹಿಕ ಯಜ್ಞ. ಭಗವಾನ್ ಶ್ರೀಕೃಷ್ಣನು ಗೋವರ್ಧನ ಗಿರಿಯನ್ನು ತಾನೊಬ್ಬನೇ ಎತ್ತಿ ಮಥುರಾವಾಸಿಗಳನ್ನು ಇಂದ್ರನ ಕೋಪದಿಂದ ಕಾಪಾಡಬಹುದಿತ್ತು. ಆದರೆ ಆತ ಹಾಗೆ ಮಾಡದೆ, ಎಲ್ಲರ ಪ್ರಯತ್ನವನ್ನೂ ಪ್ರೇರಿಸಿ, ಆ ಕಾರ್ಯವನ್ನು ಸಾಮೂಹಿಕ ಯಜ್ಞವನ್ನಾಗಿ ಮಾಡಿದನು. ಇದನ್ನೇ "ಕಲೆಕ್ಟಿವ್ ರಿಸ್ಪಾನ್ಸಿಬಿಲಿಟಿ" ಎಂದೂ ಹೇಳುವರು. ಯಾವುದೇ ಸಂಸ್ಥೆ ಸಫಲವಾಗಬೇಕಾದರೆ ಸಂಸ್ಥೆಯ ನೇತೃತ್ವ ಹಾಗೂ ಕೆಲಸಗಾರರ ನಡುವೆ ಸಾಮರಸ್ಯವಿರುವುದು ಮತ್ತು ಸಂಘಬಲ (Team Spirit)ವಿರುವುದು ಅವಶ್ಯ. ಸಂಸ್ಥೆಯ ಶ್ರೇಯಸ್ಸು ಎಲ್ಲ

ಕೆಲಸಗಾರರಿಗೂ ಹೋಗಬೇಕು. ಈ ರಹಸ್ಯವನ್ನು ಶ್ರೀಕೃಷ್ಣನ ಹೊರತು ಇನ್ನಾರು ಇಷ್ಟು ಪ್ರಭಾವಪೂರ್ಣವಾಗಿ ಕಲಿಸಬಲ್ಲರು?

ಯಾವದೇ ಕೆಲಸವನ್ನು ಯಶಸ್ವಿಯಾಗಿ ಮಾಡಲು ಅಂತಃಪ್ರೇರಣೆ ಬಹುಮುಖ್ಯ. ಭಗವದ್ಗೀತೆ ಈ ಅಂತಃಪ್ರೇರಣೆಯನ್ನು ಅತ್ಯಂತ ಸರಳವಾಗಿ ಒದಗಿಸುವದು. ಎಲ್ಲ ಮಾನವರಿಗೂ ಮುಕ್ತಿಯೇ ಆತ್ಯಂತಿಕ ಗುರಿ. ಮುಕ್ತಿಗೆ ಸಾಧನವಾಗುವಂಥಾದ್ದು ಯೋಗ. ಭಗವದ್ಗೀತೆಯ ಪ್ರಕಾರ ಕಾರ್ಯ(ಕರ್ಮ)ದಲ್ಲಿ ಕೌಶಲವನ್ನು ಗಳಿಸುವುದೇ ಯೋಗ. ಕೆಲಸದಲ್ಲಿ ಅದನ್ನು ತೋರಿಸಲು ಇದಕ್ಕಿಂತಲೂ ದೊಡ್ಡದಾದ ಅಂತಃಪ್ರೇರಣೆ ಇನ್ನಾವುದು ಬೇಕು?

ಆಡಳಿತ ವಿಜ್ಞಾನವನ್ನು ಕುರಿತು ವಿವೇಚಿಸುವಾಗ ಸ್ವಾಮಿ ಬೋಧಾನಂದರು ಅದರ ಇನ್ನೊಂದು ಮುಖವನ್ನು ಕುರಿತು ಹೇಳುವದೇನಂದರೆ, "ಅರ್ಜುನನಿಗೆ ಯಾವದರ ಕೊರತೆ ಇತ್ತು? ಅವನು ತನ್ನ ಕಾಲದ ಶ್ರೇಷ್ಠ ಧನುರ್ಧರನಿದ್ದ; ಅನೇಕ ಯುದ್ಧಗಳನ್ನು ಲೀಲಾಜಾಲವಾಗಿ ಗೆದ್ದೂ ಇದ್ದ; ಅವನ ಹತ್ತಿರ ಶಂಕರ ದಯಪಾಲಿಸಿದ ದಿವ್ಯಾಸ್ತ್ರಗಳಿದ್ದವು; ಆದರೂ ಕುರುಕ್ಷೇತ್ರದ ರಣಾಂಗಣದಲ್ಲಿ ಅಧೀರನಾಗಿ, ಹೇಡಿಯಂತೆ ವರ್ತಿಸಿದ. ಆಗ ಭಗವಾನ್ ಶ್ರೀಕೃಷ್ಣ ಅವನಿಗೆ ತಿಳಿಹೇಳಿದ. ಅವನಿಗೆ ತಿಳಿಯಲಿಲ್ಲ, ಅವನ ಮನಸ್ಸಿನಲ್ಲಿ ಗೊಂದಲವಾಯಿತು. ಕಿಂಕರ್ತವ್ಯಮೂಢನಾದ. ಕೊನೆಗೆ ಭಗವಾನ್ ಶ್ರೀಕೃಷ್ಣ ಪಾರ್ಥನಿಗೆ ತನ್ನ ವಿರಾಟ ರೂಪವನ್ನು ತೋರಿದ. ಅರ್ಜುನ ಗಾಬರಿಯಾದ. ಆದರೆ ಜ್ಞಾನೋದಯವಾಯಿತು. ತಾತ್ಪರ್ಯವಿಷ್ಟೇ: ವ್ಯಕ್ತಿ ಕೆಲವೊಮ್ಮೆ ಕರ್ಮ-ಅಕರ್ಮ, ನಿರ್ಣಯ-ಅನಿರ್ಣಯಗಳ ಗೊಂದಲಕ್ಕೆ ಸಿಕ್ಕು ಕಿಂಕರ್ತವ್ಯ ಮೂಢನಾದಾಗ ಸಂಸ್ಥೆಯ ಆಡಳಿತದ ಹೊಣೆ ಹೊತ್ತವರು ವ್ಯಕ್ತಿಗೆ ವ್ಯವಸ್ಥೆಯ ವಿಶ್ವರೂಪದರ್ಶನ ಮಾಡಿಸಿ ಆತನು ಕಾರ್ಯೋನ್ಮುಖನಾಗುವಂತೆ ಪ್ರೇರೇಪಿಸಲು ಸಮರ್ಥವಾಗಿರಬೇಕು."

ಈ ರೀತಿಯಾಗಿ ಸ್ವಾಮಿ ಬೋಧಾನಂದರು ತಮ್ಮ "ದಿ ಗೀತಾ ಆ್ಯಂಡ್ ಮ್ಯಾನೇಜ್‌ಮೆಂಟ್"ನಲ್ಲಿ ಆಡಳಿತ ವಿಜ್ಞಾನಕ್ಕೆ ಒಂದು ಹೊಸ ಆಯಾಮ, ಹೊಸ ವಿವೇಚನೆ ನೀಡುವ ಹೊಸ ವಿಚಾರ ಮಂಡಿಸಿರುವರು.

ವಾಸ್ತವದಲ್ಲಿ ಭಾರತದ ಪ್ರಾಚೀನ ಸಾಹಿತ್ಯ ವಿದ್ಯೆಯ ಅಗಾಧ ಸಾಗರ. ಈ ವಿದ್ಯೆ ಮಾನವ ಜೀವನವನ್ನು ಸಫಲ ಹಾಗೂ ಸುಖಮಯವನ್ನಾಗಿ ಮಾಡಲು ಅತ್ಯಂತ ಸಹಾಯಕಾರಿಯಾಗಬಲ್ಲುದು. ಆದರೆ ಅದಕ್ಕೆ ಪೂರ್ವಾಗ್ರಹ ತ್ಯಜಿಸಿ, ಹೊಸ ದೃಷ್ಟಿಯಿಂದ ಪ್ರಾಚೀನ ಸಾಹಿತ್ಯವನ್ನೋದಿ ಅರ್ಥ ಮಾಡಿಕೊಂಡು ಮಾರ್ಗದರ್ಶನ ಪಡೆಯುವುದು ಅತ್ಯವಶ್ಯ. ●

---

## ನಿರುಪಯುಕ್ತ ಮಾಹಿತಿ

**ಪ್ರ**ತಿಯೊಬ್ಬನಿಗೆ ೬೦ x ೬೦ ಸೆಂಟಿಮೀಟರಿನಷ್ಟು ಜಾಗಕೊಟ್ಟು ಜಗತ್ತಿನ ಎಲ್ಲ ಜನರನ್ನೂ ಒಂದೆಡೆ ನಿಲ್ಲಿಸಬೇಕಾದರೆ ಎರಡುಸಾವಿರ ಚದರ ಕಿಲೋಮೀಟರುಗಳಷ್ಟು ಸ್ಥಳ ಬೇಕಾಗುವುದು.



ಮಧ್ಯವಯಸ್ಸು ಸಮೀಪಿಸುತ್ತಾ ಬಂದಿದ್ದರೂ ಇನ್ನೂ ಮದುವೆಯಾಗದ ಗೆಳತಿಗೆ, "ವರ ತಂತಾನೆ ಬರುತ್ತಾನೆಂದು ಹೀಗೇ ಕಾಯುತ್ತಾ ಕುಳಿತರೆ ಕೊನೆಯವರೆಗೂ ನಿನ್ನ ಮದುವೆಯಾಗುವುದೇ ಇಲ್ಲ, ಅವನೇನು ಆಕಾಶದಿಂದ ಇಳಿದುಬರುತ್ತಾನೇನು?" ಎಂದಾಕೆ ಹಂಗಿಸಿದಳು.

ಆದರೆ ಅವಳ ಮದುವೆಯಾದದ್ದು ಆಕಾಶದಿಂದ ಇಳಿದು ಬಂದವನನ್ನೇ: ವಿಮಾನಕ್ಕೆ ಅಪಘಾತವಾದಾಗ ಪ್ಯಾರಾಚೂಟನಿಂದಾತ ಆಕೆಯ ಮನೆಯಂಗಳದಲ್ಲೇ ಇಳಿದಿದ್ದ.

('ರೀಡರ್ಸ್ ಡೈಜೆಸ್ಟ್'ನಿಂದ)

# ಕಾಯಕಲ್ಪ



ಕತ್ತಲೆಯಲ್ಲಿ ಮಿನುಗುವ
ದೀಪದ ಬಳಿ
ಸ್ತೂಪವೊಂದು
ಎದ್ದು ನಿಂತು ಕಾಯುತ್ತಿದೆ ಇನ್ನೂ.....
ಬುದ್ಧ ಹೋದ ದಿನದಿಂದ
ಇಂದಿಗೂ
ಕಾಯಕಲ್ಪಕ್ಕೆ.

ಬದ್ಧಗೆಟ್ಟ ಬದುಕಿನ ದಾರಿ
ಯಲಿ
ಬಿದ್ದು ಹೋದ ನಮ್ಮ
ಸಿದ್ಧಾರ್ಥನ ಮನಸ್ಸಿನ ಮಹಲುಗಳು
ಅಲ್ಲಾಡುತ್ತಿವೆ
ನೆಗೆಟಿವ್ ಫಿಲ್ಮ್‌ನಲ್ಲಿ.

ಅರಿಯದೇ ಮರೆತು ಬಂದ
ದಾರಿ;
ಕಳೆದುಕೊಂಡ ಮೌಲ್ಯದ
ಮನೆಗೆ
ಎದೆಯ ಕದವೆಂಬುದ
ಮರೆತು
ಕಬ್ಬಿಣದ ಅಗಳಿ ಹಾಕಿದ್ದೇವೆ
ತೆರೆಯದಂತೆ.
ಸ್ಥಾವರಕ್ಕಳಿವುಂಟು
ಜಂಗಮಕ್ಕಳಿವಿಲ್ಲ ಎಂದವರ
ಬಂಡಿಗಾಲಿಯ ಕೀಲ ಬಿಚ್ಚಿದೆ
ಇಲ್ಲಿ; ಚಲಿಸದಂತೆ.
ಕತ್ತಲೆಯಲಿ ಮಿನುಗುವ
ದೀಪದ ಬಳಿ
ಸ್ತೂಪವೊಂದು
ಎದ್ದು ನಿಂತು ಕಾಯುತ್ತಿದೆ ಇನ್ನೂ....
ಬುದ್ಧ ಹೋದ ದಿನದಿಂದ
ಇಂದಿಗೂ
ಕಾಯಕಲ್ಪಕ್ಕೆ.

• ಗವಿಸಿದ್ಧ ಎನ್. ಬಳ್ಳಾರಿ

# ಮಡದಿ....

> ಕನ್ನಡದ ವಿಶಿಷ್ಟ ಪ್ರತಿಭೆ ದಿ.ಪಾ.ವೆಂ. ಆಚಾರ್ಯ. ಅವರು 'ಲಾಂಗೂಲಾಚಾರ್ಯ' ಎಂಬ ಕಾವ್ಯ ನಾಮದಿಂದ ಬರೆದ ಹರಟೆ-ಲಘು ಬರಹ-ಪ್ರಬಂಧಗಳು ಎಂದಿಗೂ ವಿನೂತನ. ಪುರುಷನ ಅಂತರಂಗದ ನಗ್ನತೆಯನ್ನು ಬಯಲುಗೊಳಿಸುತ್ತ ಸ್ತ್ರೀಯ ಮನಸ್ಸಿನಾಳಕ್ಕೆ ಜಿಗಿಯುವ 'ಲಾಂಗೂಲಾಚಾರ್ಯ'ರ "ವಕ್ರದೃಷ್ಟಿ" ಪ್ರಬಂಧಗಳ ಸಂಕಲನದ 'ತಾಯಿ ಬೇಕಂತೆ' ಎಂಬ ಪ್ರಬಂಧದ ಅಚ್ಚ ಳಿಯದ ಪುಟಗಳಿವು.

ನಾವು ಮದುವೆಯಾಗುವುದು ಬಹಳ ಮಟ್ಟಿಗೆ ಹೆಂಡತಿಯ ಅಪೇಕ್ಷೆಯಿಂದ ಎಷ್ಟೋ, ಅಷ್ಟೇ ತಾಯಿಯ ಅಪೇಕ್ಷೆಯಿಂದಲೂ ಎಂದು ಮನಃಶಾಸ್ತ್ರಜ್ಞರು ಹೇಳುತ್ತಾರೆ. ಹೆಂಡತಿಯಲ್ಲಿ ಎರಡನೇ ತಾಯಿಯನ್ನು ಬಯಸುತ್ತೇವೆ. "ಕಾರ್ಯೇಷು ದಾಸಿ, ಕರಣೇಷು ಮಂತ್ರಿ, ರೂಪೇಚ ಲಕ್ಷ್ಮೀ, ಕ್ಷಮಯಾ ಧರಿತ್ರೀ. ಭೋಜ್ಯೇಷು ಮಾತು, ಶಯನೇಷು ರಂಭಾ" ಇದು ನಿಜವಾದ ಕುಲ ಧರ್ಮಪತ್ನಿಯ ಲಕ್ಷಣವೆಂದು ಸುಭಾಷಿತಕಾರ ಹೇಳುವುದು ತಪ್ಪಲ್ಲ. ಭೋಜ್ಯೇಷು ಮಾತಾ, ಕ್ಷಮಯಾ ಧರಿತ್ರಿ- ತಿನ್ನಿಸುವುದರಲ್ಲಿ ತಾಯಿಯಾಗಬೇಕು: ಕ್ಷಮಿಸುವುದರಲ್ಲಿ ಭೂಮಿಯಾಗಬೇಕು. ಇವೆರಡೂ ತಾಯಿಯ ಲಕ್ಷಣಗಳು. ಹಾಗೆ ಕೇಳಿದರೆ ಕಾರ್ಯೇಷು ದಾಸಿಯೂ ತಾಯಿಯೇ. ಕೈಹಿಡಿಯುವ ಹೆಣ್ಣಿನಲ್ಲಿ ಗಂಡಸು ಬಯಸುವುದು ಶೇ. ೫೦ ರಷ್ಟು ತಾಯಿಯನ್ನು. ಒಂದಂಶ ಮಾತ್ರ ಹೆಂಡತಿಯನ್ನು-

ಆದರೆ ಹೆಚ್ಚಿನ ಸಂದರ್ಭಗಳಲ್ಲಿ ಈ ಆರು ಕವಲಿನ ಆಶೆ ನಮಗೆ ಗಗನ ಕುಸುಮವಾಗಿಯೇ ಉಳಿಯುತ್ತದೆ. ಒಂದೊಮ್ಮೆ ಅವಳು ಶಯನೇಷು ರಂಭಾ ಆಗಬಹುದು, ಕೆಲವು ದಿನಗಳ ಮಟ್ಟಿಗೆ ನಮಗೆ ರಂಭೆಯೊಬ್ಬಳೇ ಸಾಕು ಎನ್ನಿಸಲೂ ಬಹುದು. ಆ ಮದಿಷ್ಠ ದಿನಗಳ ಸ್ವಾದಿಷ್ಟತೆ ತುಸು ಬೇಸರ ತರಿಸಿದಾಗ ನಾವು ಅವಳ ಕೈಯಡಿಗೆ ನಮ್ಮ ತಾಯಿ ಬಡಿಸಿ ಕಲಿಸಿದ ಅಡಿಗೆಯಷ್ಟು ರುಚಿಯಾಗಿರುವುದಿಲ್ಲ ಎಂದು ಗಮನಿಸುತ್ತೇವೆ.

ಯೋಚಿಸಿದಾಗ ಆಶ್ಚರ್ಯವಾಗುತ್ತೆ. ತಾಯಿಗೂ ಹೆಂಡತಿಗೂ ಇರುವ ಆಕಾಶ-ಪಾತಾಳದ ಅಂತರವನ್ನು ಕುರಿತು. ಇಬ್ಬರೂ ನಮ್ಮನ್ನು ಬತ್ತಲೆಯಾಗಿ ಬಲ್ಲರು. ಆದರೆ ಈ ಬತ್ತಲಿನ ದರ್ಶನದಲ್ಲಿ ಎಷ್ಟು ಅಂತರ! ತಾಯಿ ನಮ್ಮ ಹೊರಗಿನಿಂದ ಒಳಗಿನವರೆಗಿನ ಬತ್ತಲೆಗಳನ್ನು ಬಲ್ಲಳು. ಆದರೆ ನಮ್ಮ ಹೆಂಡತಿ ನಮ್ಮ ಹೊರ ಬತ್ತಲೆಯನ್ನಷ್ಟೇ ದಾಯವಾಗಿ ಪಡೆಯುತ್ತಾಳೆ. ನಮ್ಮ ಒಳ ಬತ್ತಲೆಯನ್ನು ನಾವು ಶತ ಪ್ರಯತ್ನದಿಂದ ಅವಳ ಮುಂದೆ ಕತ್ತಲೆಯಲ್ಲೇ ಇಡುತ್ತೇವೆ. ಅಹಂಕಾರದ ತೆರೆಯೊಂದು ಅದನ್ನು ಯಾವಾಗಲೂ ಮುಚ್ಚಿರುತ್ತದೆ. ಅವಳ ಎದೆಯಲ್ಲಿ ನಾವೆಂದೂ ಮುಖ ಹುದುಗಿಸಿ, ಮುಕ್ತವಾಗಿ ನಮ್ಮ ದೌರ್ಬಲ್ಯಗಳನ್ನು ಅತ್ತು ಕಳೆಯಲಾರೆವು. ತೆರೆಯನ್ನು ಸರಿಸಿ ಆಕಸ್ಮಾತ್ತಾಗಿ ಅವಳು ನಮ್ಮ ಒಳಗನ್ನು ನೋಡಿಬಿಟ್ಟರೆ ನಮಗೆ ಸತ್ತಂತಾಗುತ್ತದೆ. ಅವಳು ನಮ್ಮ ಕೈಲಾಗದತನಕ್ಕಾಗಿ ನಮ್ಮ ಮೇಲೆ ಸಹಾನುಭೂತಿ ತೋರಿಸಿದರೆ ಅದು ಇನ್ನೂ ಕಷ್ಟ. ಹೆಂಡತಿಯೊಡನೆ ನಮ್ಮ ಸಂಬಂಧ ಪೌರುಷ ಸೇತುವೆಯ ಮೇಲೆ ಆದದ್ದು. ಪೌರುಷ ಸೇತುವೆ ಕುಸಿದರೆ ನಾವು ಅವಳ ದೃಷ್ಟಿಯಲ್ಲಿ ಪ್ರಪಾತ ಪತಿತರು. ನಿಮ್ಮ ಮಡದಿಯ ಮುಂದೆ ಜಗತ್ತಿನಲ್ಲಿ ನಿಮಗಾದ ಅವಮಾನಗಳನ್ನು ಹೇಳಿಕೊಳ್ಳಬಹುದು. ಅವಳು ನಿಮ್ಮನ್ನು ನೇವರಿಸಿ ಸಮಾಧಾನ ಮಾಡಬಹುದು ಕೂಡ. ಆದರೆ ಆಮೇಲೆ ಅವಳನ್ನು ನಿಮ್ಮ ಮಡದಿಯೆಂದು ನೀವು ಭಾವಿಸುವುದು ಸಾಧ್ಯವಿಲ್ಲ. ಅವಳು ತಾಯಿಯಾಗಬಹುದು-ಒಳ್ಳೆಯ ತಾಯಿಯೂ ಆಗಬಹುದು ಕೂಡ; ಆದರೆ ಇಲ್ಲ- ನಿಮ್ಮ ಪಾಲಿಗೆ ಅವಳ ಊರ್ವಶಿತನ ಹೊರಟು ಹೋದಂತೆಯೇ, ಏಕಂ

ದರೆ ಅವಳ ದೃಷ್ಟಿಯಲ್ಲಿ ನೀವು ಎಷ್ಟೂ ವಿಕ್ರಮರಾಗಿ ಉಳಿಯುವುದಿಲ್ಲ.

ಸಂಗ್ರಹ: **ಚಂಚಲಾ ಶ್ರಿಕಂಠಯ್ಯ**

# ಪಂಚ ಲಕ್ಷಣಗಳು

**ಡಿ.ವಿ.ಜಿ.ಯವರು ನಾನಾ ವಿದ್ವತ್‌ಗೋಷ್ಠಿಗಳಲ್ಲಿ ಇತ್ತ ಉಪನ್ಯಾಸಗಳ ಸಂಗ್ರಹ 'ಸಾಹಿತ್ಯ ಶಕ್ತಿ.' ಇಲ್ಲಿ ಮಾನ್ಯರು ಸಾಹಿತ್ಯ ಉಪಾಧ್ಯಾಯರು. ಭಾಷೆ, ಹೀಗೆಯೇ ವೈವಿಧ್ಯಮಯ ವಿಷಯಗಳ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ಮಂಡಿಸಿದ್ದಾರೆ. ಪ್ರಸ್ತುತ 'ಉಪಾಧ್ಯಾಯರು ಮತ್ತು ಸಾಹಿತ್ಯ ಪಾಠ' ಎಂಬ ವಿಷಯದ ಬಗೆಗಿನ ಉಪನ್ಯಾಸದ ಆಯ್ದ ಅಂಶಗಳನ್ನು ಇಲ್ಲಿ ಸಂಗ್ರಹಿಸಲಾಗಿದೆ. (ಪ್ರಕಾಶಕರು: ಕಾವ್ಯಾಲಯ, ಮೈಸೂರು. ಪ್ರಥಮ ಮುದ್ರಣ: ೧೯೫೦)**

ಉಪಾಧ್ಯಾಯರಿಗೆ ಈಗ ಬೇಕಾಗಿರುವುದು ಬರಿಯ ಉಪನ್ಯಾಸವೆಂದು ನಾನು ತಿಳಿದುಕೊಂಡಿಲ್ಲ. ನಮ್ಮ ದೇಶದಲ್ಲಿ ಎಂಥಾ ಮಹಾನುಭಾವ ಹುಟ್ಟಿಕೊಂಡರೂ ಅವನ ಕಣ್ಣು ಮೊದಲು ಉಪಾಧ್ಯಾಯರ ಮೇಲೆ ಬೀಳುತ್ತಿದೆ. ಉಪಾಧ್ಯಾಯ ವೃತ್ತಿ ಬಹಳ ಶ್ರೇಷ್ಠವಾದದ್ದು; ಅತ್ಯಂತ ಪೂಜ್ಯವಾದದ್ದು; ತೀರಾ ಪುಣ್ಯಕರವಾದದ್ದು'- ಎಂದು ನಿಮ್ಮ ಕಸುಬನ್ನು ಕೊಂಡಾಡುವುದು. 'ನೀವು ಸೂರ್ಯನಂತೆ ಪ್ರಕಾಶವಾಗಿರಬೇಕು. ಚಂದ್ರನಂತೆ ಶಾಂತವಾಗಿರಬೇಕು. ಬುಧನಂತೆ ಚಾಲಾಕಾಗಿರಬೇಕು. ಬೃಹಸ್ಪತಿಯಂತೆ ಪ್ರಾಜ್ಞರಾಗಿರಬೇಕು'- ಎಂದು ಉಪದೇಶ ಕೊಡುವುದು; ಇದಷ್ಟೇ ಸಾಮಾನ್ಯವಾಗಿ ನಿಮಗೆ ಪ್ರತಿಷ್ಠಾವಂತರಿಂದ ಆಗುತ್ತಿರುವ ಉಪಕಾರ. ಅದರಲ್ಲಿ ನನಗೆ ನಂಬಿಕೆಯಿಲ್ಲ. ಉಪನ್ಯಾಸ, ಭಾಷಣ ಉಪದೇಶ, ಧರ್ಮಾಶ್ರಮ ಉದ್ಘೋಷಣೆ- ಇಂಥ ಬೈರಿಗೆ ಕೊರೆತದಿಂದ ನನಗೆ ಬೇಸರ.

"ಅನ್ನಕ್ಕೂ ಅಕ್ಷರಕ್ಕೂ ಇರುವ ಸಂಬಂಧವನ್ನು ಈಗಿನವರು ಕಂಡುಕೊಂಡಿರುವಂತೆ ಪೂರ್ವಿಕರು ಕಂಡಿರಲಿಲ್ಲ. ಆಗ ವಿದ್ಯೆಯೆಂಬುದು ದೇಶದಲ್ಲಿ ಯಾರಿಗೋ ನಾಲ್ಕು ಮಂದಿಗೆ ಬೇಕಾಗಿದ್ದದ್ದು- ಗೌರವಕ್ಕಾಗಿ. ಈಗ ಅದು ಎಲ್ಲ ಜನಕ್ಕೂ ಬೇಕು. ಜೀವನ ಸಮೃದ್ಧಿಗಾಗಿ ವಿಜ್ಞಾನ ಶಾಸ್ತ್ರ ಪ್ರಭಾವವೂ, ಅದರೊಡನೆ ರಾಜಕೀಯ ವಿವೇಕವೂ ಲೋಕದಲ್ಲಿ ವ್ಯಾಪಿಸಿಕೊಂಡು ಬಂದಹಾಗೆಲ್ಲ ತಮ್ಮ ಐಹಿಕ ಸುಖಸಂಪತ್ತು ತಮ್ಮ ವಿದ್ಯಾಭಿವೃದ್ಧಿಗೆ ಅನುಸಾರವಾಗಿರುತ್ತದೆ ಎಂಬ ತಿಳುವಳಿಕೆ ಜನರಲ್ಲಿ ಹರಡುತ್ತಿದೆ. ಒಂದು ತೆನೆ ಬೆಳೆದ ಹೊಲದಲ್ಲಿ ಹತ್ತು ತೆನೆ, ಒಂದು ಬಟ್ಟೆ ನೇಯ್ದ ಮಗ್ಗದಲ್ಲಿ ಹತ್ತು ಬಟ್ಟೆ, ಒಂದು ದೀಪ ಬೆಳಗಿದ ಮನೆಯಲ್ಲಿ ಹತ್ತು ದೀಪ. ಇಂಥಾದ್ದು ವಿದ್ಯಾಪ್ರಭಾವ. ಹೊಟ್ಟೆಗೆ ಊಟ ಹೇಗೋ ಬುದ್ಧಿಗೆ ವಿದ್ಯೆ ಹಾಗೆ.

"ವಿದ್ಯಾಪ್ರಪಂಚಕ್ಕೆ ಉಪಾಧ್ಯಾಯನೇ ಜೀವಾಳವೆಂದರೆ ಯಾರೂ ಅದು ಉತ್ಪ್ರೇಕ್ಷೆಯೆನ್ನಲಾರರು. ಪಾಠಶಾಲೆಯೆಂದರೆ ಗೋಡೆ ಛಾವಣಿಗಳಲ್ಲ, ಬೆಂಚು ಹಲಗೆಗಳಲ್ಲ ಪುಸ್ತಕ ಪಟಗಳೂ ಅಲ್ಲ, ಇನ್‌ಸ್ಪೆಕ್ಟರೂ ಅಲ್ಲ; ಅದು ಒಂದು ಶಕ್ತಿ ಪ್ರಕಾಶ. ಎಲ್ಲಿ ಒಂದು ಮಾನುಷ ಪ್ರಭಾವ ಪ್ರಾತಃಕಾಲದ ಸೂರ್ಯ ಕಿರಣಗಳಂತೆ ಹರಡಿ ಮತ್ತೊಂದು ಮಾನುಷ ಪ್ರಭಾವವನ್ನು ಮೇಲಕ್ಕೇಳಿಸುತ್ತದೆಯೋ ಅದೇ ನಿಜವಾದ ಪಾಠಶಾಲೆ.

"ಹುಟ್ಟಿದವರೆಲ್ಲ ಹಾಡುಗಾರರಾಗಲಾರರು; ಹಾಗೆಯೇ ಉಪಾಧ್ಯಾಯರೂ ಆಗಲಾರರು. ಸಂಗೀತ ಕಳೆಕಟ್ಟಲು ಒಂದು ವಿಶೇಷ ಸಂಪತ್ತು ಬೇಕಾಗಿರುವಂತೆ ಬೋಧನ ಕಾರ್ಯ ಯಶಸ್ವಿಯಾಗಲು ಒಂದು ವಿಶೇಷವಾದ ಸ್ವರೂಪ ಲಕ್ಷಣ ಬೇಕು. ಉಪಾಧ್ಯಾಯನಿಗೆ ಇರಬೇಕಾದ ಸ್ವರೂಪ ಸಂಪತ್ತು ಅನೇಕ ಗುಣಗಳ ಸಮ್ಮೇಳನದಿಂದ ಉತ್ಪನ್ನವಾಗತಕ್ಕದ್ದು. ಅವುಗಳಲ್ಲಿ ವರ್ಚಸ್ಸು, ಪ್ರಸನ್ನತೆ, ಗಾಂಭೀರ್ಯ, ವಾಕ್ಶುದ್ಧಿ, ಸ್ವಸ್ಥಾನ ಜ್ಞಾನ ಇವು ಪಂಚಲಕ್ಷಣಗಳು.

ಸಂಗ್ರಹ: **'ತರಂಗಿಣಿ'**"

ನಮಮ ಬಂದ ದಾರಿ

# ಮೋಟಾರ ಬೈಕಿನ ಜನ್ಮಶತಮಾನೋತ್ಸವ

ಪುಣೆ ಯಾವುದಕ್ಕೆ ಪ್ರಸಿದ್ಧ? ಎಂದು ಯಾರಾದರೂ ಕೇಳಿದರೆ ಕ್ಯಾಂಟೋನ್‌ಮೆಂಟಿಗೆ ಎಂದು ತಟ್ಟನೆ ಉತ್ತರಿಸುವವರೇ ಹೆಚ್ಚು. ವಾಸ್ತವವಾಗಿ ಇಡಿ ಜಗತ್ತಿನಲ್ಲೆ ಸ್ಕೂಟರನ್ನು ತಯಾರಿಸುವ ದೊಡ್ಡ ಸಂಸ್ಥೆಯಾದ 'ಬಜಾಜ್ ಆಟೋ' ಇರುವುದೇ ಇಲ್ಲಿ. ಮೋಪೆಡ್ ತಯಾರಿಸುವ ಜಗತ್ತಿನಲ್ಲೆ ಎರಡನೆಯ ಅತಿದೊಡ್ಡ ಕಾರಖಾನೆಯಿರುವುದೂ ಈ ನಗರದಲ್ಲೇ. (ನೀವು ಹತ್ತುವ 'ಲೂನಾ' ಎಲ್ಲಿಂದ ಬರುತ್ತದೆನ್ನುವುದು ಈಗ ಗೊತ್ತಾಯಿತಲ್ಲ?) ಹೀಗೆ ದ್ವಿಚಕ್ರ ವಾಹನಗಳ ಅನಭಿಷಿಕ್ತ ದೊರೆಯೆಂಬ ಅಭಿದಾನ ಪುಣೆ ನಗರಕ್ಕೆ ದೊರೆತದ್ದು ಯಥಾರ್ಥವಾಗಿಯೇ ಇದೆ. ಆದರೂ ಈ ಕುರಿತು ಜನಸಾಮಾನ್ಯರ ಗಮನ ಒಮ್ಮೆಲೇ ಹರಿಯುವುದೇ ಇಲ್ಲ.

ಆದರೆ ಈ ದ್ವಿಚಕ್ರ ವಾಹನಗಳು ನಮ್ಮ ದೇಶದಲ್ಲಿ ಪ್ರಥಮತಃ ಚಲಿಸಲು ಕಾರಣವಾದ ಒಂದು ಸಂಸ್ಥೆಯೂ ಪುಣೆ ನಗರದಲ್ಲೆ ಇದೆ; ಹೀಗಾಗಿ ದ್ವಿಚಕ್ರವಾಹನಗಳಿಗೂ ಪುಣೆಗೂ ಹೆಚ್ಚು ಕಡಿಮೆ ಒಂದು ಶತಮಾನದಿಂದಲೂ ಅನ್ಯೋನ್ಯವಾದ ಸಂಬಂಧವಿದೆ ಎನ್ನುವುದು ಬಹಳ ಜನರಿಗೆ ಗೊತ್ತಿದ್ದಂತಿಲ್ಲ. ಈಸ್ಟ್ ಸ್ಟ್ರೀಟಿನ ವಂಡರ್‌ಲ್ಯಾಂಡ್ ಬಿಲ್ಡಿಂಗಿನ ಎದುರು ಇರುವ 'ಮೋದಿ ಆ್ಯಂಡ್ ಕಂಪನಿ'ಯೇ ಆ ಸಂಸ್ಥೆ. ಸರಿಯಾಗಿ ನೂರು ವರ್ಷಗಳ ಹಿಂದೆ ಈ ಸಂಸ್ಥೆ ಪ್ರಾರಂಭವಾದಾಗ ನಗರದಲ್ಲೆಲ್ಲಾ ಕುದುರೆಗಾಡಿಗಳದೇ ಭರಾಟೆ. ಕುದುರೆಗಾಡಿಗಳನ್ನಿಟ್ಟುಕೊಳ್ಳುವುದು ಪ್ರತಿಷ್ಠೆಯ ವಿಷಯವಾಗಿದ್ದರಿಂದ ಸಂಪತ್ತಿನ ಸ್ವಲ್ಪ ಅನುಕೂಲವಾದವರೂ ಕುದುರೆಯನ್ನಿಟ್ಟುಕೊಳ್ಳಲು ಹಾತೊರೆಯುತ್ತಿದ್ದ ಕಾಲ.

ಹೀಗಾಗಿ ರತನ್ ಮೋದಿ (ಈಗಿನ ಅಂಗಡಿಯ ಮಾಲಕರ ಹೆಸರೂ ರತನ್ ಮೋದಿಯೇ- ಮೊದಲಿನ ಮೋದಿಯ ಮೊಮ್ಮಗ) ಸೈಕಲ್ಲಿನ ಅಂಗಡಿಯನ್ನು ಪ್ರಾರಂಭಿಸಿದಾಗ 'ಈ ಅಂಗಡಿಯೇನು ನಡೆಯುತ್ತದೆ?' ಎಂದು ಮೂಗುಮುರಿದವರೇ ಹೆಚ್ಚು. ರತನ್ ಮೋದಿ ಸೈಕಲ್ ಚಲಾಯಿಸುವುದನ್ನು ಸ್ವತಃ ಕಲಿತು ಪ್ರದರ್ಶನಾರ್ಥವಾಗಿ

• ಆದಿಲ್ ಜಾಲ್ ದಾರೂಖಾನಾವಾಲಾ

('ಕಾರ್ ಆ್ಯಂಡ್ ಬೈಕ್ ಇಂಟರ್‌ನ್ಯಾಷನಲ್' ದಿಂದ)



ಮೋಟರ್‌ಸೈಕಲ್ ರೇಸಿಂಗ್‌ನ ಆದ್ಯ ಪ್ರವರ್ತಕ ಆರ್.ಬಿ. ಮೋದಿ ತಮ್ಮ ಪ್ರೀತಿಯ 'ನಾರ್ಟನ್' ಸವಾರಿಯಲ್ಲಿ



ಸದಾ ಧುಮಾಳ್: ಪುಣೆ-ಮುಂಬಯಿ ಮೋಟರ್‌ಸೈಕಲ್ ರೇಸ್ ಗೆದ್ದ ಮೊದಲಿಗ.

ಊರಲ್ಲೆಲ್ಲ ಅಲೆದಾಡತೊಡಗಿದ ಮೇಲೆ ಜನರಲ್ಲಿ ಅಷ್ಟಿಷ್ಟು ಕುತೂಹಲ ಮೂಡಿತು. ಇಷ್ಟಕ್ಕೂ ಕುದುರೆಯ ಹಾಗೆ ಇದರ ಹೊಟ್ಟೆಗೆ ಹಾಕಿ, ಆರೋಗ್ಯವನ್ನೂ ನೋಡಿಕೊಳ್ಳುವ ಪ್ರಮೇಯವಿಲ್ಲ. ಮೇಲಾಗಿ ಇದನ್ನೇರಿದರೆ ಬೀಳುವ ಭಯವೂ ಇಲ್ಲ ಎನ್ನುವುದರ ಅರಿವಾದಾಗ ಈ ಕುತೂಹಲ ಬೇಡಿಕೆಯಾಗಿ ಮಾರ್ಪಟ್ಟಿತು.

ಆಗ ಸೈಕಲ್ಲುಗಳು ನಮ್ಮ ದೇಶದಲ್ಲಿ ತಯಾರಾಗುತ್ತಿದ್ದಿಲ್ಲ; ಪರದೇಶಗಳಿಂದ ತರಿಸಿಕೊಳ್ಳಬೇಕಾಗುತ್ತಿತ್ತು. ಕಾರಖಾನೆಗಳಿಂದ ತಯಾರಾಗಿ ಬಂದ ಸೈಕಲ್ಲುಗಳಂತೂ ಸರಿಯೆ, ಮೋದಿಯವರ ಇಚ್ಛೆಯ ಮೇರೆಗೇ ವಿಶೇಷವಾಗಿ ತಯಾರಿಸಿದ ಸೈಕಲ್ಲುಗಳನ್ನೂ ಅಂಗಡಿಯಲ್ಲಿಡಲಾಗುತ್ತಿದ್ದುದರಿಂದ ಗ್ರಾಹಕರಿಗೊಂದು ವಿಶೇಷ ಆಕರ್ಷಣೆಯಾಗಿತ್ತು. ಬರಬರುತ್ತ ಇಲ್ಲಿನ ಸೈಕಲ್ಲುಗಳಿಗೆ ಎಷ್ಟು ಬೇಡಿಕೆ ಬಂದಿತೆಂದರೆ, ಕೊಳ್ಳುವವರು ಮುಂಚಿತವಾಗಿ ಹಣ ತುಂಬಿ ಒಂದು ವರ್ಷದವರೆಗೆ ಕಾಯಬೇಕಾಗುತ್ತಿತ್ತು.

ಈ ಶತಮಾನ ಪ್ರಾರಂಭವಾಗುವ ಹೊತ್ತಿಗೆ ಯುರೋಪಿನಲ್ಲಿ ಮೋಟರ್‌ಸೈಕಲ್ಲುಗಳು ಬಳಕೆಗೆ ಬಂದಿದ್ದವು. ಅದರ ಪ್ರಯೋಜನವನ್ನು ಕಳೆದುಕೊಳ್ಳಲು ರತನ್ ಮೋದಿ ಸಿದ್ಧವಿರಲಿಲ್ಲ. ಸೈಕಲ್ಲನ್ನೇ ಅನುಮಾನದ ದೃಷ್ಟಿಯಿಂದ ನೋಡಿದ ಪುಣೆಯ ಸದ್ಗೃಹಸ್ಥರು ಅದನ್ನು ಸ್ವೀಕರಿಸುವ ಭರವಸೆಯೂ ಇರಲಿಲ್ಲ. ರತನ್ ಮೋದಿ ಕ್ಯಾಂಟೋನ್‌ಮೆಂಟಿನ 'ಬುರಾ ಸಾಹೇಬರು'ಗಳೊಂದಿಗೆ ಸಖ್ಯ ಬೆಳೆಸಿ ವ್ಯಾಪಾರ ಕುದುರಿಸಿಯೇಬಿಟ್ಟರು. ಇನ್ನೇನು, ಮೋಟರ್‌ಸೈಕಲ್ಲುಗಳು ಪರದೇಶಗಳಿಂದ ಬರುತ್ತವೆ ಎನ್ನುವಾಗ 'ಪ್ರಥಮಗ್ರಾಸೇ ಮಕ್ಷಿಕಾಪಾತಃ' ಅನ್ನುವ ಅನುಭವ ರತನ್ ಮೋದಿಯವರಿಗೆ ಬಂತು.

ಮೋದಿಯವರ ಅಂಗಡಿಯ ಪಕ್ಕದಲ್ಲೆ ಬಟ್ಟೆಯ ಅಂಗಡಿ. ವ್ಯಾಪಾರ ಚೆನ್ನಾಗಿ ನಡೆಯುತ್ತಿರಲಿಲ್ಲವಾದ್ದರಿಂದ ವಿಮೆಯ ಪ್ರಯೋಜನ ಪಡೆಯಲು ಅಂಗಡಿಗೆ ಬೆಂಕಿಬೀಳುವ ಹಾಗೆ ನೋಡಿಕೊಂಡನಂತೆ ಅದನ್ನು ನಡೆಸುತ್ತಿದ್ದ ಭೂಪ! ಆ ಅಂಗಡಿಯೊಂದಿಗೆ ಮೋದಿಯವರ ಅಂಗಡಿಯೂ ಭಸ್ಮವಾಗುವ ಪ್ರಸಂಗ. ಅಂಗಡಿ ಸುಟ್ಟು ಹೋದರೆ ತಾವು ಕೊಟ್ಟ ಹಣವೂ ಮುಳುಗಿ ಮೋಟರ್‌ಸೈಕಲ್ಲುಗಳಿಗೆ ಎಲ್ಲಿ ಸಂಚಕಾರ ಬರುತ್ತದೋ ಎಂದು ಕ್ಯಾಟೋನ್‌ಮೆಂಟಿನ ಪರಂಗಿ ಸಾಹೇಬರುಗಳು ಸಿಬ್ಬಂದಿಯೊಡನೆ ಓಡೋಡಿ ಬಂದು ಬೆಂಕಿಯನ್ನು ನಂದಿಸಿದರಂತೆ.

ಮೋಟಾರ್‌ಸೈಕಲ್ಲಿನಿಂದ ಬರುವ ಹೊಗೆ, ಹೊರಡಿಸುತ್ತಿದ್ದ ಪಟಾಕಿಯಂತಹ ಸದ್ದಿನಿಂದಾಗಿ (ಬಹುಶಃ ಹಳ್ಳಿಗರ ಭಾಷೆಯಲ್ಲಿ ಮೋಟಾರ್‌ಸೈಕಲ್ಲಿಗೆ 'ಫಟಫಟಿ' ಎಂಬ ಶಬ್ದ ಈ ಕಾರಣದಿಂದಲೇ ಬಂದಿರಬೇಕು) ಕುದುರೆಬಂಡಿಗಳು ದಿಕ್ಕುಪಾಲಾಗಿ ಓಡುತ್ತಿದ್ದವಂತೆ. ಆದರೆ ಇಂಗ್ಲೆಂಡಿನ ಸೈನ್ಯಾಧಿಕಾರಿಗಳೇ ಹೆಚ್ಚಾಗಿ ಈ ಮೋಟರ್‌ಸೈಕಲ್ಲುಗಳನ್ನು ಬಳಸುತ್ತಿದ್ದುದರಿಂದ ಏನೂ ಮಾಡುವ ಹಾಗಿರಲಿಲ್ಲ. ಕಾಲ ಸರಿದಂತೆ ಬಹುಶಃ ಆಂಗ್ಲರಿಗೆ ಹತ್ತಿರವಾಗುವ ಬಯಕೆಯಿಂದಲೋ ಅವರನ್ನು ಅನುಸರಿಸುವ ಖಯಾಲಿಯಿಂದಲೋ ಸಂಸ್ಥಾನಿಕರೂ ಈ 'ಫಟ್‌ಫಟಿ'ಗಳನ್ನು ಕೊಳ್ಳಲಾರಂಭಿಸಿದರು; ಅನಂತರ ಸಮಾಜದ ಆಢ್ಯರೂ ಅವರನ್ನನುಸರಿಸಿದರು. ಹೀಗಾಗಿ ಈ ಮೋಟರ್‌ಸೈಕಲ್ಲುಗಳಿಗಾಗಿದ್ದ ಪ್ರತಿರೋಧ ತಂತಾನೇ ಕುಗ್ಗಿತು. ಮುಂದೆ ಕರಗಿಯೂ ಹೋಯಿತು. ಮೋಟರ್ ಸೈಕಲ್ ಕೆಟ್ಟುನಿಂತರೆ ರಿಪೇರಿ ಮಾಡುವವರು ಯಾರು? ಎಂಬ ಪ್ರಶ್ನೆ ಬಂದಾಗ ರತನ್ ಮೋದಿ ಮೋಟರ್ ಸೈಕಲ್ಲಿನೊಡನೆ ಕೊಡಲಾಗುತ್ತಿದ್ದ ಪುಸ್ತಕವನ್ನೋದಿ ಸ್ವತಃ ಮೋಟರ್ ಸೈಕಲ್ ಬಿಚ್ಚಿ ರಿಪೇರಿ ಮಾಡುವುದನ್ನೂ ಕಲಿತರು.

ಜಗತ್ತಿನ ಬೇರೆ ಬೇರೆ ಭಾಗಗಳಿಂದ ಬೇರೆ ಬೇರೆ ಮಾದರಿಯ ಮೋಟರ್‌ಸೈಕಲ್‌ಗಳನ್ನು ತರಿಸುತ್ತಿದ್ದುದರಿಂದ ಆಗ 'ಮೋದೀಸ್ ಮೋಟರ್ ಮಾರ್ಟ್' (ಆಗಿನ ಹೆಸರು) ಅನ್ನು ನೋಡುವುದೇ ಒಂದು ಮೋಜು. ಯಾರಾದರೂ ಆ ಅಂಗಡಿಯಲ್ಲಿ ಹೊಕ್ಕರೆ ಪ್ರದರ್ಶನ ಶಾಲೆಯಲ್ಲಿ ಹೊಕ್ಕ ಅನುಭವವಾಗುತ್ತಿತ್ತು. ದೇಶಕ್ಕೆ ಸ್ವಾತಂತ್ರ್ಯ ಬಂತು. ಆಯಾತವನ್ನು ಕಡಿಮೆ ಮಾಡಬೇಕೆಂಬ ಸರಕಾರದ ಧೋರಣೆಯಿಂದಾಗಿ ಹೊರದೇಶಗಳಿಂದ ಮೋದ

ಲಿನ ಹಾಗೆ ಮೋಟರ್‌ಸೈಕಲ್ಲುಗಳನ್ನು ತರಿಸಿಕೊಳ್ಳಲು ಆಗುತ್ತಿರಲಿಲ್ಲ. ಹೀಗಿರುವಾಗ ಒಂದು ದಿನ, 'ನೀವೇ ಜಾವಾ ಮೋಟರ್ ಸೈಕಲ್ಲನ್ನು ಏಕೆ ತಯಾರಿಸಬಾರದು? ಅದಕ್ಕೆ ಅಗತ್ಯವಾದ ತಂತ್ರ ಜ್ಞಾನವನ್ನು ನಾವು ಒದಗಿಸುತ್ತೇವೆ' ಎಂಬ ಪತ್ರ ಆಗಿನ ಜೆಕೋಸ್ಲೋವಾಕಿಯದಿಂದ ರತನ್ ಮೋದಿಯವರಿಗೆ ಬಂತು. ಆ ವೇಳೆಗಾಗಲೇ ಅವರಿಗೆ ವಯಸ್ಸಾಗಿತ್ತು. ಕಾರಖಾನೆಯನ್ನು ಸ್ಥಾಪಿಸುವಷ್ಟು ಅನುಕೂಲವೂ ಇರಲಿಲ್ಲ. ಆದ್ದರಿಂದ ರತನ್ ಮೋದಿ ಈ ಪ್ರಸ್ತಾಪವನ್ನು ತಮ್ಮ ಸ್ನೇಹಿತರಾದ ಫರೂಕ್ ಇರಾಣಿಯವರಿಗೆ ಕಳಿಸಿಕೊಟ್ಟರು. ಅವರು ಮೈಸೂರು ಮಹಾರಾಜರ ನೆರವಿನಿಂದ ಕಾರಖಾನೆಯನ್ನು ಪ್ರಾರಂಭಿಸಿದರು. ಮೈಸೂರಿನಲ್ಲಿ 'ಐಡಿಯಲ್ ಜಾವಾ' ಪ್ರಾರಂಭವಾದದ್ದು ಹೀಗೆ.

ಹಾಗೆ ನೋಡಿದರೆ ಮೋಟರ್‌ಸೈಕಲ್ ಸ್ಪರ್ಧೆಯನ್ನು ದೇಶದಲ್ಲಿ ಮೊತ್ತಮೊದಲ ಬಾರಿಗೆ ಪ್ರಾರಂಭಿಸಿದವರೇ ರತನ್ ಮೋದಿಯವರು. ೧೯೦೪ರಲ್ಲಿ ನಡೆದ ಈ ಸ್ಪರ್ಧೆಯಲ್ಲಿ ಸ್ಪರ್ಧಾಳುಗಳು ಪುಣೆಯಿಂದ ಸಾತಾರಾದವರೆಗಿನ ಅಂತರವನ್ನು ಕ್ರಮಿಸಬೇಕಾಗಿತ್ತು. ೧೪ ಜನರು ಆ ಸ್ಪರ್ಧೆಯಲ್ಲಿ ಭಾಗವಹಿಸಿದ್ದರಂತೆ. ಹಳೆಗಾಲದ ಕುರುಹಾಗಿ ಆ ಸ್ಪರ್ಧೆಯ ಫೋಟೋ ಇನ್ನೂ ಅಂಗಡಿಯಲ್ಲಿ ಇದೆ.

'ಲೂನಾ ಮ್ಯಾಗ್ನಮ್'ಅನ್ನು ತಯಾರಿಸುವ 'ಕೈನೆಟಿಕ್ ಇಂಜನಿಯರಿಂಗ್'ನವರು ಸ್ಪರ್ಧೆ ಏರ್ಪಡಿಸಿದಾಗ ಲೂನಾ ಮ್ಯಾಗ್ನಂ 'ಡೆಕ್ಕನ್ ಕ್ವೀನ್' ಅನ್ನು ಹಿಂದೆ ಹಾಕಿದ್ದು ನಿಮಗೆಲ್ಲ ತಿಳಿದಿರಬೇಕು. ಆದರೆ ಇಂಥಾ ಸ್ಪರ್ಧೆಯ ವಿಷಯ ಹೊಸದೇನೂ ಅಲ್ಲ. ೧೯೩೦ರಷ್ಟು ಹಿಂದೆಯೆ ರತನ್ ಮೋದಿಯವರ ಪಟ್ಟಶಿಷ್ಯನಾದ ಸದಾ ಧುಮಾಳ್ ತನ್ನ ಮೋಟರ್‌ಸೈಕಲ್ಲಿನಿಂದ ಪುಣೆ-ಮುಂಬೈ ಮೇಲನ್ನು



೧೯೨೧-೨೨ರಲ್ಲಿ ಮೋದಿಯವರು ಮಾರುತ್ತಿದ್ದ ಪೋರ್ಡ್ ಮಾದರಿಯ ಮೋಟರ್‌ಸೈಕಲ್.

ಹಿಂದೆ ಹಾಕಿದ್ದನಂತೆ.

ಸ್ಪರ್ಧೆಗಳನ್ನು ಏರ್ಪಡಿಸುವಲ್ಲೂ ಅವುಗಳಲ್ಲಿ ಭಾಗವಹಿಸುವಲ್ಲೂ ಈ ಸದಾ ಧುಮಾಳ್ ಮೋದಿಯವರಿಗೆ ಬಲಗೈ ಬಂಟನಂತೆಯೇ ಇದ್ದ. ೧೯೩೩ರಲ್ಲಿ ಭೋರ್ ಘಟ್ಟವನ್ನು ಏರುವ ಸ್ಪರ್ಧೆಯನ್ನವರು ಏರ್ಪಡಿಸಿದಾಗ ಸದಾ ಧುಮಾಳ್ ಕುತ್ತಿಗೆಯ ಎಲವು ಮುರಿದಿದ್ದರೂ ಸ್ಪರ್ಧೆಯಲ್ಲಿ ಗೆದ್ದು ಬಂದನಂತೆ!

ಮೋಟರ್‌ಸೈಕಲ್ಲುಗಳ ಬಗೆಗೆ ಜನ ಸಾಮಾನ್ಯರಲ್ಲಿ ಆಸಕ್ತಿಯನ್ನು ಕೆರಳಿಸಲು ರತನ್ ಮೋದಿ ಅನೇಕ ಕ್ಲಬ್ಬುಗಳನ್ನು ಸ್ಥಾಪಿಸಿದ್ದರೂ ಮುಖ್ಯವಾಗಿ ಹೆಸರಿಸಬೇಕಾದ್ದು ೧೯೩೨ರಲ್ಲಿ ಸೈನ್ಯಾಧಿಕಾರಿಗಳ ನೆರವಿನಿಂದ ಸ್ಥಾಪಿಸಲ್ಪಟ್ಟ 'ಆರ್ಡನನ್ಸ್ ಮೋಟರ್ ಸೈಕಲ್ ಕ್ಲಬ್' (ಸೈನ್ಯಾಧಿಕಾರಿಗಳೇ ಕಡಿಮೆಯಾಗಿ, ಜನ ಸಾಮಾನ್ಯರೇ ಹೆಚ್ಚಾದಾಗ ಕ್ಲಬ್ಬಿನ ಹೆಸರನ್ನು 'ಡೆಕ್ಕನ್ ಮೋಟರ್‌ಸೈಕಲ್ ಸ್ಪೋರ್ಟ್ಸ್ ಕ್ಲಬ್' ಎಂದು ಬದಲಾಯಿಸಲಾಯಿತು) ಅನ್ನು ೧೯೪೯ ರಿಂದಲೂ ಅದು ಲೋಹೇಗಾಂವ್‌ನಿಂದ ಸ್ಪರ್ಧೆಯನ್ನು ಪ್ರಾರಂಭಿಸುತ್ತಿತ್ತು. ೧೯೬೫ರಲ್ಲಿ ಪಾಕಿಸ್ತಾನದೊಡನೆ ಯುದ್ಧ ನಡೆದಾಗ ಮಿಲಿಟರಿ ಕಾರಣಗಳಿಂದಾಗಿ ಸ್ಪರ್ಧೆಯ ಸ್ಥಾನವನ್ನು ಬದಲಾಯಿಸಲಾಯಿತು. ಅನಂತರ ಆ ಸ್ಪರ್ಧೆಯಲ್ಲಿ ಮೊದಲಿನ ಆಕರ್ಷಣೆ ಉಳಿಯಲಿಲ್ಲ. ಸ್ಪರ್ಧೆ ನಡೆಸುವ ಪರಿಪಾಠ ಕೊನೆಗೊಳ್ಳುವುದರೊಳಗೆ ರತನ್ ಮೋದಿ ತಮ್ಮ ಆಲನೇಯ ವರ್ಷದಲ್ಲಿ ಇಹಲೋಕ ಯಾತ್ರೆಯನ್ನು ಮುಗಿಸಿದ್ದರು.

ದೇಶದ ಅತಿ ಹಳೆಯ ಮೋಟರ್‌ಸೈಕಲ್ ಅಂಗಡಿಯಾದ 'ಮೋದಿ ಆ್ಯಂಡ್ ಕಂಪನಿ' ಇನ್ನೂ ಹಾಗೆಯೆ ಇದೆ. ಅವರ ಮೊಮ್ಮಗನಾದ, (ಮಗಳ ಮಗ, ರತನ್ ಮೋದಿಯವರಿಗೆ ಮಗನಿರಲಿಲ್ಲ) ಅವರದೇ ಹೆಸರನ್ನು ಹೊತ್ತಿರುವ ರತನ್ ಮೋದಿ ಪಾರ್ಶ್ವವಾಯು ಪೀಡಿತರಾದರೂ ಮೂರು ಗಾಲಿಯ ಸೈಕಲ್ಲಿನಲ್ಲಿ ಕುಳಿತು ಅಂಗಡಿ ನಡೆಸುತ್ತಾರೆ. ವ್ಯವಹಾರವನ್ನು ನೋಡಿಕೊಳ್ಳಲು ಅವರ ಸಹೋದರ ಸಹಾಯ ಮಾಡುತ್ತಾನೆ. ಮೋಟರ್ ಸೈಕಲ್ ಇತಿಹಾಸದೊಂದಿಗೆ ಹಾಸುಹೊಕ್ಕಾಗಿರುವ ಈ ಅಂಗಡಿ, ಅಲ್ಲಿ ಹೊಕ್ಕವರಿಗೆ ಒಂದು ರೀತಿಯಲ್ಲಿ ಭೂತಕಾಲದ ದರ್ಶನವನ್ನೇ ಮಾಡಿಸುತ್ತದೆ. ಕುತೂಹಲಕ್ಕಾದರೂ ಸರಿ, ಅಲ್ಲಿ ಹೋದವರು ಇತಿಹಾಸದ ಒಂದು ತುಣುಕನ್ನು ತಮ್ಮ ಮನಸ್ಸಿನಲ್ಲಿ ಇರಿಸಿಕೊಳ್ಳದೇ ಹಿಂದಿರುಗುವುದಿಲ್ಲ.

---

## ಮೊಲೆಯೂಡಿಸಿದರೆ ಶಿಕ್ಷೆ!

ಅಮೆರಿಕದಲ್ಲಿ ಯಾವಳಾದರೂ ಮಹಿಳೆ ಕೂಸಿಗೆ ಸಾರ್ವಜನಿಕ ಸ್ಥಳದಲ್ಲಿ ಕೂತು ಮೊಲೆಯೂಡಿಸಿದರೆ ಪೊಲೀಸ್ ಅಥವಾ ಆ ಜಾಗದ ಗಾರ್ಡ್ ಬಂದು ಎಬ್ಬಿಸಿ ಅಟ್ಟುತ್ತಾನೆ. ಆಕೆ ಹೋಗಲಾರೆನೆಂದು ಮೊಂಡು ಹಿಡಿದರೆ ಜೈಲಿಗೂ ಹಾಕುತ್ತಾನೆ. ಏಕೆಂದರೆ ಹೆಂಗಸು ಸಾರ್ವಜನಿಕ ಸ್ಥಳದಲ್ಲಿ ತನ್ನ ಎದೆಯನ್ನು ಪ್ರದರ್ಶಿಸುವುದು "ಅಸಹ್ಯ"ವಂತೆ, "ನಗ್ನತೆ"ಯಂತೆ. (ಆದರೆ ಅಲ್ಲಿ ಎಷ್ಟೋ ಕಡೆ ನಗ್ನರ ಕಾಲನಿಗಳಿವೆ; ನಗ್ನರಿಗಾಗಿಯೇ ಇರುವ ಬೀಚ್‌ಗಳಿವೆ. ಅಂಥಲ್ಲಿ ಮಕ್ಕಳಿಂದ ಮುದುಕರವರೆಗೂ ಎಲ್ಲರೂ ದಿಗಂಬರರೇ.)

ಎಲ್ಲೋ ಒಂದೆಡೆ ಪಾರ್ಕ್ ಮಾಡಿದ ಕಾರಿನಲ್ಲಿ ಕೂತು ತಾಯಿ ತನ್ನ ಮಗುವಿಗೆ ಮೊಲೆಕುಡಿಸುವ ಹಾಗೂ ಇಲ್ಲ. ಈಗ ಈ ನೀತಿಯ ವಿರುದ್ಧ ಅಲ್ಲಿಯ ಮಹಿಳೆಯರು ಸಿಡಿದೆದ್ದಿದ್ದಾರೆ. "ಎದೆ ಹಾಲು ಮಕ್ಕಳಿಗೆ ಪ್ರಕೃತಿದತ್ತ, ದೈವದತ್ತ ಆಹಾರ. ಅದನ್ನು ಇಂಥಲ್ಲಿ ಕೊಡಬೇಕು, ಇಂಥಲ್ಲಿ ಕೊಡಬಾರದು ಎಂದು ಹೇಳುವುದು ಸರಿಯಲ್ಲ" ಎಂದು ಅವರ ವಾದ.

• 'ಮಾಧವಪ್ರಿಯೆ'

ಆಹಾರೌಷಧಿ

• ಕೆ.ಜಿ. ಅರಳಿಕಾಯಿ

# ಮಧುಮೇಹ ನಿಯಂತ್ರಣಕ್ಕೆ ಮೆಂಥ್ಯ ಮದ್ದು

ಸಿಹಿಮೂತ್ರ ರೋಗವನ್ನು ತಹಬಂದಿಗೆ ತಂದುಕೊಳ್ಳುವಲ್ಲಿ ನೇರಳೆ ಹಣ್ಣು ಮತ್ತು ಹಾಗಲಕಾಯಿಗಳಿಗಿಂತಲೂ ಮೆಂಥ್ಯದ ಕಾಳು ಅಧಿಕ ಪರಿಣಾಮಕರವೆಂಬುದು ಪ್ರಯೋಗಗಳಿಂದ ಸಿದ್ಧವಾಗಿದೆ. ಭಾರತೀಯರ ನಿತ್ಯ ಬಳಕೆಯ ಮಸಾಲೆ ವಸ್ತುಗಳಲ್ಲೊಂದಾಗಿರುವ ಮೆಂಥ್ಯದ ಕಾಳು ಹೊಟ್ಟೆ ಜಾಡಿಸುವಿಕೆ, ಅತಿಭೇದಿಗಳನ್ನು ದೂರ ಮಾಡುವಂತೆಯೆ ಕಫನಾಶಕವೂ ಜ್ವರಹಾರಿಯೂ ಶೀತಕಾರಿಯೂ ಆಗಿದೆ.

ಮಧುಮೇಹದಿಂದ ಬಳಲುವವರ ರಕ್ತ ಮತ್ತು ಮೂತ್ರದಲ್ಲಿನ ಸಕ್ಕರೆಯ ಪ್ರಮಾಣವನ್ನು ಮೆಂಥ್ಯದ ಕಾಳು ಸೇವನೆ ಕಡಿಮೆ ಮಾಡುವದಲ್ಲದೆ ಧಮನಿಗಳಲ್ಲಿ ಕೊಲೆಸ್ಟರಾಲ್ ಸಂಗ್ರಹಗೊಳ್ಳುವುದನ್ನೂ ನಿಯಂತ್ರಿಸುತ್ತದೆ. ಹೀಗಾಗಿ ಹೃದಯಾಘಾತದ ಸಂಭವವನ್ನು ಮೆಂಥ್ಯ ಮುಂದೂಡುತ್ತದೆ.

ಮಧುಮೇಹಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ ಸಿಹಿಮೂತ್ರದ ತೀವ್ರತೆಯನ್ನು ಅನುಲಕ್ಷಿಸಿ ಮೆಂಥ್ಯದ ಕಾಳಿನ ಸೇವನೆಯ ಪ್ರಮಾಣ ನಿಗದಿಗೊಳಿಸಲ್ಪಡುತ್ತದೆ. ಪ್ರತಿ ವ್ಯಕ್ತಿಗೆ ೨೫ ಗ್ರಾಮ್‌ನಿಂದ ೧೦೦ ಗ್ರಾಮ್‌ಗಳವರೆಗೂ ಇದು ಸರಿಯುತ್ತಿರುತ್ತದೆ. ಇದನ್ನು ಕಾಳುಗಳ ರೂಪದಲ್ಲಾದರೂ ತೆಗೆದುಕೊಳ್ಳಬಹುದು ಇಲ್ಲವೆ ಪುಡಿ ಮಾಡಿಯೂ ಸೇವಿಸಬಹುದು. ಇಡೀ ಕಾಳನ್ನು ಸೇವಿಸುವುದಾದರೆ ಸುಮಾರು ೧೨ ಗಂಟೆಗಳಷ್ಟು ಕಾಲ ಅವನ್ನು ನೀರಲ್ಲಿ ನೆನೆಸಿಡಬೇಕಾಗುತ್ತದೆ. ನೆನೆದ ಮೆಂಥ್ಯದ ಕಾಳುಗಳನ್ನು ಜಗಿಜಗಿದು ತಿನ್ನುವುದರ ಜತೆಗೆ ಅವನ್ನು ನೆನೆಸಿಟ್ಟ ನೀರನ್ನು ಕುಡಿದರೆ ಇನ್ನೂ ಒಳ್ಳೆಯದೆಂದು ತಜ್ಞರು ಹೇಳುತ್ತಾರೆ. ಇನ್ನು ಪುಡಿಯ ವಿಷಯ. ಇದನ್ನು ಕೆನೆರಹಿತ ಮಜ್ಜಿಗೆಯಲ್ಲಿ ಬೆರೆಸಿ ಕುಡಿಯಬೇಕು. ಇದಕ್ಕೆ ನಿಯಮಿತ ಅವಧಿಯ ಕಟ್ಟುಪಾಡು ಅತ್ಯಗತ್ಯ. ಅಂದರೆ ಮಾತ್ರ ಸೇವಿಸಿದವರಿಗೆ ಇದರ ಲಾಭ ತಟ್ಟುತ್ತದೆ.

ಮೆಂಥ್ಯದ ಕಾಳುಗಳ ಸೇವನೆಯನ್ನು ಆಯಾ ವ್ಯಕ್ತಿಯ ಅನುಕೂಲಾನುಸಾರ ದಿನದಲ್ಲಿ ಎರಡು ಸಾರೆ ಯಾವುದೇ ವೇಳೆಯಲ್ಲಿ ಮಾಡಬಹುದು. ಆದರೆ ಒಂದು ವೇಳೆ ನೀವು ಊಟಕ್ಕೆ ಮುನ್ನ ಸೇವಿಸುತ್ತೀರೆಂದಾದರೆ ಕನಿಷ್ಠ ಅರ್ಧಗಂಟೆ ಮೊದಲು ಹಾಗೂ ಊಟದ ನಂತರ ಸೇವಿಸುತ್ತೀರೆಂದಾದರೆ ಕನಿಷ್ಟ ಅರ್ಧಗಂಟೆ ಬಿಟ್ಟು ಕಾಳು

ಗಳನ್ನು ನುಂಗಬೇಕು. ಮೆಂಥ್ಯದ ಕಾಳಿನ ಪುಡಿ ಬೆರೆಸಿ ಮಾಡಿದ ರೊಟ್ಟಿ-ಚಪಾತಿಗಳಿಂದ ನಿಮಗೆ ಲಾಭವಿದೆ. ಜೊತೆಗೆ ಹಸಿರು ತರಕಾರಿಗಳ ಸಾಗು, ಪಲ್ಯಗಳನ್ನೂ ಸ್ವೀಕರಿಸಿ. ಇದರಿಂದ ಹೆಚ್ಚಿನ ಪೌಷ್ಟಿಕತೆ ದೊರೆಯುತ್ತದಲ್ಲದೆ ಮಲಬದ್ಧತೆಯೂ ದೂರವಾಗುತ್ತದೆ. ಮಧುಮೇಹವಿದ್ದವರಲ್ಲಿ ಮಲಬದ್ಧತೆಯ ತೊಂದರೆ ಹೆಚ್ಚು.

ಈ ಕಾಳಿನಲ್ಲಿ ಶೇಕಡಾ ೬ರ ಪ್ರಮಾಣದಲ್ಲಿ ಕಹಿಯಾದ ಮಂದ ತೈಲದ ಅಂಶವಿದೆ. ಇದಲ್ಲದೆ ಶೇಕಡಾ ೦.೦೨ ಬಾಷ್ಪಶೀಲ ತೈಲ, ಶೇಕಡಾ ೭ರಷ್ಟು ಅಬಾಷ್ಪ ಶೀಲ ತೈಲ ಹಾಗೂ ಅನೇಕ ರೀತಿಯ ಲಾಭಕಾರಿ ಎಂಜೈಮುಗಳೂ ದೊರೆಯುತ್ತವೆ. ಒಣಗಿದ ೧೦೦ ಗ್ರಾಂ ಮೆಂಥ್ಯದ ಕಾಳುಗಳಲ್ಲಿ ಈ ಕೆಳಕಂಡ ಪ್ರಮಾಣದಲ್ಲಿ ಪೋಷಕತತ್ವಗಳಿರುತ್ತವೆ: ಪ್ರೋಟೀನ್ ೨೬.೨ ಗ್ರಾಮ್, ಕೊಬ್ಬು ೫.೮ ಗ್ರಾಮ್, ಕಾರ್ಬೋಹೈಡ್ರೇಟ್ ೪೪.೧ ಗ್ರಾಮ್, ಕ್ಯಾಲ್ಸಿಯಂ ೧೬೦ ಮಿಲಿಗ್ರಾಮ್, ಫಾಸ್ಫೋರಸ್ ೩೭೦ ಮಿಲಿಗ್ರಾಮ್, ಕಬ್ಬಿಣ ೧೪.೧ ಮಿಲಿಗ್ರಾಮ್, ಬಿ.ಕೆರೋಟಿನ್ ೯೬ ಮೈಕ್ರೊಗ್ರಾಮ್, ಥೈಮಿನ್ ೦.೩೪ ಮಿಲಿಗ್ರಾಮ್, ರೀಬೋಫ್ಲೇಬಿನ್ ೦.೨೯ ಮಿಲಿಗ್ರಾಮ್ ಮತ್ತು ನಿಯಾಸಿನ್ ೧.೧ ಮಿಲಿಗ್ರಾಮ್, ಮೆಂಥ್ಯದ ಸೊಪ್ಪು ಕೂಡ ಪಚಡಿಯ ರೂಪದಲ್ಲಿ ಬಳಸಲ್ಪಡುತ್ತಿರುವುದು ನಿಮಗೆಲ್ಲ ಗೊತ್ತೇ ಇದೆ. ಇದರಲ್ಲಿ ಕ್ಯಾಲ್ಸಿಯಂ, ಕಬ್ಬಿಣ, ಕೆರೋಟಿನ್ ಮತ್ತು ಎಸ್ಕಾರ್ಬಿಕ್ ಆಮ್ಲಗಳ ಪ್ರಮಾಣ ಹೆಚ್ಚಿಗಿರುತ್ತದೆ.

ಮಧುಮೇಹವುಳ್ಳವರ ಮೇಲೆ ಮೆಂಥ್ಯದ ಕಾಳು ಸೇವನೆಯ ಪರಿಣಾಮ ಕುರಿತು ಸತತ ಒಂದು ವರ್ಷದವರೆಗೆ ನಡೆಸಿದ ಅಧ್ಯಯನ ನಿರೀಕ್ಷಣೆಯಿಂದ ಅವರ ರಕ್ತದಲ್ಲಿನ ಸಕ್ಕರೆಯ ಪ್ರಮಾಣದಲ್ಲಿ ಗಣನೀಯ ಇಳಿತ ಕಂಡುಬಂತು. ಇಷ್ಟೇ ಅಲ್ಲ, ಮೆಂಥ್ಯ ನಾರುಮಯವಾಗಿರುವುದರಿಂದ ಇದರ ಸೇವನೆ ಆ ರೋಗಿಗಳಲ್ಲಿನ ಕೊಲೆಸ್ಟರಾಲ್ ಪ್ರಮಾಣವನ್ನು ನಿಯಂತ್ರಿಸುವುದರ ಜತೆಗೆ ಅವರ ಪಚನ ವ್ಯವಸ್ಥೆಯೂ ಸಮರ್ಪಕವಾಗಿರುತ್ತದೆ. ●

ಅನುಭವ

# "ಕಾಡು ಕಾಡೆಂದರೆ...."

• ಹೇಮಚಂದ್ರ ಅಕ್ಕಿ

ಶಿವಮೊಗ್ಗದಿಂದ ಆಗುಂಬೆಯ ಮೇಲೆ ಶಟಲ್ ಬಸ್ಸಿನಲ್ಲಿ ಮಂಗಳೂರಿಗೆ ಹೋಗಬೇಕಾದರೆ ನೀವು ಭಾರತೀಪುರ ಅಶ್ವತ್ಥಕಟ್ಟೆಯ ಪೋಸ್ಟಾಫೀಸು ದಾಟಿಯೇ ೨-೩ ಕಿಲೋಮೀಟರು ಮುಂದೆ ಇರುವ ತೀರ್ಥಹಳ್ಳಿಯಲ್ಲಿ ಕಾಫಿ ಕುಡಿದು ಹೋಗಬೇಕು. ಭಾರತೀಪುರ ಅಂಥದೇನೂ ಮಹತ್ವದ ಸ್ಥಳವಲ್ಲದಿದ್ದರೂ ನೀವು 'ಈ ಸ್ಥಳವನ್ನು ಎಲ್ಲಿಯೋ ನೋಡಿದ್ದೇನಲ್ಲ' ಎಂದುಕೊಳ್ಳುವುದಂತೂ ಖಂಡಿತ. ನೀವಂದುಕೊಳ್ಳುವುದು ಸರಿಯೆ. ಯಾಕೆಂದರೆ ಇಲ್ಲಿ ಸಾಕಷ್ಟು ಸಿನಿಮಾಗಳ ಶೂಟಿಂಗ್ ಆಗಿದೆ. ಮುಖ್ಯ ರಸ್ತೆಗೆ ಹತ್ತಿಕೊಂಡೇ ಒಂದು ಹಳೆಯ ಅಶ್ವತ್ಥಕಟ್ಟೆ ಇದೆ. ಅದರ ಹಿಂದೆಯೇ ಪೋಸ್ಟಾಫೀಸು ಹಾಗೂ ಪೋಸ್ಟ್‌ಮಾಸ್ತರರ ಮನೆ ಇದೆ. ಜನ ಸಂಚಾರ ಬಹಳ ಕಡಿಮೆ. ಕಟ್ಟೆಯ ಪಕ್ಕದಲ್ಲಿಯೇ ಒಂದು ಜಂಗಲ್ ರಸ್ತೆ, ಅದರ ಮಗ್ಗಲು ಜುಳು ಜುಳು ಹರಿಯುವ ಹಳ್ಳ. ಈ ಹಳ್ಳದ ಹತ್ತಿರ ಸೂರ್ಯನ ಕಿರಣವೂ ಪ್ರವೇಶಿಸದಂಥ ಭಾರತೀಯ ಗಿಡ ಬಳ್ಳಿ, ಕಂಟಿಗಳಿರುವ ಸಣ್ಣ ಕಾಡು.

ನಾನಲ್ಲಿಗೆ ಹೋದಾಗ ಬಿಸಿಲು ಸಾಕಷ್ಟು ಜೋರಾಗಿಯೇ ಇತ್ತು. ಕಲ್ಲಿನಂತೆ ಕುಳಿತುಕೊಳ್ಳುವ ಅಭ್ಯಾಸ ನನಗೆ. ತಂಪಾದ ಗಿಡದ ನೆರಳಲ್ಲಿ ಕಟ್ಟೆಯ ಮೇಲೆ ನಾನು ಒಂದರ್ಧ ಗಂಟೆ ಕುಳಿತಿರಬಹುದು. ಪಕ್ಷಿಗಳು (ಮಹಾ ಕಿಲಾಡಿಗಳು; ಈ ಕಡೆ ಜನರು ಶಿಕಾರಿ ಮಾಡುತ್ತಾರೆಂದು ಗೊತ್ತಾಗಿ ಎಲೆಗಳಲ್ಲಿ ಅಡಗುವುದೇ ಹೆಚ್ಚು) ಎಲೆಗಳ ಮರೆಯಿಂದ ಒಂದೊಂದಾಗಿ ಹೊರಬಂದುವು. ಅವುಗಳ ಶಬ್ದ, ಸಿಳ್ಳು, ಚಿಕ್, ಚಿಕ್ ಹಾಡು ಕೂಗು ವಾತಾವರಣದಲ್ಲಿ ತುಂಬಿತು. ಮುಖ್ಯ ರಸ್ತೆ ದಾಟಿ ಕಟ್ಟೆಯ ಎದುರಿಗೆ ಒಂದು ಚಿಕ್ಕ ಕೊಳವಿದೆ. ಕೊಳದ ಸುತ್ತ ದಟ್ಟವಾಗಿ ಬಿದಿರು ಮೆಳೆಗಳು. ಒಂದು ಕಾಡಿನ ಬೆಂಕಿ ಮರ. (FlameofForest,) ಒಂದು ಎಲೆ ಕೂಡ ಇರದೇ ಬರೀ ಗುಲಾಬಿ ಬಣ್ಣವಿರುವ ಹೂವಿನ ಗಿಡ. ಇವಕ್ಕೆ ಹತ್ತಿಯೇ ಒಂದು ಸಣ್ಣ ದಿನ್ನೆಯಂಥ ಗುಡ್ಡ ಇದೆ. ಈ ಗುಡ್ಡದ ಮೇಲಿನ ಪ್ಲಾಸ್ಟಿಕ್ ಗಿಡಗಳ (Acacia), ನೀಲಗಿರಿ ಗಿಡಗಳ ಪ್ಲಾಂಟೇಶನ್ ನೋಡಿ ನನ್ನ ಸಂತೋಷವೆಲ್ಲ ತಕ್ಷಣ ಮಾಯವಾಯಿತು. ನಾನು ಈ ಗಿಡಕ್ಕೆ 'ಪ್ಲಾಸ್ಟಿಕ್ ಗಿಡ' ಎಂದು ಹೆಸರಿಡಲು ಒಂದು ದೊಡ್ಡ ಕಾರಣವಿದೆ. ಇವುಗಳ ಎಲೆಯನ್ನು ದನ ಬಿಡಿ, ಕತ್ತೆ ಕೂಡ ತಿನ್ನುವುದಿಲ್ಲ. ಆ ಎಲೆಗಳು ಗೊಬ್ಬರ (Compost) ಕೂಡ ಆಗುವುದಿಲ್ಲ.

ಅಶ್ವತ್ಥಕಟ್ಟೆಯ ಜಂಗಲ್ ರಸ್ತೆಯ ಹಿಂದೆ ೪-೫ ಕಿಲೋಮೀಟರ್ ದೂರದಲ್ಲಿ ಮೊದಲು ಸಾಕಷ್ಟು ದಟ್ಟ ಕಾಡು ಇತ್ತು. ಸಣ್ಣವನಿದ್ದಾಗ ತಾನು ಇಲ್ಲಿ ಹುಲಿಗಳನ್ನು ನೋಡಿದ್ದಾಗಿ ನನ್ನ ಹಳೆಯ ಮಿತ್ರ ಇಂಬ್ರಗೋಡಿನ ಸೀನಣ್ಣ (ಶ್ರೀನಿವಾಸ) ಹೇಳಿದಾಗ ನಾನು ನಂಬಲಿಲ್ಲ. ಯಾಕೆಂದರೆ ಈಗ ಅಲ್ಲೆಲ್ಲ ನಂದಿ, ಹಲಸು, ಬೀಟೆ ಮರಗಳ ಬದಲು ಬೋಳು ಗುಡ್ಡಗಳ ಮೇಲೆ ಕೆ.ಇ.ಬಿ.ಯ ಭಯಂಕರ ತಂತಿ ಹಾಕಿದ ಕಬ್ಬಿಣದ ಕಂಬಗಳು, ಕುರುಚಲು ಕಾಡು, ಅರ್ಧಸತ್ತ ಹಾಗೆ ಕಾಣುವ ಬಿದಿರು ಮೆಳೆ, ಕಪ್ಪು ದನಗಳನ್ನು ಬಿಟ್ಟರೆ ಏನೂ ಕಾಣುವುದಿಲ್ಲ. ಇಲ್ಲಿಯ ಪೋಸ್ಟ್‌ಮನ್ ನನಗೆ, "ನಮ್ಮ ಸಂಬಂಧಿಕರ ಮನೆ ಹೆಬ್ರಿ. ಸೀತಾ ನದಿ

## ಆಮೆ ಹೋಟೇಲು!

**ಅಮೇರಿಕದ 'ಗೋಫರ್' ಎಂಬ ಕಲ್ಲು ಆಮೆ ತಾನಿರುವ ಮರಳು ಪ್ರದೇಶದಲ್ಲಿ ತನ್ನ ಮುಂಗಾಲಿನ ಉಗುರುಗಳಿಂದ ೩೦ ಅಡಿ ಉದ್ದ ಆರು ಅಡಿ ಅಗಲವಿರುವ ನೆಲದಲ್ಲಿ ಒಂದು ಉದ್ದವಾದ, ಕೆಳಗೆ ಡೊಂಕಾದ ಸುರಂಗವನ್ನು ಕೊರೆದು ಗೋಲಾಕಾರದ ೩-೪ ಕೋಣೆಗಳನ್ನು ಮಾಡಿಕೊಳ್ಳುತ್ತದೆ. ಬಿಸಿಲು ಏರಿದಾಗ ತಾನು ಕಡೆಯ ತಂಪಾದ ಕೋಣೆಯಲ್ಲಿ ವಿಶ್ರಾಂತಿ ಪಡೆಯುತ್ತದೆ. ಅದೇ ಹೊತ್ತಿಗೆ ಕೋಣೆಗಳಲ್ಲಿ ಕಾದು ಬೆಕ್ಕಿನಷ್ಟಿರುವ ಒಪೊಸ್ಸಮ್ ಎಂಬ ಇಲಿ, ಗೋಫರ್ ಕಪ್ಪೆ, ಸಣ್ಣ ಇಲಿ ಮುಂತಾದ ಪ್ರಾಣಿಗಳು, ವಿರಮಿಸಿ ಸಂಜೆಗೆ ಆಹಾರಾನ್ವೇಷಣೆಗೆಂದು ಹೊರಬೀಳುತ್ತವೆ. ಅಲ್ಲಿಯ ಜನ ಇಂಥ ಸುರಂಗಗಳಿಗೆ 'ಆಮೆಹೋಟೇಲು' ಎಂದೇ ಕರೆಯುತ್ತಾರೆ.**

ದಾಟಿ ದಟ್ಟವಾದ ಕಾಡಿನಲ್ಲಿ ೮-೧೦ ಕಿಲೋಮೀಟರ್ ನಡೆದುಕೊಂಡು ಹೋಗಿ ಒಂದೆರಡು ದಿವಸ ಇದ್ದರೆ ಖಂಡಿತವಾಗಿ ಹುಲಿ, ಕಾಡು ಕೋಣ, ಕಾಟಿ (ಕಾಡೆಮ್ಮೆ), ಚುಕ್ಕೆ ಜಿಂಕೆಗಳು, ಕಡವೆ (ಸಾರಂಗ), ಬೊಗಳುವ ಬರ್ಕ್ ಜಿಂಕೆ, ನವಿಲು, ಸಾವಿರಾರು ಬಣ್ಣ ಬಣ್ಣದ ಹಕ್ಕಿಗಳನ್ನು ನೀವು ನೋಡಬಹುದು," ಎಂದು ಹೇಳಿದಾಗ, ಮಲೆನಾಡಿನ ಇಸ್ಪೀಟು ಪಂಡಿತರು ತಾವು ಸೋತ ಸಾವಿರಾರು ರೂಪಾಯಿಗಳನ್ನು ಆಟದಲ್ಲಿ ಮತ್ತೆ ಗೆದ್ದಂಥ ಸಂತೋಷ ನನಗಾಯಿತು.

ಪಕ್ಷಿಗಳ ಬಗ್ಗೆ ಅಭ್ಯಾಸ ಮಾಡಬೇಕಾದರೆ ಕಾಡಿಗೆ ಸಂಬಂಧಿಸಿದ ಕೆಲವು 'ಹಠ ಯೋಗ'ಗಳಿವೆ. ಅಂದರೆ ಗಂಟೆಗಟ್ಟಲೆ ಅಲುಗಾಡದೆ ಗಿಡದ ಮರೆಗೋ, ಮರದ ಕಾಂಡಕ್ಕೆ ಬೆನ್ನು ಹಚ್ಚಿಯೋ ನಿಲ್ಲುವುದು; ಕತ್ತನ್ನು ಸಾವಕಾಶ ತಿರುಗಿಸುತ್ತಾ ಎಲ್ಲಿಯಾದರೂ ಚಲನವಲನವಿದೆಯೊ? ಎಂದು ಪ್ರತಿಯೊಂದು ಗಿಡ, ಎಲೆ, ಹೂವು, ನೀರು, ಕಲ್ಲು, ಗುಡ್ಡ, ಆಕಾಶ, ರಸ್ತೆಗಳು, ಎಡ, ಬಲ ಎದುರು ನೋಡುವುದು; ಎಲ್ಲಿಯಾದರೂ ಸಪ್ಪಳವಿದೆಯೇ ಎಂದು ಅತಿ ಮೆಲ್ಲಗೆ ಉಸಿರಾಡುತ್ತ ಆಲಿಸುವುದು; ಒಂದೇ ಕಡೆ ಗಂಟೆಗಟ್ಟಲೆ ಕುಳಿತುಕೊಳ್ಳುವುದು ಮುಂತಾದವು. ಆಗ ಪಕ್ಷಿಗಳು ಒಂದೊಂದಾಗಿ ನಾಚಿಕೆ, ಭಯ ಬಿಟ್ಟು ಹೊರಬಂದು ಹಾರುತ್ತ, ಹಾಡುತ್ತ, ನೆಗೆಯುತ್ತ ಬೇಟೆಯಾಡಲು ಪ್ರಾರಂಭಿಸುತ್ತವೆ. ನಮಗೆ ಹೇಗೆ ಮೈಸೂರು ಕನ್ನಡ, ಧಾರವಾಡ ಕನ್ನಡ, ಗುಲಬರ್ಗಾ ಕನ್ನಡ ಎಂದು ವ್ಯತ್ಯಾಸವಿದೆಯೋ ಹಾಗೆ ಪಕ್ಷಿಗಳಲ್ಲಿ ಕೂಡ ಪ್ರದೇಶದಿಂದ ಪ್ರದೇಶಕ್ಕೆ ಅವುಗಳ ಶಬ್ದ, ಕೂಗು, ಹಾಡುಗಳಲ್ಲಿ ಭೇದಗಳಿವೆಯೆಂದು ಗೊತ್ತಾಗಿದೆ.

ಪಕ್ಷಿಗಳು ಯಾಕೆ ಹಾಡುತ್ತವೆ? ಕೇವಲ ಸಂತೋಷಕ್ಕಾಗಿಯಂತೂ ಖಂಡಿತ ಅಲ್ಲ. ಕೆಲವು ಪಕ್ಷಿಗಳು "ಇದು ನನ್ನ ಪ್ರದೇಶ. ಇಲ್ಲಿ ಯಾರಾದರೂ ಬಂದರೆ ಒದೆಯುತ್ತೇನೆ" ಎಂಬಂತೆ ಹಾಡಿದರೆ, ಮತ್ತೆ ಕೆಲವು ರಾಗವಾಗಿ ಪ್ರೇಮ ಗಾನವನ್ನು ಹಾಡುತ್ತವೆ. ಒಂದು ಹಕ್ಕಿಯ ಪ್ರದೇಶ ಸಣ್ಣ ಪಕ್ಷಿಗಳ ಮಟ್ಟಿಗೆ ಐದಾರು ಅಡಿ ಸುತ್ತಳತೆಯವಾಗಿದ್ದರೆ ಸ್ವರ್ಣ ಗರುಡದಂಥ ದೊಡ್ಡ ಪಕ್ಷಿಗಳಿಗೆ ಅದು ೫೦-೬೦ ಕಿಲೋಮೀಟರ್ ಸುತ್ತಳತೆಯದಿರುತ್ತದೆ. ಅಮೆರಿಕದ ಒಂದು ವಿಶ್ವವಿದ್ಯಾಲಯದಲ್ಲಿ ಪಕ್ಷಿಗಳ ಧ್ವನಿಗಳನ್ನು ಮುದ್ರಿಸಿಕೊಂಡು ಸಂಶೋಧನೆ ನಡೆಸಲಾಗುತ್ತದೆ. ಆ ವಿಶ್ವವಿದ್ಯಾಲಯದವರು ಭಾರತದ ಒಬ್ಬ ಹಿಂದುಸ್ತಾನಿ ಗಾಯಕನನ್ನು ಕರೆಸಿಕೊಂಡು ಪಕ್ಷಿಗಳಲ್ಲಿಯೂ 'ಘರಾಣಾ ಶೈಲಿ' ಇರುವುದನ್ನು ಪತ್ತೆ ಮಾಡಿದ್ದಾರೆ.

ನಾನು ಅಶ್ವತ್ಥ ಕಟ್ಟೆಯ ಮೇಲೆ ಕುಳಿತಿರುವಾಗ ಒಂದು ರತ್ನ ಪಕ್ಷಿ (ಕೆಂಬೂತ) ಗೂ ಗೂ ಎಂದು ಲಂಗೂರಕೋತಿಯ ಹಾಗೆ ಧ್ವನಿ ಹೊರಡಿಸಲಾರಂಭಿಸಿದಾಗ ದೂರದ ಗಿಡದಲ್ಲಿ ಅವಿತುಕೊಂಡಿದ್ದ ಇನ್ನೊಂದು ಕೆಂಬೂತ ಕೂಡ ಹಾಗೆಯೇ ಕೂಗಲು ಶುರು ಮಾಡಿತು. ಗಂಡು ಪಾರಿವಾಳ ಗುಟುರು ಹಾಕತೊಡಗಿತು. ಹೆಣ್ಣು ಪಾರಿವಾಳ

ರಸ್ತೆಯ ಮೇಲೆ ಕಾಳನ್ನು ಹುಡುಕತೊಡಗಿತು. ಟೊಕ್ ಟೊಕ್ ಟೊಕ್ ಎಂಬ ಶಬ್ದ ಜೋರಾಗಿ ದೊಡ್ಡ ಒಣಗಿದ ಮರದಿಂದ ಬರುತ್ತಿತ್ತು. ಮರ ಕುಟುಕ ಎಂದು ಗೊತ್ತಾದರೂ ಅದು ಕಾಣಲಿಲ್ಲ.

ಅಮೇರಿಕದ ಒಂದು ಜಾತಿಯ ಸಸ್ಯ ಪ್ರಭೇದ ಪೂರ್ಣನಾಶವಾಗುವಾಗ ಮರಕುಟುಕ ಪಕ್ಷಿಯಿಂದಾಗಿ ಹುಟ್ಟಿಸಿದ ಪ್ರಸಂಗವೊಂದು ಸ್ವಾರಸ್ಯಕರವಾಗಿದೆ. ಅಲ್ಲಿಯ ಕಾಡುಗಳಲ್ಲಿ ಒಂದು (ಸಾಗವಾನಿಗಿಂತ) ದೊಡ್ಡ ಬೆಲೆ ಬಾಳುವ ಗಿಡದ ಬೀಜಗಳನ್ನು ಅರಣ್ಯ ಇಲಾಖೆಯವರು ಎಷ್ಟು ಸಲ ನೆಟ್ಟರೂ ಬೀಜ ಮೊಳಕೆಯೊಡೆಯಲೇ ಇಲ್ಲ. ಇಲಾಖೆಯವರಿಗೆ ಚಿಂತೆಯಾಗಿ ವಿಜ್ಞಾನಿಗಳ ಸಲಹೆ ಕೇಳಿದರು. ಅವರು ಒಬ್ಬ ಪಕ್ಷಿವಿಜ್ಞಾನಿಯ ಬಳಿ ಹೋಗಲು ಹೇಳಿದರು. "ಹೀಲಾ" ಎಂಬ ದೊಡ್ಡ ಮರಕುಟುಕ ಈ ಗಿಡದ ಹಣ್ಣನ್ನು ತಿಂದು ಅರಗಿಸಿಕೊಂಡು ತನ್ನ ಹಿಕ್ಕೆಯಲ್ಲಿ ಹೊರಹಾಕಿದಾಗ ಮಾತ್ರ ಮೊಳಕೆ ಒಡೆಯುತ್ತದೆ," ಎಂದರು. ಯಾಕೆಂದರೆ ಆ ಗಿಡದ ಬೀಜದ ಸುತ್ತ ದಪ್ಪ ಪ್ಲಾಸ್ಟಿಕ್ಕಿನಂಥ ಗಟ್ಟಿ ಹೊದಿಕೆ ಇರುತ್ತದೆ. ಮರಕುಟುಕನ ಹೊಟ್ಟೆಯಲ್ಲಿ ಹಣ್ಣು ಅರಗುವಾಗ ಹೊರ ಕವಚ ಸವೆದು ಬೀಜ ಹಕ್ಕಿಯ ಹಿಕ್ಕೆಯ ಸಂಗಡ ಹೊರಬರುತ್ತದೆ. ಆಗ ಮೊಳಕೆಯೊಡೆಯಲು ಅನುವಾಗುತ್ತದೆ. ಇಲಾಖೆಯವರು ಇಂಥಾ ಮರಕುಟುಕಗಳನ್ನು ಬೇರೆ ಕಾಡಿನಿಂದ ಹಿಡಿದು ತರಬೇಕಾಯಿತು. ಮುಂದೆ ಕೆಲವೇ ವರ್ಷಗಳಲ್ಲಿ ಆ ಬೆಲೆ ಬಾಳುವ ಗಿಡದ ಸಸಿಗಳು ತಲೆಯೆತ್ತಿ ಬೆಳೆಯತೊಡಗಿದವು. ಅಲ್ಲದೆ ಇನ್ನಿತರ ಗಿಡಗಳು ರೋಗದಿಂದ ಸಾಯುತ್ತಿರುವುದನ್ನು ಈ ಮರಕುಟುಕಗಳು ಹತೋಟಿಗೆ ತಂದುವು.

ನಾನು ಅಲ್ಲಿಂದ ಎದ್ದು ಕೊಳದ ಹತ್ತಿರ ಹೋದಾಗ ಒಂದು ಸಣ್ಣ ಮರಿ ನೀರಾಮೆ ಮೇಲೆ ಬಂದು ನೀರಲ್ಲಿ ಮಾಯವಾಯಿತು. ಭಾರತದಲ್ಲಿ ೧೦-೧೨ ಜಾತಿಯ ನೀರು ಆಮೆಗಳು, ೩-೪ ಜಾತಿಯ ಕಲ್ಲಾಮೆಗಳಿವೆ. ನಾನು ನಕ್ಷತ್ರ ಚಿತ್ರವಿರುವ ಎರಡು ಆಮೆಗಳನ್ನು ಸಾಕಿದ್ದೇನೆ. ನಾನು ಹಿಡಿದು ತಂದಾಗ ಅವು ಅರ್ಧ ಕಿಲೋ ತೂಕದವಿದ್ದವು. ಮೂರ್ನಾಲ್ಕು ವರ್ಷಗಳಲ್ಲಿ ಒಂದು ಕಿಲೋಗಿಂತ ಹೆಚ್ಚು ಭಾರವಾಗಿವೆ. ಇವು ನೀರು ಕುಡಿಯದೆ ಟೊಮೇಟೋ, ತರಕಾರಿ, ಹುಲ್ಲುಗಳಿಂದ ಹೊಟ್ಟೆ ತುಂಬಿಸಿಕೊಳ್ಳುತ್ತವೆ. ಆರೋಗ್ಯದಿಂದಿದ್ದರೆ ೬೦-೭೦ ವರ್ಷ ಜೀವಿಸಬಲ್ಲವು. ದಿನಕ್ಕೆ ಒಂದೆರಡು ಟೊಮೇಟೋ ಅಥವಾ ತರಕಾರಿ ಆದರೆ ಸಾಕು. ಒಂದು ಮೂಲೆಯಲ್ಲಿ ಕುಳಿತುಬಿಡುತ್ತವೆ. ಇವಕ್ಕೆ ಚಳಿ ಎಂದರೆ ಆಗುವದಿಲ್ಲ. ನಾನು ದೂರದಲ್ಲಿ ಬಕೆಟ್‌ನಲ್ಲಿ ನೀರು ಕಾಯಿಸುತ್ತಿದ್ದರೂ ಈ ಆಮೆಗಳು ಬಿಸಿಯನ್ನು ಹೇಗೋ ಪತ್ತೆ ಹಚ್ಚಿ ಬಕೆಟ್‌ನ ಬದಿಗೆ ಬಂದು ಕೂಡುತ್ತವೆ. ಆಮೆಗೆ ಹಲ್ಲುಗಳಿಲ್ಲ. ಬಾಯಿ ಬ್ಲೇಡಿನಂತಿದ್ದು ಅದರಿಂದ ಕತ್ತರಿಸಿಕೊಂಡು ಮುಂದಿನ ಕಾಲಿನ ಉಗುರುಗಳಿಂದ ಹಿಡಿತದಲ್ಲಿಟ್ಟು ಆಹಾರವನ್ನು ತಿನ್ನುತ್ತವೆ. ವಾರಕ್ಕೊಮ್ಮೆ ಡೆಟಾಲ್ ಹಾಕಿ ತೊಳೆಯಬೇಕು. ಇಲ್ಲದಿದ್ದರೆ ಅವುಗಳ ಮೈಯಲ್ಲಿ ಕೀಟಗಳು ಸೇರುತ್ತವೆ. ನನ್ನ ಎರಡು ಆಮೆಗಳಲ್ಲಿ ಒಂದು ಸುಸ್ತು, ಬರೀ ಮಲಗುತ್ತದೆ. ಇನ್ನೊಂದು ಯಾವಾಗಲೂ ಧೈರ್ಯದಿಂದ ಓಡಾಡಿಕೊಂಡು, ತಗ್ಗು ಬಹಳವಿದ್ದರೆ ನೋಡಿ ಹಿಂದೆ ಸರಿದು ಪಾರಾಗುತ್ತದೆ. ಕೆಲವು ಸಲ ಸಣ್ಣ ಪಾವಟಿಗೆಗಳ ಮೇಲೆ ಹೊಟ್ಟೆ ಮೇಲಾಗಿ ಬಿದ್ದರೆ ಕಷ್ಟಪಟ್ಟು ಪಲ್ಟಿಹೊಡೆದು ಕಾಲ ಮೇಲೆ ನಿಲ್ಲುತ್ತದೆ; ಈ ಆಮೆಗಳು ಗಾಬರಿಯಾದರೆ ಅವು ತಮ್ಮ ಮುಖ, ಕಾಲುಗಳನ್ನು ತಮ್ಮ ಚಿಪ್ಪಿನಲ್ಲಿ ಅಡಗಿಸಿಕೊಳ್ಳುತ್ತವೆ. ನಕ್ಷತ್ರ ಆಮೆ ಬಹಳ ಸುಂದರವಾದ ಪ್ರಾಣಿ. ಜೀವಂತ ಪ್ಲಾಸ್ಟಿಕ್ ಗೊಂಬೆಯಂತೆ ಕಾಣುತ್ತದೆ ಅದರ ಚಿಪ್ಪು. ●



# ಕರ್ನಾಟಕ

## ಪ್ರಗತಿಪಥದ ಮುಂಚೂಣಿಯಲ್ಲಿ...



ಭಾರತ ದಾಸ್ಯದ ಸಂಕೋಲೆಗಳಿಂದ ಬಿಡುಗಡೆಗೊಂಡು ಈಗ 48 ವರ್ಷಗಳು ಕಳೆದಿವೆ. ಸ್ವಾತಂತ್ರ್ಯಾನಂತರದ ಅವಧಿಯಲ್ಲಿ ಎಲ್ಲ ಕ್ಷೇತ್ರಗಳಲ್ಲೂ ಆಗಿರುವ ಪ್ರಗತಿ ಅಪಾರ. ದೇಶದ ಮುನ್ನಡೆಯ ಹಾದಿಯಲ್ಲೇ ಹೆಜ್ಜೆ ಹಾಕುತ್ತಿರುವ ಕರ್ನಾಟಕದಲ್ಲಿ ಅಭಿವೃದ್ಧಿಯ ಹೊಸ ಗಾಳಿ ಬೀಸುತ್ತಿದೆ. ರಾಜ್ಯ ಸರ್ಕಾರದ ಆಡಳಿತ ಚುಕ್ಕಾಣಿ ಹಿಡಿದಿರುವ ಮಾನ್ಯ ಮುಖ್ಯಮಂತ್ರಿ ಶ್ರೀ ಹೆಚ್.ಡಿ. ದೇವೇಗೌಡರವರ ದಕ್ಷ ಮುಂದಾಳತ್ವದಲ್ಲಿ ಪ್ರಗತಿಯ ಹೊಸ ಅಧ್ಯಾಯ ಆರಂಭವಾಗಿದೆ. ದಕ್ಷ, ನೀತಿಪೂರ್ಣ ಆಡಳಿತದಿಂದ ಜನತೆಯ ಸರ್ವಾಂಗೀಣ ಅಭಿವೃದ್ಧಿಗೆ ಸರ್ಕಾರ ಕಂಕಣ ಬದ್ಧ.

### ಜನತಾದರ್ಶನ

ಜನರ ಮನೆಬಾಗಿಲಿಗೇ ಸರ್ಕಾರವನ್ನು ಕೊಂಡೊಯ್ಯಲು ಮಾನ್ಯ ಮುಖ್ಯಮಂತ್ರಿ ಶ್ರೀ ಹೆಚ್.ಡಿ. ದೇವೇಗೌಡ ಅವರು ರೂಪಿಸಿರುವ ಅನುಪಮ ಕಾರ್ಯಕ್ರಮ- "ಜನತಾದರ್ಶನ". ಕರ್ನಾಟಕದ ನಾನಾ ಮೂಲೆಗಳಲ್ಲಿ ವಾಸಿಸುತ್ತಿರುವ ಜನರು ತಮ್ಮ ಕುಂದು ಕೊರತೆಗಳ ಪರಿಹಾರಕ್ಕಾಗಿ ಈಗ ವಿಧಾನಸೌಧಕ್ಕೆ ಬರಬೇಕಾಗಿಲ್ಲ. ಮುಖ್ಯಮಂತ್ರಿಗಳೇ ಖುದ್ದಾಗಿ ಜಿಲ್ಲಾ ಕೇಂದ್ರಗಳಿಗೆ ಭೇಟಿಯಿತ್ತು, ಅವರ ಸಮಸ್ಯೆಗಳಿಗೆ ಪರಿಹಾರ ಒದಗಿಸುವ ಈ ಕಾರ್ಯಕ್ರಮದಿಂದ ಪ್ರಗತಿಪರ ಯೋಜನೆಗಳ ಸರಾಗ ಅನುಷ್ಠಾನದ ಪರಿಶೀಲನೆಗೆ ಅವಕಾಶ. ಭಾರಿ ಯೋಜನೆಗಳನ್ನು ಸಕಾಲದಲ್ಲಿ ಕಾರ್ಯಗತ ಗೊಳಿಸಲು ಇರುವ ಅಡಚಣೆಗಳ ನಿವಾರಣೆಗೆ ಕ್ರಮ. ಮುಖ್ಯಮಂತ್ರಿಗಳೊಂದಿಗೆ ಇತರ ಸಚಿವರೂ ಮತ್ತು ಸಂಬಂಧಿಸಿದ ಅಧಿಕಾರಿಗಳು ಇದರಲ್ಲಿ ಭಾಗವಹಿಸುವುದರಿಂದ ಜನರ ಸಮಸ್ಯೆಗಳಿಗೆ ಶೀಘ್ರ ಪರಿಹಾರ ದೊರೆಯುವುದಲ್ಲದೆ, ಆಡಳಿತಯಂತ್ರ ಚುರುಕು ಗೊಂಡು, ಕಾರ್ಯಕಲಾಪಗಳು ಸುಗಮವಾಗಿ ನಡೆಯಲು ಪ್ರೇರಕ.

### ಬರಪರಿಹಾರ:

ರಾಜ್ಯದ 106 ತಾಲ್ಲೂಕುಗಳಲ್ಲಿ ಸಕಾಲದಲ್ಲಿ ಮಳೆ ಆಗದೆ ಬರ ಪರಿಸ್ಥಿತಿ ಉಂಟಾಗಿದ್ದು, ಶೇಕಡ 60-70ರಷ್ಟು ಜಮೀನಿನಲ್ಲಿ ಕೃಷಿ ಕಾರ್ಯ ಕುಂಠಿತ.

ಬರಪರಿಹಾರ ಕಾರ್ಯಕ್ರಮಗಳಿಗೆ ಸರ್ಕಾರ ಜುಲೈ ೯೫ರವರೆಗೆ ಮಾಡಿರುವ ವೆಚ್ಚ **ರೂ.44.86 ಕೋಟಿ.** ಈ ಕಾರ್ಯಕ್ರಮದನ್ವಯ ಕುಡಿಯುವ ನೀರು ಪೂರೈಕೆ ಮತ್ತು ಉದ್ಯೋಗಸೃಷ್ಟಿಗೆ ಆದ್ಯತೆ. ಅಲ್ಲದೆ, ಕೇಂದ್ರದಿಂದ **ರೂ.256 ಕೋಟಿ** ಮಂಜೂರಾತಿಗೆ ಸರ್ಕಾರದ ಮನವಿ.

## ವಿದ್ಯಾಭ್ಯಾಸ:

ಪ್ರಾಥಮಿಕ ವಿದ್ಯಾಭ್ಯಾಸವನ್ನು ಕಡ್ಡಾಯಗೊಳಿಸುವ ಪ್ರಥಮ ಹೆಜ್ಜೆಯಾಗಿ **12,000** ಶಾಲಾ ಕೊಠಡಿಗಳ ನಿರ್ಮಾಣ. **18,500** ಪ್ರಾಥಮಿಕ ಶಾಲಾ ಶಿಕ್ಷಕರ ನೇಮಕಾತಿ.

ಬಿ.ಇಡಿ./ಟಿ.ಸಿ.ಹೆಚ್. ವಿದ್ಯಾ ಸಂಸ್ಥೆಗಳಲ್ಲಿ ಕರ್ನಾಟಕದ ವಿದ್ಯಾರ್ಥಿಗಳಿಗೇ ಮನ್ನಣೆ ದೊರೆಯುವಂತೆ ಪ್ರವೇಶ ನೀತಿಯ ತಿದ್ದುಪಡಿ.

**ಸಂಪೂರ್ಣ ಸಾಕ್ಷರತಾ ಆಂದೋಲನದಿಂದ 9** ರಿಂದ **35** ವರ್ಷ ವಯಸ್ಸಿನ **80** ಲಕ್ಷ ಅನಕ್ಷರಸ್ಥರನ್ನು ಅಕ್ಷರಸ್ಥರನ್ನಾಗಿ ಮಾಡುವ ಗುರಿ.

ಪಾಲಿಟೆಕ್ನಿಕ್‌ಗಳಲ್ಲಿ ಮಹಿಳೆಯರಿಗೆ **ಶೇ.30** ಮೀಸಲಾತಿ.

ಸಂಗೀತ ಶಿಕ್ಷಕರಾಗಿ ಅರ್ಹ ಅಂಧ ಅಭ್ಯರ್ಥಿಗಳ ಆಯ್ಕೆ

## ಕುಡಿಯುವ ನೀರಿನ ಸೌಲಭ್ಯ:

ಗ್ರಾಮೀಣ ಪ್ರದೇಶಗಳಿಗೆ ತ್ವರಿತವಾಗಿ ಕುಡಿಯುವ ನೀರು ಪೂರೈಸಲು **ರೂ.96.50 ಕೋಟಿ** ಬಿಡುಗಡೆ.

## ಉದ್ಯೋಗ ನೀಡಿಕೆ:

ಕೃಷಿ ಕಾರ್ಮಿಕರು, ಸಣ್ಣ/ಅತಿ ಸಣ್ಣ ರೈತರಾದಿ ಉದ್ಯೋಗಾಪೇಕ್ಷಿಗಳಿಗಾಗಿ ವಿವಿಧ ಕಾರ್ಯಕ್ರಮಗಳಡಿ ಹೊಸ ಉದ್ಯೋಗಗಳನ್ನು ಕಲ್ಪಿಸಲು **ರೂ.187 ಕೋಟಿ** ಮಂಜೂರು.

## ರಿಯಾಯಿತಿ ದರದಲ್ಲಿ ಅಕ್ಕಿ:

ಕಿಲೋಗೆ **ರೂ.3.20** ದರದಲ್ಲಿ **52,07,379** ಹಸಿರು ಪಡಿತರ ಚೀಟಿದಾರರಿಗೆ ಅಕ್ಕಿ ಸರಬರಾಜು. ಕಳೆದ ಉಗಾದಿ ಹಬ್ಬದಿಂದ ಸರ್ಕಾರದ ಭರವಸೆಯ ಈಡೇರಿಕೆ.

## ನೀರಾವರಿ:

ಕೃಷ್ಣಾ ಮೇಲ್ದಂಡೆ ಯೋಜನೆಯ ಕಾರ್ಯ ಚುರುಕಿನಿಂದ ಮುಂದುವರೆಯಲು ನೀರಾವರಿ ಬಾಂಡ್ ಮೂಲಕ **ರೂ.800 ಕೋಟಿ** ಮೊತ್ತದ ಕ್ರೋಢೀಕರಣಕ್ಕೆ ಕ್ರಮ. ಈ ವರ್ಷ ಸರ್ಕಾರ ಒದಗಿಸಿರುವ **ರೂ.200 ಕೋಟಿಯೂ** ಸೇರಿ ಒಟ್ಟು **ರೂ.1000 ಕೋಟಿ** ವೆಚ್ಚದ ಕಾಮಗಾರಿ ಕಾರ್ಯಕ್ರಮ.

## ಆರೋಗ್ಯ ನಿಧಿ:

ಕ್ಯಾನ್ಸರ್, ಹೃದ್ರೋಗ, ಮೂತ್ರಪಿಂಡ ಸಂಬಂಧಿತ ರೋಗ ಇತ್ಯಾದಿ ಮಾರಕ ರೋಗಗಳಿಂದ ನರಳುತ್ತಿರುವ ಬಡಜನರಿಗೆ ಇದೊಂದು ವರದಾನ. **ರೂ.100 ಕೋಟಿ** ನಿಧಿ. ಸರ್ಕಾರದಿಂದ **ರೂ.10 ಕೋಟಿ** ನೀಡಿಕೆ.

## ಆಧಾರ:

ಅಂಗವಿಕಲರಿಗೆ ಇದೊಂದು ಆಶಾಕಿರಣ. ಮೊದಲಿಗೆ **1000** ಅಂಗಡಿಗಳನ್ನು ಸ್ಥಾಪಿಸಲು ತಲಾ **ರೂ.10,000** ಅನುದಾನ. ಇದಕ್ಕಾಗಿ ಒಂದು **ಕೋಟಿ** ರೂಪಾಯಿ ಮಂಜೂರು. ಅಲ್ಲದೆ, ಅಂಗವಿಕಲರ ಸೇವೆಯಲ್ಲಿ ನಿರತವಾಗಿರುವ ಸ್ವಯಂ ಸೇವಾ ಸಂಸ್ಥೆಗಳಿಗೆ **ರೂ.50 ಲಕ್ಷ** ಅನುದಾನ.

## ಸ್ವಶಕ್ತಿ:

ವಿಧವೆಯರಿಗೆ, ಅನಾಥ ಮಹಿಳೆಯರಿಗೆ ಇದೊಂದು ಊರುಗೋಲು. **"ಮನೆಬೆಳಕು"** ಕಾರ್ಯಕ್ರಮದಡಿ ಆಪತ್ತಿನಲ್ಲಿರುವ ಮಹಿಳೆಯರ ಉದ್ಧಾರಕ್ಕಾಗಿ **ರೂ.60 ಲಕ್ಷ** ಅನುದಾನ.

ಇಷ್ಟಲ್ಲದೆ, **ಪರಿಶಿಷ್ಟ ವರ್ಗ/ಜಾತಿ** ಮತ್ತು **ಅಲ್ಪಸಂಖ್ಯಾತರಿಗಾಗಿ** ವಿಶೇಷ ಕಾರ್ಯಕ್ರಮಗಳು. ಮಂಗಳೂರು, ಮೈಸೂರು, ಗುಲ್ಬರ್ಗ ಮತ್ತು ಬಿಜಾಪುರ ಜಿಲ್ಲೆಗಳಲ್ಲಿ ಅಲ್ಪಸಂಖ್ಯಾತ ವಿದ್ಯಾರ್ಥಿಗಳಿಗೆ **5** ವಸತಿ ಶಾಲೆಗಳ ನಿರ್ಮಾಣ.

## ಈದ್ಗಾ ಮೈದಾನ ವಿವಾದಕ್ಕೆ ಶಾಂತಿಯುತ ಇತ್ಯರ್ಥ:

ಹುಬ್ಬಳ್ಳಿ ಈದ್ಗಾ ಮೈದಾನದಲ್ಲಿ ಧ್ವಜಾರೋಹಣ ಕುರಿತು ಸರ್ಕಾರ ಸಂಯಮ ಮತ್ತು ಜಾಣಾಕ್ಷತನ ತೋರಿದ್ದರಿಂದ ವಿವಾದಕ್ಕೆ ಶಾಂತಿಯುತ ಇತ್ಯರ್ಥ.

## ಕರ್ನಾಟಕ ಇಂದು ದೇಶದಲ್ಲೇ ಮಾದರಿ ರಾಜ್ಯವಾಗಿ ರೂಪುಗೊಳ್ಳುತ್ತಿದೆ.

**ಕೇಂದ್ರ ಅರ್ಥ ಸಚಿವರ ಪ್ರಶಂಸೆ**

"ಆರ್ಥಿಕವಾಗಿ ಮತ್ತು ಔದ್ಯೋಗಿಕವಾಗಿ ದೇಶದಲ್ಲಿಯೇ 'ಪ್ರಥಮ' ಸ್ಥಾನಕ್ಕೆ ಏರುವ ಎಲ್ಲಾ ಅರ್ಹತೆಗಳೂ ಕರ್ನಾಟಕಕ್ಕೆ ಇದ್ದು, ಮುಖ್ಯಮಂತ್ರಿ ಶ್ರೀ ಹೆಚ್.ಡಿ. ದೇವೇಗೌಡರ ನೇತೃತ್ವದ ಸರ್ಕಾರ ಅದನ್ನು ಸಾಧಿಸುವಲ್ಲಿ ನಮಗೆ ಯಾವುದೇ ಅನುಮಾನ ಇಲ್ಲ".

ಡಾ|| ಮನಮೋಹನ್ ಸಿಂಗ್

**ಜನರಿಗಾಗಿ ದುಡಿತ, ಜನರಿಗಾಗಿಯೇ ಮಿಡಿತ**



ಕರ್ನಾಟಕ ವಾರ್ತೆ

ಮಾಲುಕಾಟ

# ಚಿಕ್ಕ ಹೈದ ಹೇಳಿದ ಕಥೆ

● ತೋವಿನಕೆರೆ ಸೀತಾರಾಮ ಜೊಯ್ಸ

ಕೃಷ್ಣರಾಜಸಾಗರದಿಂದ ಶ್ರೀರಂಗಪಟ್ಟಣಕ್ಕೆ ಹೋಗಿಬರಲು ಐವತ್ತು ವರ್ಷಗಳ ಹಿಂದೆ (೧೯೪೬-೧೯೫೧) ಬಸ್ಸುಗಳ ಸೌಕರ್ಯವಿರಲಿಲ್ಲ. ಮೈಸೂರಿನ ಮೂಲಕವೇ ಹೋಗಿ ಬರಬೇಕಾಗುತ್ತಿತ್ತು. ಸಾಗರದ ಅಕ್ಕಪಕ್ಕದ ಗ್ರಾಮಗಳೆಲ್ಲ ಶ್ರೀರಂಗಪಟ್ಟಣ ತಾಲ್ಲೂಕಿಗೇ ಸೇರಿದ್ದುದರಿಂದ ನಾನು ಪದೇಪದೇ ಆ ಮಾರ್ಗದಲ್ಲಿ ಹೋಗಿಬರುವುದು ಅನಿವಾರ್ಯವಾಗಿತ್ತು. ಕೆಲಸದ ಒತ್ತಡ ಜಾಸ್ತಿಯಾಗಿದ್ದಾಗ ಒಂದೊಂದು ಸಲ ರಾತ್ರಿಯನ್ನು ಅಲ್ಲೇ ಕಳೆಯ ಬೇಕಾಗುತ್ತಿತ್ತು. ಕೃಷ್ಣರಾಜಸಾಗರದಲ್ಲಿ ಪ್ರವಾಸಿಮಂದಿರವಿದ್ದರೂ ಏಕಾಂಗಿಯಾಗಿ ಅಲ್ಲಿ ತಂಗಲು ನನಗೆ ಜುಗುಪ್ಸೆ. ಅದಕ್ಕಾಗಿ ತಂಗಲು ರೈಲ್ವೆ ನಿಲ್ದಾಣಕ್ಕೆ ಅತಿ ಸಮೀಪದಲ್ಲಿರುವ ಗ್ರಾಮಕ್ಕೆ ಹೋಗುತ್ತಿದ್ದೆ. ಅಲ್ಲಿನ ಮನೆಗಳ ಮುಂದಿನ ವಿಶಾಲವಾದ ಜಗಲಿ ಮಲಗುವುದಕ್ಕೆ ತಕ್ಕ ಸ್ಥಳ. ನಾನು ಅಲ್ಲಿಗೆ ಬಂದಿರುವ ಸಮಾಚಾರ ತಿಳಿದು ಪರಿಚಿತರು, ಸ್ನೇಹಿತರು ಬಂದು ಸೇರುತ್ತಿದ್ದರು. ಆಗ ಅವರೊಡನೆ ವಿನೋದವಾಗಿ ಒಂದಷ್ಟು ಕಾಲ ಕಳೆಯುತ್ತಿದ್ದೆ. ಬಂದು ಸೇರುತ್ತಿದ್ದವರು ಆ ಪ್ರಾಂತದಲ್ಲಿ ನಡೆದಿದ್ದ ಅಥವಾ ಕೇಳಿದ್ದ ಸಂಗತಿಗಳನ್ನು ಚರ್ಚಿಸುತ್ತಿದ್ದರು. ಒಂದು ಸಲ ಅವರೆಲ್ಲ ಮನೆಗೆ ಹೋದಮೇಲೆ, ಆ ದಿನ ನನ್ನಂತೆಯೇ ಊರಿಗೆ ಬಂದಿದ್ದ ಒಬ್ಬರು ಅಲ್ಲೇ ಮಲಗಲು ಬಂದರು. ಪ್ರಾಸಂಗಿಕವಾಗಿ ಮಾತುಕತೆಗಳು ನಡೆದವು. ಆತ ನನ್ನು ಯಾವ ಸ್ಥಳದವರೆಂದು ವಿಚಾರಿಸಿದ. ತಾನು "ಗಂಜಾಂನವ" ಎಂದ. ನಾನು ಸಂಸಾರದೊಂದಿಗೆ ಅದೇ 'ಗಂಜಾಂ'ದಲ್ಲಿಯೇ ವಾಸವಾಗಿದ್ದರೂ ಆ ಮನುಷ್ಯನ ಪರಿಚಯ ನನಗಿರಲಿಲ್ಲ. ಆತನಿಗೂ 'ಗಂಜಾಂ'ದಲ್ಲಿ ಒಬ್ಬ ಸರ್ವೆಯರ್ ಇದ್ದಾರೆಂಬುದು ಮಾತ್ರ ಗೊತ್ತಿತ್ತಂತೆ. ಮಾತು ಬೆಳೆದಾಗ, "ನಿನ್ನ ಮನೆ ಎಲ್ಲಿ ಇದೆ? ನಿನ್ನ ಕಸುಬೇನು? ಹೆಸರೇನು?" ಎಂದು ವಿಚಾರಿಸಿದೆ. ತಾನು ವೃತ್ತಿಯಲ್ಲಿ ಕಮ್ಮಾರನೆಂದು, ಹೆಸರು ಚಿಕ್ಕಹೈದನೆಂದು ಆತ ತಿಳಿಸಿದ. ನಾನು ಹೋಗಿಬರುವ ದಾರಿಯಲ್ಲಿ ಕಬ್ಬಿಣ ಕುಟ್ಟುವ ಕೆಲಸ ನಡೆಯುತ್ತಿದ್ದುದನ್ನು ಕಂಡಿದ್ದೆ. ಚಿಕ್ಕ ಹೈದನೆಂಬುದು ನಿಜವಾದ ಹೆಸರೋ, ಅಡ್ಡ ಹೆಸರೋ. ಆತ ಮಾತು ಮಾತಿಗೂ "ಗುರುಗಳ ಆಶೀರ್ವಾದ" ಎಂದು ತಪ್ಪದೇ ಅನ್ನುತ್ತಿದ್ದ. ಆದುದರಿಂದ ಅವನನ್ನು ಮತ್ತೆ ಪ್ರಶ್ನಿಸುವ ಮನಸ್ಸಾಯಿತು. "ನೀನು ಪ್ರತಿ ಮಾತಿಗೂ ಗುರುಗಳ ಹೆಸರನ್ನು ಹೇಳುತ್ತಿರುವೆಯಲ್ಲ. ದೇವರನ್ನೇ ಗುರು ಎಂಬ ಭಾವನೆಯಿಂದ ಹೇಳುತ್ತಿರುವೆಯೋ ಅಥವಾ ನಿನಗೆ ನಿಜವಾದ ಒಬ್ಬ ಮಾನವ ಗುರು ಇದ್ದಾರೆಯೋ?"

"ಗುರುವೇ ಬೇರೆ, ದೇವರೇ ಬೇರೆ. ದೇವರು ಕಾಣಿಸಿಕೊಳ್ಳುವುದಿಲ್ಲ. ಗುರುಗಳನ್ನು ಕಂಡಿದ್ದೇನೆ. ಆದರೆ ಗುರುವಿನ ರೂಪದಲ್ಲಿ ದೇವರು ಬರುತ್ತಾನೆಂದು ನಂಬುತ್ತೇನೆ."

"ಆದರೆ ನಿನ್ನ ಗುರು ಎಲ್ಲಿದ್ದಾರೆ? ಅವರು ಯಾರು ತಿಳಿಸುವೆಯಾ?"

"ಅವರಿಗೆ ಒಂದು ಊರಿಲ್ಲ, ಮಠವಿಲ್ಲ ಎಲ್ಲೆಂದರಲ್ಲಿ ತಿರುಗುತ್ತಾರೆ. ಅವರಿಗೆ ಶಿಷ್ಯರೂ

ಇಲ್ಲ. ಆಗಾಗ ಅವರು ಗೌತಮಕ್ಷೇತ್ರದಲ್ಲಿ ಕಾಣಿಸಿಕೊಳ್ಳುತ್ತಾರೆ."

"ಶ್ರೀರಂಗಪಟ್ಟಣದ ನಾಡನ್ನೆಲ್ಲ ಗೌತಮಕ್ಷೇತ್ರವೆನ್ನುತ್ತಾರೆ. ನೀನು ಹೇಳುವ ಗೌತಮಕ್ಷೇತ್ರ ಯಾವುದು?"

"ಕೋಟೆಯ ಮೇಲೆ ಪಶ್ಚಿಮದ ತುದಿಯಲ್ಲಿ ನಿಂತುಕೊಂಡು ನೋಡಿದರೆ, ನದಿಯು ಇಬ್ಭಾಗವಾಗುವ ಸ್ಥಳದಲ್ಲಿ ಅಖಂಡ ಕಾವೇರಿಯ ನೀರಿನಲ್ಲಿ ಒಂದು ಸಣ್ಣ ಗುಡ್ಡವೂ ಅದರ ಮೇಲೆ ಒಂದು ಮಂದಿರವೂ ಕಾಣುತ್ತದೆ. ಅದು ಸಾಧುಗಳಿಗೆ ತಕ್ಕ ಜಾಗ. ಅವರು ವರ್ಷಕ್ಕೊಂದು ಸಲ ಅಲ್ಲಿ ಕಾಣಿಸಿಕೊಂಡು, ಮನಬಂದಾಗ ಎಲ್ಲಿಗೋ ಹೋಗುತ್ತಾರೆ. ಸಂಕ್ರಾಂತಿಹಬ್ಬದ ಕಾಲದಲ್ಲಿ ಬರುತ್ತಾರಂತೆ."

"ಅವರು ಬಂದಾಗ ಅನುಕೂಲಗಳನ್ನು ಯಾರು ನೋಡಿಕೊಳ್ಳುತ್ತಾರೆ?"

"ಅಕ್ಕಪಕ್ಕದ ಹಳ್ಳಿಯ ಜನ."

"ಗುರುಗಳ ಹೆಸರೇನು?"

"ಹೆಸರೇನೆಂದು ಯಾರೂ ಕೇಳುವುದಿಲ್ಲ; ಅವರೂ ಹೇಳಿಕೊಂಡಿಲ್ಲ."

"ನಿನಗೆ ಅವರ ಪರಿಚಯವಾದದ್ದು ಹೇಗೆ-ಎಲ್ಲಿ?"

"ಗುಂಜಾಂದಲ್ಲೇ, ಸಂಗಮದ ಹತ್ತಿರ. ನಾನಿನ್ನೂ ಹುಡುಗನಾಗಿದ್ದಾಗ ಒಬ್ಬ ಸಾಧು ಬಂದು ಕೆಲವು ಕಾಲ ಅಲ್ಲಿದ್ದರು. ಜನ ಅವರನ್ನು ಸಂಗಮ ಸಾಧುಗಳೆಂದೇ ಕರೆಯುತ್ತಿದ್ದರು. ಅವರ ವಿಚಾರವಾಗಿ ಜನ ಏನೇನನ್ನೋ ಹೇಳುತ್ತಿದ್ದರು. ಗುರುಗಳು ಇಲ್ಲಿಗೆ ಬಂದಾಗ 'ಸಂಗಮ ಸಾಧು'ಗಳನ್ನು ನೋಡುವುದಕ್ಕೆ ಸಂಗಮಕ್ಕೆ ಬರುತ್ತಿದ್ದರು. ಅದೇ ಕಾಲದಲ್ಲಿ ಒಬ್ಬ ತಾಯಿ ಅವರಿಬ್ಬರಿಗೂ ಹಾಲನ್ನು ಕೊಂಡು ಹೋಗಿ ಕೊಡಲು ನನ್ನನ್ನು ನೇಮಿಸಿದ್ದಳು. ಆಗಲೇ ನಾನವರನ್ನು ಮೊದಲ ಸಲ ನೋಡಿದ್ದು. ಗುರುಗಳು ಸಂಗಮಕ್ಕೆ ಬಂದ ದಿನ ಪ್ರತ್ಯೇಕವಾದ ಎರಡು ಪಾತ್ರೆಗಳಲ್ಲಿ ಹಾಲನ್ನು ತೆಗೆದುಕೊಂಡು ಹೋಗುತ್ತಿದ್ದೆ. ಒಂದು ದಿನ ಇಬ್ಬರು ಸಾಧುಗಳೂ ಸಂಗಮದಲ್ಲಿ ಕುಳಿತಿ



ದ್ದಾಗ ಎರಡು ಹಾಲಿನ ಪಾತ್ರೆಗಳನ್ನು ಅವರ ಮುಂದೆ ಇಟ್ಟು ಅಡ್ಡಬಿದ್ದೆ. ಆಗ ಗುರುಗಳು ನನ್ನ ಮುಖವನ್ನೇ ದುರುಗಟ್ಟಿಕೊಂಡು ನೋಡುತ್ತಿದ್ದರು. ನನಗೆ ಭಯವಾಯಿತು. ಮೈ ಎಲ್ಲ ಬೆವರಿತು. ನಡುಗುತ್ತಿದ್ದೆ. ಈಗಲೂ ಅವರನ್ನು ನೆನೆದಾಗಲೆಲ್ಲ ಅದೇ ಅನುಭವವಾಗುತ್ತದೆ. ಆಮೇಲೆ ಆ ಮೌನಿ ಸ್ವಾಮಿಗಳು ಅಂದು ಮೊದಲ ಬಾರಿಗೆ ಮಾತನಾಡಿದರು. ಎರಡು ವಸ್ತ್ರಗಳನ್ನೂ ತಾವು ಉಪಯೋಗಿಸುವ ಪಾತ್ರೆಯನ್ನೂ ತೋರಿಸಿ, 'ನದಿಯಲ್ಲಿ ಸ್ನಾನಮಾಡಿ, ಈ ವಸ್ತ್ರಗಳನ್ನು ಮಡಿಮಾಡಿಕೊಂಡು, ಈ ಪಾತ್ರೆಯಲ್ಲಿ ನೀರು ತುಂಬಿಕೊಂಡು ಬಾ' ಎಂದರು. ನಾನು ಅವರು, ಹೇಳಿದಂತೆ ಮಾಡಿದೆ.

"ನದಿಯಿಂದ ಅಲ್ಲಿಗೆ ಹಿಂದಿರುಗಿದಾಗ ಅವರು ರಾಮನಾಮದ ಭಜನೆ ಮಾಡುತ್ತಿದ್ದರು. 'ನೀನೂ ಭಜನೆ ಮಾಡು' ಎಂಬ ಅರ್ಥ ಬರುವಂತೆ ಸನ್ನೆ ಮಾಡಿದರು. ನಾನೂ ಹಾಗೇ ಮಾಡುತ್ತಿದ್ದೆ. ಮಧ್ಯಾಹ್ನವಾಗುತ್ತಿತ್ತು. ಉಳಿದಿದ್ದ ಹಾಲನ್ನು ನನಗೇ ಕುಡಿಯಲು ಕೊಟ್ಟರು. ಅಲ್ಲಿಂದ ಹೊರಡುವಾಗ ಅವರು "ಶ್ರೀರಾಮರು ಈಗ ನಿನ್ನ ಋಣದಲ್ಲಿದ್ದಾರೆ; ಬಡತನದ ಜೀವನವನ್ನು ಹೇಗೋ ನಡೆಸುತ್ತಾರೆ. ಇನ್ನು ಮುಂದೆ ರಾಮನಾಮ ನಿನ್ನ ಉಸಿರಿನಲ್ಲಿ ಸೇರಿಕೊಂಡಿದೆ.' ಎಂದು ಆಶೀರ್ವದಿಸಿದರು."

ಹೇಳಹೇಳುತ್ತಿದ್ದಂತೆಯೆ ಚಿಕ್ಕಹೈದ ಬಿಕ್ಕಿಬಿಕ್ಕಿ ಅಳತೊಡಗಿದ. ಮಾತೇ ಹೊರಡಲಿಲ್ಲ. ನಾನು ಗರಹೊಡೆದವನಂತೆ ನೋಡುತ್ತಲಿದ್ದೆ. ಮಧ್ಯರಾತ್ರಿಯ ವೇಳೆಯಾಗಿತ್ತು. ಆಗ ತಾನೆ ಚಂದ್ರೋದಯವಾಗಿತ್ತು. ಇದೆಲ್ಲ ಎಂಥ ವಿಪರೀತ ಅಂದುಕೊಂಡೆ!

"ಇಂಥ ವಿಷಯಗಳನ್ನು ಯಾರಿಗೂ ಹೇಳಿಕೊಂಡಿಲ್ಲ. ನಿಮ್ಮಂಥವರಿಗೆ ಹೇಳಬಹುದೆಂದು ಅನಿಸುತ್ತಿದೆ. ಅದೂ ಅವರ ಪ್ರಭಾವವೇ ಇರಬೇಕು. ನದಿಯಿಂದ ನಾನು ತಂದಿದ್ದ ನೀರನ್ನು ಇಬ್ಬರು ಸಾಧುಗಳೂ ಕುಡಿದರು. ಸಂಗಮ ಸಾಧುಗಳು ಗುರುಗಳ ಕಡೆಗೆ ಬೆರಳು ತೋರಿಸಿ, 'ನಿನ್ನ ಮನಸ್ಸೆಲ್ಲ ಇವರ ಮೇಲೆ ಇರಲಿ, ಶ್ರೀರಾಮ ನೋಡಿಕೊಳ್ಳುತ್ತಾನೆ; ಪ್ರಾರಬ್ಧವನ್ನೆಲ್ಲ ಬೇಗ ಬೇಗ ಅನುಭವಿಸಿ ತೀರಿಸಿ ಬಿಡು' ಎಂದು ಅಪ್ಪಣೆ ಮಾಡಿದರು. ಆಗ ಅದೆಲ್ಲ ನನಗೆ ಅರ್ಥವಾಗಲಿಲ್ಲ. ಇದೆಲ್ಲ ನಡೆದು ಇಪ್ಪತ್ತು ವರ್ಷಗಳಾದವು. ಶ್ರೀರಾಮರನ್ನು ನಾನು ನಂಬಿಕೊಂಡಿದ್ದೇನೆ" ಎಂದ ಆತ "ನಿದ್ದೆ ಬಂತೆ, ಸ್ವಾಮಿ ? " ಎಂದು ಕೇಳಿದ.

"ಇಲ್ಲಪ್ಪ, ನೀನು ಹೇಳುವ ಕತೆ ಎಷ್ಟು ರಮ್ಯವಾಗಿದೆ! ಇನ್ನೂ ಕೇಳಬೇಕೆನಿಸುತ್ತಿದೆ," ಎಂದು ಎದ್ದು ಕುಳಿತೆ. ಚಿಕ್ಕ ಹೈದ ಕುಳಿತೇ ಮಾತನಾಡುತ್ತಿದ್ದ. ಅವನು ಗಡಗಡನೆ ನಡುಗುತ್ತಿದ್ದ. ಅವನ ನಾಲಿಗೆ ಒಣಗಿ ಮಾತೇ ಹೊರಡದ ಹಾಗಾಗಿತ್ತು: ತೊದಲು ತೊದಲಾಗಿ ಮಾತನಾಡುತ್ತಿದ್ದ. "ಇನ್ನೊಂದು ವಿಚಿತ್ರವಾದ ಅನುಭವವನ್ನು ಹೇಳಿ ಮುಗಿಸುತ್ತೇನೆ. ಗುರುವೇ ಹೇಳಿಸುತ್ತಿದ್ದಾರೆ. ನಿಮ್ಮಂಥ ತಿಳಿದವರಿಗಲ್ಲದೆ ಮತ್ತಾರಿಗೆ ಹೇಳಬೇಕು? ಬೇರೆಯವರಿಗೆ ಹೇಳಿಕೊಂಡರೆ ಅವರು 'ಚಿಕ್ಕ ಹೈದನಿಗೆ ಹುಚ್ಚು ಹಿಡಿದಿದೆ' ಎಂದು ನೋಡಲು ಬಂದಾರು!

"ಶ್ರೀರಾಮರು ಇರುವುದು ನಿಜ; ನಾನು ಅವರನ್ನು ನೋಡಿಲ್ಲ, ನಿಮ್ಮ ಪಾದದಾಣೆ ನಾನು ನಿಜವನ್ನೇ ಆಡುತ್ತೇನೆ. ನಾನು ಮೂಢ. ವಿದ್ಯೆ-ಬುದ್ಧಿ ಇಲ್ಲದವ. ಬಡತನ ಮಾತ್ರ ಬೇಕಾದಷ್ಟಿದೆ. ಮನೆಯಲ್ಲಿ ನಾವು ಮೂವರು- ಗಂಡ, ಹೆಂಡತಿ, ಮಗ ಇಷ್ಟೇ. ಮೂವರ ಜೀವನಕ್ಕೆ, ಭೂಮಿ, ಆಕಾಶಗಳನ್ನೇ ಒಂದು ಮಾಡುತ್ತಿದ್ದೇವೆ. ಆದರೆ ಶ್ರೀರಾಮರ ದಯೆಯಿಂದ ಗಂಜಿ ಕುಡಿದುಕೊಂಡು ಬದುಕಿದ್ದೇವೆ. ಆವೊತ್ತಿಗೆ ಎಷ್ಟು ಬೇಕೋ ಅಷ್ಟನ್ನೇ ಶ್ರೀರಾಮರು ಕೊಡಿಸುತ್ತಿದ್ದಾರೆ. ಮನೆಯಲ್ಲಿ ಧನ-ಧಾನ್ಯವೇನೂ ಇರುವುದಿಲ್ಲ. ಕಬ್ಬಿಣ ಕುಟ್ಟಿಕೊಂಡು ಆಯಾ ದಿನದ ಜೀವನಕ್ಕೆ ಒಂದೋ ಎರಡೋ ಸಂಪಾದಿಸಿ, ಆಗ ಅಂಗಡಿಗೆ ಹೋಗಿ ರಾಗಿ, ಉಪ್ಪು ತರುತ್ತೇನೆ. ಎಷ್ಟೋ ದಿನ ಮಗುವಿಗೆ ಒಂದು ರೊಟ್ಟಿ ಮಾಡಿಕೊಟ್ಟು, ನಾವಿಬ್ಬರೂ ಶ್ರೀರಾಮರ ಹೆಸರನ್ನು ಹೇಳಿಕೊಂಡು ಬರೀಹೊಟ್ಟೆಯಲ್ಲಿ ನೀರು ಕುಡಿದು ಮಲಗಿದ್ದೇವೆ-

ನಾನು ನಿಜವನ್ನೇ ಹೇಳುತ್ತಿದ್ದೇನೆ. ನೀವು ನಂಬಬೇಕು. ಮಡಕೆ-ಕುಡಿಕೆಗಳಲ್ಲದೆ ನಾವು ಪಾತ್ರೆಗೀತ್ರೆಕೊಂಡೇ ಇಲ್ಲ. ಹುಲ್ಲಿನ ಚಾಪೆ-ದುಪ್ಪಟಿಗಳು ಮೂರು ಇವೆ. ಬಟ್ಟೆಗಳನ್ನು ಹಿಂಡಲು ನಮ್ಮವಳು ಎಲ್ಲರೂ ಸೇರುವ ಘಟ್ಟಕ್ಕೆ ಹೋಗದೆ, ಯಾರೂ ಸುಳಿಯದ ನದಿದಂಡೆಗೆ ಹೋಗಿ ಬರುತ್ತಾಳೆ. ಆದರೂ ಯಾರನ್ನೂ 'ದೇಹಿ' ಎಂದು ಯಾಚಿಸಿಲ್ಲ. ಇದನ್ನೆಲ್ಲ ಕಂಡುಹಿಡಿದ ಕೆಂಪವ್ವ ದಿನವೂ ಬೇಕಾದಷ್ಟು ಮಜ್ಜಿಗೆ ಕೊಡುತ್ತಾಳೆ. ಗುರುಗಳು ಹೇಳಿದಂತೆ ಪ್ರಾರಬ್ಧವನ್ನು ಅನುಭವಿಸಿ ಸವೆಸುತ್ತಿದ್ದೇವೆ. ಕೇಳುತ್ತಿದ್ದೀರಾ ಸ್ವಾಮಿ?" ಎಂದ.

"ಚಿಕ್ಕ ಹೈದ, ನಿನ್ನ ಬಡತನದ ವರ್ಣನೆಯನ್ನು ನಿಲ್ಲಿಸು. ನಾನೂ ಬಡತನವನ್ನು ಅನುಭವಿಸಿದ್ದೇನೆ. ಕೇಳುತ್ತ ಕೇಳುತ್ತ ಕಣ್ಣಿನಲ್ಲಿ ನೀರಿನ ಬದಲಾಗಿ ರಕ್ತ ಬರುತ್ತಿದೆ. ಶ್ರೀ ರಾಮರ ಕತೆಯನ್ನು ಮುಂದುವರಿಸು," ಎಂದೆ.

"ಶ್ರೀ ರಾಮರಂಥ ರಾಜಕುಮಾರರೇ ವನವಾಸ ಮಾಡಿದರಂತೆ! ಅಂದಮೇಲೆ ನಮ್ಮ ದಾರಿದ್ರ್ಯ ಎಷ್ಟರದು? ಇಷ್ಟಾದರೂ ಗುರುಗಳ ಆಶೀರ್ವಾದದಿಂದ ಕಳ್ಳಬುದ್ಧಿ ದೈನ್ಯ ಬುದ್ಧಿ ಬಂದಿಲ್ಲ. ಒಂದು ದಿನ ಎಲ್ಲಿಗೋ ಕೆಲಸಕ್ಕೆ ಹೋಗಿದ್ದೆ. ಆವೊತ್ತಿನ ಕೂಲಿಯನ್ನು ನಾಳೆ ಕೊಡುತ್ತೇನೆಂದರು. ಬರೀ ಕೈಲಿ ಮನೆಗೆ ಬಂದೆ. ಆಗಲೇ ಸಂಜೆಯಾಗಿತ್ತು. ಊರಿನವರೆಲ್ಲ ತಂತಮ್ಮ ಮನೆಗಳಲ್ಲಿ ದೀಪಗಳನ್ನು ಬೆಳಗಿಸಿದರು. ಮನೆಯಲ್ಲಿ ಏನೇನೂ ಇರಲಿಲ್ಲ. ಸೀಮೆ ಎಣ್ಣೆಯ ಬುಡ್ಡಿಗಳನ್ನು ಹಚ್ಚಬೇಕೆಂದರೆ ಅವುಗಳಲ್ಲಿ ಎಣ್ಣೆ ಇರಲಿಲ್ಲ. ಹೊತ್ತಿಸಲು ಬೆಂಕಿಕಡ್ಡಿಗಳೂ ಇಲ್ಲ. ಮನೆಯವರು ನಾನು ಬಂದಾಗ ಕತ್ತಲಲ್ಲಿ ಕುಳಿತಿದ್ದಾರೆ! ಆ ಹೊತ್ತಿಗೆ ಸರಿಯಾಗಿ ಯಾರೋ ನೆಂಟರು ಬಂದು, 'ಚಿಕ್ಕ ಹೈದ- ಚಿಕ್ಕ ಹೈದ' ಎಂದು ಅಬ್ಬರಿಸುತ್ತಿದ್ದಾರೆ. ಏನು ಮಾಡಬೇಕೆಂದು ತಿಳಿಯದ ಹೆಂಗಸು ಮೌನವಾಗಿದ್ದಾಳೆ. ನೆಂಟರು ಮನೆಯ ಬಾಗಿಲಿಗೆ ಬರುವ ವೇಳೆಗೆ ಸರಿಯಾಗಿ ನಾನೂ ಬಂದೆ. ಪರಿಸ್ಥಿತಿಯನ್ನು ಅರ್ಥಮಾಡಿಕೊಂಡು, 'ಶ್ರೀ ರಾಮ, ಇದೂ ನಿನ್ನ ಲೀಲೆ. ನಿನ್ನ ಆಟ,' ಎಂದುಕೊಂಡು, ಒಳಕ್ಕೆ ಬಂದು, 'ಯಾಕೆ ಇನ್ನೂ ದೀಪ ಬೆಳಗಿಲ್ಲ?' ಎಂದು ನಟನೆಯ ಕೋಪವನ್ನು ತೋರಿಸಿಕೊಂಡು ಕೂಗಿಕೊಂಡೆ. ಆಗ ನನ್ನ ಅಂತರಂಗವೆಲ್ಲ ರಾಮಮಯವಾಗಿತ್ತು. 'ಬನ್ನಿ ಮಾವಯ್ಯ ಒಳಗೆ ಬನ್ನಿ,' ಎಂದು ಬಂದವರನ್ನು ಕರೆದೆ. 'ಬೆಂಕಿಪೊಟ್ಟಣವೇ ಸಿಕ್ಕಲಿಲ್ಲ' ಎಂದು ಹೆಂಡತಿ ಗೊಣಗುತ್ತ ಹುಡುಕುವಂತೆ ನಟಿಸುತ್ತಿದ್ದಳು. ಅದೇ ಕ್ಷಣದಲ್ಲಿ ಯಾರೋ 'ಚಿಕ್ಕ ಹೈದ-ಚಿಕ್ಕ ಹೈದ' ಎಂದು ಕರೆದರು. 'ಬೇಗ ಬಾ' ಎಂದರು. ಇನ್ನೊಬ್ಬರು ಅತಿಥಿ ಬಂದರಲ್ಲ ಎಂದು ಕಳವಳವಾಯಿತು. 'ಶ್ರೀರಾಮಚಂದ್ರ, ಇದೂ ನಿನ್ನ ಲೀಲೆ. ಮಾನಹೋಗಿ ಪ್ರಾಣಉಳಿದೀತು' ಎಂದುಕೊಂಡು, 'ಯಾರು, ಯಾರು?' ಎಂದೆನ್ನುತ್ತ ಹೊರಗೆ ಬಂದೆ. 'ಕೈ ಹಿಡಿ' ಎಂದರು. ಹಾಗೇ ಮಾಡಿದೆ. ಟನ್ ಟನ್ ಎಂಬ ಶಬ್ದವಾಯಿತು. ಆಗ ನನ್ನ ಕೈಲಿ ಐದು ರೂಪಾಯಿ ನಾಣ್ಯಗಳಿದ್ದುವು. ಬಂದಿದ್ದವರು ನೆರಳಿನಂತೆ ಕಾಣಿಸಿಕೊಂಡು ಕ್ಷಣಾರ್ಧದಲ್ಲಿ ಕತ್ತಲೆಯಲ್ಲಿ ಕರಗಿಹೋಗಿದ್ದರು. ಅಷ್ಟು ಹೊತ್ತಿಗೆ ಕೆಂಪವ್ವ ಯಾಕೋ ಚಿಕ್ಕ ಹೈದನ ಮನೆಯಲ್ಲಿ ದೀಪ ಕಾಣುತ್ತಿಲ್ಲವೆಂದು ನೋಡಲು ಕೈಲಾಂದ್ರವನ್ನು ಹಿಡಿದುಕೊಂಡು ಬಂದಳು. ನನ್ನ ಕಣ್ಣಿನಲ್ಲಿ ನೀರು ಕಾವೇರಿ ಪ್ರವಾಹದಂತೆ ಹರಿದಿತ್ತು. 'ಶ್ರೀರಾಮ ಇದು ನಿನ್ನ ಪ್ರತ್ಯಕ್ಷ ಲೀಲೆ' ಎಂದುಕೊಂಡೆ. ಕೆಂಪವ್ವ ತನ್ನ ಕೈಲಾಂದ್ರವನ್ನು ಅಲ್ಲೇ ಬಿಟ್ಟುಹೋದಳು. ಶ್ರೀರಾಮ ಕೊಟ್ಟ ಹಣದಿಂದ ತಡವಾದರೂ ಅತಿಥಿಗಳನ್ನು ಸತ್ಕರಿಸಿದೆವು..." ಎಂದ ಆತ ಒಂದು ಕ್ಷಣ ಸುಮ್ಮನಿದ್ದು "ನೀವೇನನ್ನುತ್ತೀರಿ, ಸ್ವಾಮಿ? ಚಿಕ್ಕ ಹೈದ ಸುಳ್ಳುಕತೆ ಹೇಳುತ್ತಿಲ್ಲ; ನಿಜವನ್ನೇ ಹೇಳಿದ್ದೇನೆ. ತಾವೂ ಈ ಕತೆಯನ್ನು ಯಾರಿಗೂ ಹೇಳಬೇಡಿ," ಅಂದ.

ಚಿಕ್ಕಹೈದ ಸುಳ್ಳುಕತೆಯನ್ನು ಹೇಳಿ ಪಡೆಯಬೇಕಾದ ಪ್ರಯೋಜನವೇನೂ ಇರಲಿಲ್ಲ. ಸತ್ಯ-ಮಿಥ್ಯಗಳು ಹೇಗೇ ಇರಲಿ, ಅವನಾಡಿದ ಮಾತುಗಳಲ್ಲಿ ಕೃತ್ರಿಮತೆ ಏನೂ ಕಾಣಲಿಲ್ಲ. ಸ್ಫಟಿಕದ ಹೊಳಪೆಯಂತೆ ಸಹಜವಾಗಿತ್ತು. ಬೆಳಗಾದ ಮೇಲೆ ಅವನು ತನ್ನ ಕಂಬಳಿಯನ್ನು ಹೆಗಲಿಗೇರಿಸಿಕೊಂಡು ಕೈ ಮುಗಿದು ಹೊರಟುಹೋದ.

ನಲವತ್ತೆಂಟು ವರ್ಷಗಳ ತನ್ನ ಟೆಸ್ಟ್ ಕ್ರಿಕೆಟ್ ಇತಿಹಾಸದಲ್ಲಿ ೪೭ ಟೆಸ್ಟ್ ಪಂದ್ಯಗಳನ್ನಾಡಿದ್ದ ನ್ಯೂಜಿಲೆಂಡ್ ಒಮ್ಮೆಯೂ ಇಂಗ್ಲೆಂಡನ್ನು ಸೋಲಿಸಿದ ತೃಪ್ತಿ ಪಡೆದಿರಲಿಲ್ಲ. ಕಾಗದದ ಮೇಲೆ ನೋಡಿದಾಗ ಎರಡೂ ತಂಡಗಳು ಸಾಕಷ್ಟು ಪ್ರಬಲವಾಗಿದ್ದಂತೆ ಕಂಡರೂ ಇಂಗ್ಲೆಂಡ್ ಸ್ವಲ್ಪ ಬಲಶಾಲಿಯಾಗಿತ್ತು.

ವೆಲ್ಲಿಂಗ್ಟನ್ ಮೈದಾನದಲ್ಲಿ ಫೆಬ್ರುವರಿ ೧೦ರಂದು ಇಂಗ್ಲೆಂಡಿನ ವಿರುದ್ಧ ತನ್ನ ೪೮ನೇ ಟೆಸ್ಟ್ ಪಂದ್ಯ ಆಡಲು ಸಿದ್ಧಗೊಂಡಿದ್ದ ನ್ಯೂಜಿಲೆಂಡ್ ಈ ಬಾರಿ ಏನಾದರೂ ಮಾಡಿ ಗೆಲ್ಲಲೇಬೇಕೆಂಬ ಲೆಕ್ಕ ಹಾಕಿಕೊಂಡಿತ್ತು.

ಆದರೆ ಇಂಗ್ಲೆಂಡನ್ನು ಬಲಿಹಾಕುವದು ಹಗುರಾದ ಕೆಲಸವಾಗಿರಲಿಲ್ಲ. ತಂಡದಲ್ಲಿ ಜೆಫ್, ಬಾಯ್ಕಾಟ್, ಬಾಬ್ ವಿಲ್ಲಿಸ್, ಇಯಾನ್ ಬಾಥಮ್ ಡೆರಿಕ್ ರ್‍ಯಾಂಡಲ್, ಬಾಬ್ ಟೇಲರ್ ಮೊದಲಾದ ಅತಿರಥ ಮಹಾರಥರ ದಂಡೇ ಇತ್ತು.

ತಾಯ್ನಾಡಿನಲ್ಲಿ ನಡೆದ ಸರಣಿಯನ್ನು ಬಿಟ್ಟುಕೊಡಬಾರದೆನ್ನುವ ಗುರಿ ಹೊಂದಿದ್ದ ನ್ಯೂಜಿಲೆಂಡ್ ಸಹ ಬಲಿಷ್ಠವಾಗಿಯೇ ಇತ್ತಾದರೂ ತಂಡದಲ್ಲಿ ಬಾಯ್ಕಾಟ್ ಬಳಗವನ್ನು ಮಣಿಸುವ ಸಾಮರ್ಥ್ಯದ ಕೊರತೆ ಎದ್ದು ಕಾಣುತ್ತಿತ್ತು. ನ್ಯೂಜಿಲೆಂಡಿನ ಆಪತ್‌ಬ್ಬಾಂಧವ ರಿಚರ್ಡ್ ಹ್ಯಾಡ್ಲಿ ತಂಡದಲ್ಲಿ ಇರುವದರಿಂದ ಇಂಗ್ಲೆಂಡಿಗೆ ಸ್ವಲ್ಪ ಅಂಜಿಕೆ ಮೂಡಿತ್ತು. ಹ್ಯಾಡ್ಲಿ ಒಬ್ಬ ಉಪಯೋಗಿ ಬಾಟ್ಸ್‌ಮನ್ ಅಲ್ಲದೆ ಪಂದ್ಯದ ಗತಿಯನ್ನೇ ತಿರುವು ಮುರುವು ಮಾಡುವ ಮಧ್ಯಮ ವೇಗದ ಬೌಲರ್ ಎನಿಸಿದ್ದ.

ಬಾಯ್ಕಾಟ್ ನೀಡಿದ ಆಹ್ವಾನದ ಮೇರೆಗೆ ಮೊದಲು ಬ್ಯಾಟಿಂಗ್ ಮಾಡಲು ನ್ಯೂಜಿಲೆಂಡ್




• ಆದಿಕೇಶವ

## ಅಂದಿನ ಆಟ !
## ಇಂದಿನ ನೋಟ !

ಮೈದಾನಕ್ಕಿಳಿದಾಗ ಪ್ರೇಕ್ಷಕ ಸಮೂಹದಲ್ಲಿ ಒಂದೇ ಪ್ರಶ್ನೆ: "ನಮ್ಮವರು ಇಂಗ್ಲೆಂಡಿನವರ ವಿರುದ್ಧ ಬೃಹತ್ ಮೊತ್ತ ಮಾಡುವರೆ?" ಈ ಪರಿಸ್ಥಿತಿಯಲ್ಲಿ ಆತಿಥೇಯರು ತಾವು ಇಂಗ್ಲೆಂಡಿಗೆ ಹೆದರುವುದಿಲ್ಲ ಅವರಿಗೆ ಬುದ್ಧಿ ಕಲಿಸುತ್ತೇವೆ ಎಂದು

ಪಂದ್ಯ: ನ್ಯೂಜಿಲೆಂಡ್ ವಿ. ಇಂಗ್ಲೆಂಡ್, ಪ್ರಥಮ ಟೆಸ್ಟ್
ಸ್ಥಳ: ಬೇಸಿನ್ ರಿಸರ್ವ್, ವೆಲ್ಲಿಂಗ್ಟನ್ ೧೯೭೭ -೭೮
ದಿನಾಂಕ: ೧೯೭೭-೭೮ ಫೆಬ್ರುವರಿ, ೧೦, ೧೧, ೧೨, ೧೪, ೧೫

ತೋರಿಸುವದು ಅವಶ್ಯವಾಗಿತ್ತು.

### ಮೈದಾನದಲ್ಲಿ

ವೆಲ್ಲಿಂಗ್ಟನ್‌ನಲ್ಲಿ ಈ ಪಂದ್ಯ ಆಡುವ ಮೂಲಕ ತನ್ನ ಟೆಸ್ಟ್ ಕ್ರಿಕೆಟ್ ಜೀವನ ಆರಂಭಿಸಿದ ಡರ್ಬಿಶೈರ್‌ನ ಎಡಗೈ ಬ್ಯಾಟ್ಸ್‌ಮನ್ ಜಾನ್ ರೈಟ್ (೫೫) ನ್ಯೂಜಿಲೆಂಡಿನ ಗೌರವದ ಮೊತ್ತಕ್ಕೆ ಭದ್ರ ಬುನಾದಿ ಹಾಕಿದ. ಪಂದ್ಯದ ಮೊದಲ ಚೆಂಡಿನಲ್ಲೇ ಔಟಾಗುವುದರಿಂದ ಬಚಾವಾದ ರೈಟ್ ಅತ್ಯಂತ ತಾಳ್ಮೆಯುತ ಆಟ ಆಡಿ ಪ್ರೇಕ್ಷಕರ ಸಹನೆ ಕೆಣಕಿದ. ರನ್ ಗಳಿಸುವದು ಬೇಡವೇಬೇಡ ಎನ್ನುವಂತೆ ಆಡಿದ ರೈಟ್ ಮೊದಲ ರನ್‌ಗಳಿಸಲು ೪೭ ನಿಮಿಷ ತೆಗೆದುಕೊಂಡನಲ್ಲದೆ ಇಡೀ ದಿನ ಕ್ರೀಸ್‌ನಲ್ಲಿ ಔಟಾಗದೆ ಉಳಿದು ಬರೀ ೫೫ ರನ್ ಗಳಿಸಿದ.

ಇದಕ್ಕೂ ಮುನ್ನ ನ್ಯೂಜಿಲೆಂಡಿನ ನಂಬಿಕಸ್ಥ ಆ್ಯಂಡರಸನ್ (೨೮) ಮತ್ತು ಹೋವರ್ತ್ (೧೩) ಓಲ್ಡ್ (೫೪-೬)ನ ಹೊಸ ಬೌಲಿಂಗ್ ಬಿರುಗಾಳಿಗೆ ತಡೆದುಕೊಳ್ಳದೆ ಬೇಗನೇ ಔಟಾಗಿ ಅಭಿಮಾನಿಗಳಿಗೆ ನಿರಾಶೆ ಮೂಡಿಸಿದರು. ನಂತರ ಬಂದ ಬರ್ಗೆಸ್ (೯) ಸಹ ಬಹಳ ಹೊತ್ತು ನಿಲ್ಲಲಿಲ್ಲ.

ಒಂದು ತುದಿಯಲ್ಲಿ ವಿಕೆಟ್ ಬೀಳುತ್ತಿದ್ದಂತೆ ಇನ್ನೊಂದು ಬದಿ ಗಟ್ಟಿಯಾಗಿ ತಳವೂರಿದ್ದ ಜೇವಾನ್ ಕಾಂಗ್‌ಡನ್ (೪೪) ತಂಡದ ಮರ್ಯಾದೆ ಕಾಯಲು ಜೊತೆಗಾರನನ್ನು ಹುಡುಕುತ್ತಿದ್ದ. ಆಗ ಬಂದ ಪಾರ್ಕರ್ (೧೬) ಇಂಗ್ಲೆಂಡಿಗೆ ಭೀತಿ ಮೂಡಿಸುವ ಲಕ್ಷಣವನ್ನೇನೂ ತೋರದಿದ್ದರೂ ಐದನೇ ವಿಕೆಟ್ ಜೊತೆಯಾಟದಲ್ಲಿ ಬೇವಾನ್‌ನೊಂದಿಗೆ ಅಮೂಲ್ಯ ೪೯ ಓಟ ಕೂಡಿ ಹಾಕಿದ. ಆಗ ಪಾರ್ಕರ್‌ನನ್ನು ವಿಲ್ಲೀಸ್ ಬಲಿ ಹಾಕುತ್ತಿದ್ದಂತೆಯೇ ಇಂಗ್ಲೆಂಡ್ ಎದುರಾಳಿಯನ್ನು ಪೂರ್ತಿಯಾಗಿ ಸದೆಬಡಿದ ತೃಪ್ತಿಹೊಂದಿತು.

ಆದರೆ ನ್ಯೂಜಿಲೆಂಡ್‌ನ ಆಟ ಇಲ್ಲಿಗೇ ಮುಗಿಯಲಿಲ್ಲ. ಲೀಸ್ (೧) ನಿರ್ಗಮನದ ನಂತರ ಬೇವಾನ್‌ನನ್ನು ಕೂಡಿಕೊಂಡ ರಿಚರ್ಡ್ ಹ್ಯಾಡ್ಲಿ (ಔಟಾಗದೆ ೨೭) ತನ್ನ ಕೆಲ ಅದ್ಭುತ ಆಟದ ಪ್ರದರ್ಶನದಿಂದ ಇಂಗ್ಲೆಂಡಿನ ನಾಯಕನ ಮೆಚ್ಚುಗೆಯನ್ನೂ ಗಿಟ್ಟಿಸಿದ. ಬೇವಾನ್ ನಿರ್ಗಮನದ ನಂತರ ಹ್ಯಾಡ್ಲಿಗೆ ಉಳಿದ ಯಾವ ಆಟಗಾರನೂ ಸರಿಯಾದ ಕಂಪನಿ ಕೊಡಲೇ ಇಲ್ಲ. ಹೀಗಾಗಿ ಆತಿಥೇಯರ ಸ್ಕೋರು ೨೨೮ಕ್ಕೆ ಸೀಮಿತಗೊಂಡಿತು.

## ಗೆಲುವಿನ ದಾಹ ತಣಿಸಿದ ರಿಚರ್ಡ್ ಹ್ಯಾಡ್ಲಿ

ಆಗಾಗ ಬೀಳುತ್ತಿದ್ದ ಸ್ವಲ್ಪ ಸ್ವಲ್ಪ ಜಿನುಗು ಮಳೆ, ಬಲವಾದ ಗಾಳಿಯ ಮಧ್ಯ ನ್ಯೂಜಿಲೆಂಡ್‌ಗೆ ಬಿರುಗಾಳಿಯಾಗಿ ಕಂಡ ಓಲ್ಡ್ ಆರು ಬ್ಯಾಟ್ಸಮನ್‌ಗಳನ್ನು ಬಲಿಹಾಕಿ ಇಂಗ್ಲೆಂಡ್ ಶಿಬಿರದಲ್ಲಿ ಉತ್ಸಾಹ ಮೂಡಿಸಿದ. ಇದರಲ್ಲಿ ಸತತ ಒಂಭತ್ತು ಒಂಭತ್ತು ಓವರ್‌ಗಳ ಬೌಲಿಂಗ್‌ನಲ್ಲಿ ಕೇವಲ ೧೧ ಓಟ ನೀಡಿ ಕಬಳಿಸಿದ ನಾಲ್ಕು ವಿಕೆಟ್‌ಗಳು ಮತ್ತು ವಿಕೆಟ್ ಕೀಪರ್ ಟೇಲರ್ ಮಾಡಿದ ಅಮೋಘ ಕ್ಯಾಚ್‌ಗಳು ನ್ಯೂಜಿಲೆಂಡಿಗೆ ಬಹಳ ತುಟ್ಟಿಯಾಗಿ ಪರಿಣಮಿಸಿತು.

ಇಂಗ್ಲೆಂಡಿನವರನ್ನು ೨೦೦ರೊಳಗೆ ಕಬಳಿಸಬೇಕು ಎಂದು ಲೆಕ್ಕ ಹಾಕಿಕೊಂಡಿದ್ದ ಆತಿಥೇಯರಿಗೆ ಆರಂಭ ಆಟಗಾರ ಜೆಫ್ ಬಾಯ್ಕಾಟ್ ನಿರಾಶೆ

ಮೂಡಿಸಿದ. ಐದು ದಿನಗಳ ಪಂದ್ಯದಲ್ಲಿ ಓಟಗ ಳಿಕೆಗೆ ಆತುರ ಬೇಡ ಎನ್ನುವಂತೆ ಆಡಿದ ಬಾಯ್ಕಾಟ್ ಗಳಿಸಿದ್ದು ೭೭ ಓಟಗಳಾದರೂ, ಪಿಚ್‌ನಲ್ಲಿ ಏಳು ತಾಸು ೨೨ ನಿಮಿಷ ಗಟ್ಟಿಯಾಗಿ ನಿಂತಿದ್ದು ನ್ಯೂಜಿಲೆಂಡ್‌ಗೆ ತಲೆನೋವಾಗಿತ್ತು. ಆರಂಭ ಆಟಗಾರರನ್ನು ಬಿ.ಸಿ. ರೋಸ್ (೨೧)ನನ್ನು ಉರುಳಿಸಿದ ಕಾಲಿಂಜ್ (೪೨-೩) ಬಾಯ್ಕಾಟ್ ವಿಕೆಟ್ ಎಗುರಿಸಿದಾಗ ಆತಿಥೇಯರ ಶಿಬಿರದಲ್ಲಿ ಸಮಾಧಾನದ ಉಸಿರು ತೇಲಿಬಂ ದಿತು.

ಇಂಗ್ಲೆಂಡಿನ ಆಟ ಬಾಯ್ಕಾಟ್ ನಿರ್ಗಮನ ದೊಂದಿಗೇ ಕೊನೆಗೊಂಡಿತು. ತಲೆನೋವಾಗಿದ್ದ ಬಾಯ್ಕಾಟ್ ಬೀಳುವದನ್ನೇ ಕಾಯುತ್ತಿದ್ದ ಹ್ಯಾಡ್ಲಿ (೭೪-೪) ಕಾಲಿಂಜ್ ಮತ್ತು ಕಾಂಗಡನ್ (೧೪-೨) ಇಂಗ್ಲೆಂಡ್ ಬ್ಯಾಟಿಂಗ್ ಬುಡವನ್ನೇ ಕತ್ತರಿಸಿ ೨೧೫ ಓಟಗಳಿಗೆ ಸಮಾಪ್ತಿಗೊಳಿಸಿದರು. ಇದರಲ್ಲೇ ಏಕಾಂಗಿ ಹೋರಾಟ ನಡೆಸಿದ ಗ್ರಹಾಂ ರೂಪ್ ೩೭ ಓಟ ಗಳಿಸಿದ.

ಹದಿಮೂರು ಓಟಗಳ ಮುನ್ನಡೆಯೊಂದಿಗೆ ಎರಡನೆ ಸರದಿಗೆ ಮೈದಾನಕ್ಕಿಳಿದ ನ್ಯೂಜಿಲೆಂಡ್ ಮೊದಲ ಹುದ್ದರಿ ಜೊತೆಯಾಟದಲ್ಲಿ ೫೦ರ ಗಡಿ ದಾಟಿದಾಗ ಇಂಗ್ಲೆಂಡಿಗೆ ಚಿಂತೆ ಮೂಡಲು ಶುರುವಾಯಿತು. ಪ್ರಥಮ ಸರದಿಯಲ್ಲಿ ತಂಡಕ್ಕೆ ಭದ್ರ ಅಡಿಪಾಯ ಹಾಕಿದ್ದ ಆರಂಭದ ಜೋಡಿ ಜಾನ್ ರೈಟ್ (೧೯) ಮತ್ತು ರಾಬರ್ಟ್ ಆ್ಯಂಡ ರಸನ್ (೨೬) ಮತ್ತೊಮ್ಮೆ ಉಪಯುಕ್ತ ಪ್ರದರ್ಶನ ನೀಡಿದರು.

ಆದರೆ ಮುಂದೆ ಬಾಬ್ ವಿಲ್ಲಿಸ್ ನೀಡಿದ ಹೊಡೆತ ನ್ಯೂಜಿಲೆಂಡ್‌ಗೆ ಚೇತರಿಸಿಕೊಳ್ಳದಂತೆ ಮಾಡಿತು. ಪಿಚ್‌ನ ವರ್ತನೆಯನ್ನು ಚೆನ್ನಾಗಿ ಗಮ ನಿಸಿದ್ದ ವಿಲ್ಲಿಸ್ ೩೧ ಎಸೆತಗಳಲ್ಲಿ ಕೇವಲ ೧೪ ಓಟ ನೀಡಿ ನಾಲ್ಕು ವಿಕೆಟ್‌ಗಳನ್ನು ಹೆಕ್ಕಿದ್ದು ಇಂಗ್ಲೆಂಡಿಗೆ ನಿರೀಕ್ಷಿಸಲಾರದ ವರ ಸಿಕ್ಕಂತೆ ಆಯಿತು. ವಿಲ್ಲೀಸ್‌ಗೆ ಅಷ್ಟೇ ಉತ್ತಮ ಬೆಂಬಲ ನೀಡಿದ ಬಾಥಮ್ (೧೩-೨) ಆತಿಥೇಯರಿಗೆ ಸೋಲಿನ ಭೀತಿ ಹುಟ್ಟಿಸಿದ. ಒಂದು ಹಂತದಲ್ಲಿ ೮೨ ಓಟಗಳಿಗೆ ಒಂದೇ ಹುದ್ದರಿ ಕಳೆದುಕೊಂಡಿದ್ದ ನ್ಯೂಜಿಲೆಂಡ್ ತನ್ನ ಸರದಿಯನ್ನು ಬರೀ ೧೨೩ ಓಟಗಳಿಗೆ ಮುಗಿಸಿ ತನ್ನನ್ನು ತಾನೇ ಹಳಿದುಕೊಂ ಡಿತು.

ಇಂಗ್ಲೆಂಡಿಗೆ ಮತ್ತೊಮ್ಮೆ ಭರ್ಜರಿ ಜಯಸಾ ಧಿಸಲು ಅತಿ ಸುಲಭವಾದ ೧೩೭ ಓಟಗಳು ಮಾತ್ರ ಬೇಕು. ತಂಡದಲ್ಲಿ ಅತಿರಥ ಮಹಾರಥರ ಬ್ಯಾಟಿಂಗ್ ದಂಡೇ ಇದೆ. ಹೀಗಾಗಿ ಗೆಲುವು ಅವರಿಗೇ ಎಂದು ಎಷ್ಟೋ ಮಂದಿ ಲೆಕ್ಕ ಹಾಕಿ ಬಿಟ್ಟಿದ್ದರು. ಸ್ವತಃ ನ್ಯೂಜಿಲೆಂಡ್ ಈ ರೀತಿ ಯೋಚಿಸಿತ್ತು. ಆದರೆ ಮುಂದೆ ನಡೆದದ್ದೆಲ್ಲ ಕ್ರಿಕೆಟ್ ಜಗತ್ತಿನ ಒಂದು ಅಪೂರ್ವ ಅವಿಸ್ಮರಣೀಯ ಇತಿಹಾಸ. ಕೆಲವೇ ಕೆಲವು ಐತಿಹಾಸಿಕ ವಿಜಯದ ದಾಖಲೆಗಳ ಪಟ್ಟಿಗೆ ಇದೊಂದು ಸೇರ್ಪಡೆಯಾ ಯಿತು.

ತಾವು ಗೆದ್ದೇಬಿಟ್ಟೆವೆಂಬ ಉತ್ಸಾಹದಲ್ಲಿ ಆಟಕ್ಕಿ ಳಿದಿದ್ದ ಇಂಗ್ಲೆಂಡ್ ತನ್ನ ಟೆಸ್ಟ್ ಇತಿಹಾಸದಲ್ಲಿಯೇ ಈ ರೀತಿಯ ಸರ್ವನಾಶವನ್ನು ಕಂಡಿರಲಿಲ್ಲ. ನಾಲ್ಕನೇ ದಿನದ ಕಡೆಯ ಎರಡು ತಾಸಿನ ಆಟದಲ್ಲಿ ಪ್ರವಾಸಿಗರ ಎಂಟು ವಿಕೆಟ್‌ಗಳು ಕೇವಲ ೫೩ ಓಟಗಳಿಗೆ ಉದುರಿಬಿದ್ದಿದ್ದವು. ಆರಂಭ ಆಟಗಾರ ಬ್ರಿಯಾನ್ ರೋಸ್ ಎದುರಾಳಿಗಳ ಅರ್ಭಟದಿಂದ ಕೈಗೆ ಹೊಡೆತ ತಿಂದು ಆಟಕ್ಕೆ ನಿವೃತ್ತಿ ಹೇಳಿದ್ದ.

ಮೊದಲ ಇನಿಂಗ್ಸ್‌ನಲ್ಲಿ ಮೂರು ವಿಕೆಟ್ ಗಳಿಸಿದ್ದ ರಿಚರ್ಡ್ ಕಾಲಿಂಗ್ (೩೫-೩) ಜೆಫ್ ಬಾಯ್ಕಾಟ್ (೧) ವಿಕೆಟ್ ಹಾರಿಸುತ್ತಿದ್ದಂತೆಯೇ ಇಂಗ್ಲೆಂಡಿನ ಪತನ ಆರಂಭಗೊಂಡಿತು. ಈ ಪಂದ್ಯದಲ್ಲಿ ಎರಡನೇ ಬಾರಿಗೆ ಬಾಯ್ಕಾಟ್ ವಿಕೆಟ್ ಆಹುತಿ ಪಡೆದ ಕಾಲಿಂಗ್ ಟೆಸ್ಟ್ ಪಂದ್ಯದಲ್ಲಿ ತನ್ನ ವಿಕೆಟ್ ಶತಕದತ್ತ ಮುನ್ನಡೆದ.

ಕಾಲಿಂಗ್‌ನಿಂದ ಪ್ರೇರಣೆಗೊಂಡ ರಿಚರ್ಡ್ ಹ್ಯಾಡ್ಲಿ ಆನಂತರ ಧೃತಿಗೆಟ್ಟಿದ್ದ ಇಂಗ್ಲೆಂಡಿನ ಬ್ಯಾಟಿಂಗ್ ಬುಡವನ್ನೇ ಕತ್ತರಿಸಿ ಒಗೆದ. ಇಂಗ್ಲೆಂಡ್ ಪರವಾಗಿ ಆಗ ಬಾಥಮ್ (೧೯) ಮತ್ತು ಫಿಲ್ ಎಡ್ಮಂಡ್ (೧೧) ಇಬ್ಬರೇ ಎರಡಂ ಕಿಯ ಗೆರೆ ದಾಟಿದ್ದರು.

ಪಂದ್ಯದ ಕಡೆಯ ದಿನ ಮಳೆಯಿಂದ ೪೦ ನಿಮಿಷ ಆಟ ತಡವಾಗಿ ಆರಂಭಗೊಂಡಿತು. ಆಗ ಇಂಗ್ಲೆಂಡಿಗೆ ಗೆಲುವಿಗಾಗಿ ಪ್ರಯತ್ನಿಸುವ ಆಸೆಯಂತೂ ಉಳಿದಿರಲೇ ಇಲ್ಲ. ಇಡೀ ತಂಡದ ಪ್ರಾರ್ಥನೆ ಒಂದೇ ಆಗಿತ್ತು- ದಿನ ಪೂರ್ತಿ ಮಳೆ ಬಂದು ಆಟ ನಡೆಯದಿರಲಿ ಎಂಬುದು. ಆದರೆ ಹಾಗಾಗಲಿಲ್ಲ, ಮುನ್ನಾದಿನದ ಅದ್ಭುತ ಪ್ರದರ್ಶನ ಗುಂಗಿನಲ್ಲಿಯೇ ಇದ್ದ ರಿಚರ್ಡ್ ಹ್ಯಾಡ್ಲಿ ಕಡೆಯ ಎರಡು ವಿಕೆಟ್‌ಗಳನ್ನು ಎಗುರಿಸಿದ್ದಲ್ಲದೆ, ಇಂಗ್ಲೆಂಡಿನ ಸರದಿಯನ್ನು ೬೪ಕ್ಕೆ ಮುಕ್ತಾಯಗೊಳಿಸಿ ನ್ಯೂಜಿಲೆಂಡಿಗೆ ಎಂದೆಂದೂ ಕಾಣದಂತಹ, ಮರೆಯಲಾರದಂತಹ ೭೨ ಓಟಗಳ ಅಭೂತ ಪೂರ್ವ ವಿಜಯ ತಂದುಕೊಟ್ಟ.

ಇಂಗ್ಲೆಂಡ್ ಪಾಲಿಗೆ ಪೆಡಂಭೂತವಾಗಿ ಅವತರಿಸಿದ ಹ್ಯಾಡ್ಲಿ ೧೩.೩ ಓವರುಗಳನ್ನು ಮಾಡಿ ೨೬ ಓಟಗಳನ್ನಿತ್ತು ಆರು ಮಂದಿಯನ್ನು ನುಂಗಿ ಹಾಕಿದ. ಈ ಪಂದ್ಯದಲ್ಲಿ ಹ್ಯಾಡ್ಲಿಗೆ ದಕ್ಕಿದ್ದು ಹತ್ತು ವಿಕೆಟ್‌ಗಳು. ಇದಕ್ಕಾಗಿ ಆತ ತೆತ್ತ ಓಟ ೧೦೦. ಆದರೆ ಇದೆಲ್ಲಕ್ಕೂ ಮುಖ್ಯವಾಗಿ ನಾಲ್ಕನೆ ದಿನ ಆತ ಮಾಡಿದ ಬೌಲಿಂಗ್ ಇಡೀ ನ್ಯೂಜಿಲೆಂಡಿನ ತುಂಬಾ ಚರ್ಚೆಯಾಗಿತ್ತು. ಅಂತಹ ಅದ್ಭುತ ಬೌಲಿಂಗ್ ಪ್ರದರ್ಶನ ಅದು.

ಜೆಫ್ ಬಾಯ್ಕಾಟ್ ಹೇಳಿದ, "ನಾನು ಈ ಹಿಂದೆ ಎಷ್ಟೋ ಪಂದ್ಯ ಆಡಿದ್ದೆ. ಆದರೆ ಇಂತಹ ಅಮೋಘ ರೋಚಕ ಪಂದ್ಯದ ಅನುಭವ ಆಗಿರಲಿಲ್ಲ. ಮುಖ್ಯವಾಗಿ ವೆಲ್ಲಿಂಗ್ಟನ್ ಮೈದಾನದಲ್ಲಿ ಪ್ರತಿಕೂಲ ವಾತಾವರಣವಿತ್ತು. ಬಿರುಸಾಗಿ ಬರುತ್ತಿದ್ದ ಗಾಳಿ ನನ್ನ ಕಣ್ಣಿಗೆ ಬಹಳ ತೊಂದರೆ ನೀಡಿದ್ದರಿಂದ ಉತ್ತಮ ಆಟ ನೀಡಲು ನನ್ನಿಂದ ಸಾಧ್ಯವಾಗಲಿಲ್ಲ. ಆದರೆ ಈ ಪರಿಸ್ಥಿತಿ ಎರಡೂ ತಂಡಕ್ಕಿದ್ದುದರಿಂದ ನ್ಯೂಜಿಲೆಂಡ್ ಗೆಲುವಿಗೆ ನಾನು ಅಭಿನಂದನೆ ಸಲ್ಲಿಸುತ್ತೇನೆ. ಆತಿಥೇಯರ ಪಾಲಿಗೆ ಇದೊಂದು ಅವಿಸ್ಮರಣೀಯ ಗೆಲುವು."

ರೀಚರ್ಡ್ ಹ್ಯಾಡ್ಲಿ- "ನನ್ನ ಕ್ರಿಕೆಟ್ ಜೀವನದಲ್ಲಿಯೇ ಇದೊಂದು ಅತ್ಯಂತ ಸರ್ವಶ್ರೇಷ್ಠ ಸಂತಸದ ದಿನ ಈ ದಿನಕ್ಕಾಗಿ ನಾವು ದೀರ್ಘಕಾಲದಿಂದ ಕಾಯುತ್ತಿದ್ದೆವು. ಈ ಗೆಲುವು ನ್ಯೂಜಿಲೆಂಡಿನ ಆತ್ಮಸ್ಥೈರ್ಯವನ್ನು ಹೆಚ್ಚಿಸಿದೆ," ಎಂದ.

## ಎರಡನೆ ಟೆಸ್ಟ್

ಇಂಗ್ಲೆಂಡ್ ಎರಡನೆ ಟೆಸ್ಟನ್ನು ೧೭೪ ಓಟಗಳಿಂದ ಭರ್ಜರಿಯಾಗಿ ಗೆದ್ದುಕೊಂಡು ಮೊದಲ ಟೆಸ್ಟಿನಲ್ಲಿ ಕಂಡಿದ್ದ ಹೀನಾಯ ಪರಾಭವದ ಸೇಡು ತೀರಿಸಿಕೊಂಡಿತು. ಈ ಟೆಸ್ಟ್ ಪಂದ್ಯದಲ್ಲಿ ಇಯಾನ್ ಬಾಥಂ ಚೊಚ್ಚಲ ಟೆಸ್ಟ್ ಶತಕ ಮತ್ತು ಎಂಟು ಹುದ್ದರಿಗಳನ್ನು ಪಡೆದಿದ್ದು ಮುಖ್ಯ ಆಕರ್ಷಣೆ ಎನಿಸಿತು.

## ಮೂರನೇ ಟೆಸ್ಟ್

ಸರಣಿಯ ಅಂತಿಮ ಹಾಗೂ ಮೂರನೆ ಟೆಸ್ಟ್ 'ಡ್ರಾ'ದಲ್ಲಿ ಕೊನೆಗೊಂಡಿತು. ಸರಣಿ ಸಮಸ್ಥಿತಿಯಲ್ಲಿ ಮುಗಿಯಿತು. ●

---

## ಐಡಿಯಾ!

ಥಾಮಸ್ ಆಲ್ವಾ ಎಡಿಸನ್ ತಾನು ಕಟ್ಟಿಸಿದ್ದ ಭವ್ಯ ಬೇಸಿಗೆ ಭವನದ ವಿಚಾರದಲ್ಲಿ ತುಂಬ ಹೆಮ್ಮೆಪಡುತ್ತಿದ್ದ. ಒಮ್ಮೆ ಕೆಲವರು ಗಣ್ಯರನ್ನು ಕರೆದುಕೊಂಡು ಬಂದು ಅದರಲ್ಲಿದ್ದ ಶ್ರಮ ತಪ್ಪಿಸುವ ಸಾಧನಗಳನ್ನು ಒಂದೊಂದಾಗಿ ತೋರಿಸುತ್ತಿದ್ದ. ಆದರೆ ಭವನದ ಒಳಗೆ ಹೋಗುವಾಗ ಒಂದು ತಿರುಗು ಬಾಗಿಲಿನ ಮೂಲಕವೇ ಹಾಯಬೇಕಾಗಿತ್ತು. ಶ್ರಮಪಟ್ಟು ಅದನ್ನು ತಿರುಗಿಸಿಯೇ ಒಳಕ್ಕೆ ಕಾಲಿಡಬೇಕಾಗಿತ್ತು. ಗಣ್ಯರಲ್ಲೊಬ್ಬ ಕೊನೆಗೆ ಕೇಳಿಯೇಬಿಟ್ಟ:

"ಇಷ್ಟೆಲ್ಲ ವಿಚಿತ್ರ ಸಾಧನಗಳನ್ನು ಅಳವಡಿಸಿರುವಾಗ ಇಷ್ಟು ಭಾರವಾದ ತಿರುಗು ಬಾಗಿಲನ್ನೇಕೆ ಇಟ್ಟುಕೊಂಡಿರುವಿರಿ?"

"ಈ ಬಾಗಿಲನ್ನು ತಳ್ಳುವ ಪ್ರತಿಯೊಬ್ಬನೂ ಎಂಟು ಗ್ಯಾಲನ್ ನೀರನ್ನು ನನ್ನ ಮನೆಯ ತೊಟ್ಟಿಗೆ ತುಂಬುತ್ತಾನಲ್ಲ, ಇರಲಿ ಬಿಡಿ," ಎಂದನಂತೆ ಎಡಿಸನ್.

ಸಂಗ್ರಹ: ಎಂ.ಜಿ. ಕರುಣಾಕರ

# ಮದನ ಕಾಮನ ಕಥೆಗಳು

## ೩

## ಚಿತ್ರ ಕನ್ಯೆಯರ

ಸಾಮಾನ್ಯವಾಗಿ ಇಂಥ ಪ್ರಯಾಣ ರಾಜಕುಮಾರ ಮದನಕಾಮನಿಗೆ ಅತ್ಯಂತ ಪ್ರಿಯವಾದುದು. ಆದರೆ ಕಳೆದ ದಿನಗಳಲ್ಲಿ ನಡೆದುಹೋದ ಘಟನೆಗಳಿಂದಾಗಿ ಅವನ ಮನಸ್ಸು ಸ್ಥಿಮಿತದಲ್ಲಿರಲಿಲ್ಲ. ತುಂಬ ಚಟುವಟಿಕೆಗಳಿಂದ ಕೂಡಿದ ನಾಟಕದಲ್ಲಿ ಅವನು ಮೂಕ ಪ್ರೇಕ್ಷಕನಾಗಿದ್ದನು. ಅಂತೆಯೆ ಚಾತುರ್ಯನು ಕೇಳಿದ ಪ್ರಶ್ನೆಗಳಿಗೆಲ್ಲ ಮನಸ್ಸಿಲ್ಲದ ಮನಸ್ಸಿನಿಂದಲೇ ಏನೇನೋ ಉತ್ತರ ನೀಯುತ್ತಿದ್ದನು. ಇದರಿಂದ ಚಾತುರ್ಯನಿಗೆ ಉತ್ಸಾಹ ಭಂಗವಾದಂತಾಗುತ್ತಿತ್ತು. ಆದರೆ ಅದು ಆ ಕ್ಷಣಕ್ಕೆ ಮಾತ್ರ. ಅವನು ತನ್ನ ಮಿತ್ರನು ಕಳೆದುಹೋದ ತನ್ನತನವನ್ನು ಮರಳಿಪಡೆದು ಹೊಸ ಬೆಳಕನ್ನು ಕಾಣುವಂತೆ ಮಾಡಿಯೇತೀರಬೇಕೆಂದು ಮನಸ್ಸಿನಲ್ಲಿಯೆ ದೃಢ ಸಂಕಲ್ಪ ಮಾಡಿಕೊಂಡಿದ್ದನು.

ಇಂದ್ರಪುರಿಯನ್ನು ತಲುಪಿದ ನಂತರ ರಾಜಕುಮಾರನಿಗೆ ಸಾಕಷ್ಟು ವಿಶ್ರಾಂತಿ ಅವಶ್ಯವಿರುವುದನ್ನು ಮನಗಂಡ ಚಾತುರ್ಯನು ಹಲವಾರು ಕಡೆಗಳಲ್ಲಿ ವಿಚಾರಿಸಿ ತಮ್ಮಿಬ್ಬರನ್ನು ಅತಿಥಿಗಳೆಂದು ಸ್ವೀಕರಿಸಲೊಪ್ಪಿದ ವೃದ್ಧೆಯೊಬ್ಬಳ ಮನೆಗೆ ಅವನನ್ನು ಕರೆದೊಯ್ದನು.

"ತಾಯಿ, ನಾನು ಹಾಗೂ ನನ್ನೀ ಮಿತ್ರನು ಈ ಊರಿಗೆ ತೀರ ಅಪರಿಚಿತರು. ದೂರದ ದೇಶದಿಂದ ಇಲ್ಲಿಗೆ ಬಂದಿದ್ದೇವೆ. ಕೆಲ ದಿನಗಳವರೆಗೆ ಇಲ್ಲಿ ಇರಬೇಕೆಂದು ಇಚ್ಛೆಯಿದೆ. ನಮಗೆ ಸಾದಾ ಊಟ ಹಾಗೂ ಮಲಗಲು ಸಾದಾ ಹೊರಸುಗಳನ್ನು ಕೊಟ್ಟರೆ ಸಾಕು. ನಮ್ಮೊಂದಿಗೆ ಎರಡು ಕುದುರೆಗಳನ್ನು ತಂದಿದ್ದೇವೆ. ಅವನ್ನು ಹಿತ್ತಲಲ್ಲಿ ಗಿಡದ ನೆರಳಲ್ಲಿ ಕಟ್ಟುತ್ತೇವೆ. ಅವುಗಳಿಗೆ ಧಾನ್ಯ ಹಾಗು ಹುಲ್ಲನ್ನು ನೀವು ಕೊಡಬೇಕು. ಇದೆಲ್ಲಕ್ಕಾಗಿ ನಾವು ನಿಮಗೆ ದಿನವೊಂದಕ್ಕೆ ಒಂದು ಚಿನ್ನದ ನಾಣ್ಯವನ್ನು ಕೊಡುತ್ತೇವೆ. ನಿಮಗೆ ಯಾವ ತೊಂದರೆಯನ್ನೂ ಕೊಡುವುದಿಲ್ಲ. ನಮ್ಮನ್ನು ನಿಮ್ಮ ಮಕ್ಕಳೆಂದೇ ಭಾವಿಸಿರಿ," ಎಂದು ಚಾತುರ್ಯನು ಆ ವೃದ್ಧೆಯನ್ನು ಕುರಿತು ಹೇಳಿದಾಗ ಅವಳು ಹಲ್ಲಿಲ್ಲದ ಬಾಯಿತೆರೆದು ಸಂತಸವನ್ನು ಸೂಚಿಸಿದಳು. ಅರಳಿದ ಕಂಗಳಿಂದ ತನ್ನ ಆನಂದವನ್ನು ವ್ಯಕ್ತಗೊಳಿಸುತ್ತ ಅವಳು ತಕ್ಷಣ ಅತಿಥಿಗಳಿಗಾಗಿ ಕಾದಿರಿಸಿದ್ದ ಕೋಣೆಯನ್ನು ಸುವ್ಯವಸ್ಥಿತಗೊಳಿಸಲಾರಂಭಿಸಿದಳು. ಅನೇಕ ತಿಂಗಳುಗಳವರೆಗೆ ಅಲ್ಲಿಗಾರೂ ಬಾರದ್ದರಿಂದ ಅಲ್ಲೆಲ್ಲ ಕಸ ತುಂಬಿತ್ತು. ಅಲ್ಲಿ ಅವಳು ಕೆಲಸ ಮಾಡುವ ರೀತಿಯನ್ನು ಕಂಡಾಗ ಆಕೆಗಿಷ್ಟು ವಯಸ್ಸಾಗಿದೆಯೇ ಎಂದು ಸಂದೇಹಪಡುವಂತಾಯಿತು, ಈ ಇಬ್ಬರು ಯುವಕರಿಗೆ.

ಮಹೇಂದ್ರಪುರಿ ಬಿಟ್ಟಂದಿನಿಂದ ಯಾವ ವಿಷಯದಲ್ಲೂ ಆಸಕ್ತಿಯನ್ನೂ ತೋರಿರದಿದ್ದ ರಾಜಕುಮಾರ ಒಮ್ಮೆಲೇ ಗಾಂಭೀರ್ಯದ ಮುಸುಕನ್ನು ಬಿಸುಟಿ ಕೋಣೆಯನ್ನು ಸ್ವಚ್ಛಗೊಳಿಸುವಲ್ಲಿ ವೃದ್ಧೆಗೆ ನೆರವಾಗಲು ಮುಂದಾದನು. ಇದೇ ಕ್ಷಣಕ್ಕಾಗಿ ಎದುರುನೋಡುತ್ತಿದ್ದ ಚಾತುರ್ಯನೂ ಅವರಿಬ್ಬರನ್ನು ಕೂಡಿಕೊಂಡನು. ಮನೆಯಲ್ಲಿ ಅವಶ್ಯಕತೆಗಿಂತ ಹೆಚ್ಚಿನ ಸೌಕರ್ಯಗಳು ಇರುವುದರಿಂದಾಗಿ ಮಾಡಲು ಕೆಲಸವೇ ಇಲ್ಲದ ಇಂಥ ಯುವಕರ ಕೈಗಳು ಬೇರೆಯವರ ಮನೆಯ ಕೆಲಸಗಳನ್ನು ಮಾಡಲು ಹಾತೊಯುತ್ತಿರುವುದರಲ್ಲಿ ಆಶ್ಚರ್ಯ

ವೇನಿಲ್ಲ. ಬಹಳ ಸಲ ಈ ಯುವಕರಿಬ್ಬರಿಗೂ ಮಾಡಲಿಕ್ಕಾಗದ ಕೆಲಸಗಳನ್ನು ಮುದುಕಿಯು ಸಲೀಸಾಗಿ ಮಾಡಿದಾಗ ಮೂವರೂ ಹೊಟ್ಟೆ ಹುಣ್ಣಾಗುವಂತೆ ನಕ್ಕುಬಿಡುತ್ತಿದ್ದರು.

ಅಂದು ಅವರಿಬ್ಬರೂ ಮನದಣಿಯುವಷ್ಟು ಹೊತ್ತು ಸ್ನಾನ ಮಾಡಿದರು. ನಂತರ ವೃದ್ಧೆಯು ಬಡಿಸಿದ್ದನ್ನೆ ರುಚಿ ಮಾಡಿಕೊಂಡು ಉಂಡು ಹರಿದ ಚಾಪೆಗಳ ಮೇಲೆಯೇ ಹಾಯಾಗಿ ನಿದ್ರೆ ಹೋದರು. ಪ್ರವಾಸದಿಂದಾಗಿ ತೀರ ಬಳಲಿ ಹೋದ ಅವರು ಮಲಗುವುದೊಂದೇ ತಡ, ನಿದ್ರೆ ಅವರನ್ನಾವರಿಸಿಬಿಟ್ಟಿತು.

ಕೆಲ ದಿನಗಳು ಕಳೆಯುವುದರೊಳಗೆಯೇ ರಾಜಕುಮಾರ ಮದನಕಾಮನು ಮತ್ತೆ ಮೊದಲಿನಂತೆ ನಿಶ್ಚಿಂತನಾದನು. ಅವನ ನಗು ವಾತಾವರಣದಲ್ಲೆಲ್ಲ ಹಿತವಾದ ತರಂಗಗಳನ್ನೆಬ್ಬಿಸತೊಡಗಿತು. ಈ ಸಂಪೂರ್ಣ ವಿಶ್ರಾಂತಿ ಅವನಲ್ಲಿ ಮಾಡಿದ ಬದ

ನಗರದ ಅಚ್ಚುಕಟ್ಟಾದ ಬೀದಿಗಳಲ್ಲಿ ಅವರು ಅತ್ತಿತ್ತ ನೋಡುತ್ತ ಸಾವಕಾಶವಾಗಿ ನಡೆದರು. ಮುಗಿಲು ಮುಟ್ಟುವಂತಹ ಎತ್ತರ ಕಟ್ಟಡಗಳು ಆ ನಗರದ ವೈಶಿಷ್ಟವೆನಿಸಿದ್ದವು. ಪೇಟೆಯಲ್ಲಿ ಹಾಯ್ದು ಹಾಗೆಯೇ ಮುಂದೆ ಹೋದಾಗ ರಸ್ತೆಯ ಕೊನೆಗೆ ದಿನ್ನೆಯೊಂದರ ಮೇಲೆ ಭವ್ಯವಾದ ಶಿವಾಲಯವಿದ್ದುದನ್ನು ಕಂಡು ಅವರು ಕುದುರೆಯಿಳಿದು ಮೆಟ್ಟಲೇರಿ ಹೋದಾಗ ಮುಂಬಾಗಿಲಿಗೆ ಬೀಗವಿದ್ದುದನ್ನು ಕಂಡು ಚಕಿತರಾದರು.

ಕೆಳಗಿಳಿದುಬಂದು ದಾರಿಹೋಕನೊಬ್ಬನನ್ನು, "ಈ ದೇವಾಲಯವನ್ನು ಮುಚ್ಚಿ ಎಷ್ಟು ದಿನಗಳಾಯಿತು?" ಎಂದು ವಿಚಾರಿಸಿದರು.

ಜನರು ತಮ್ಮ ಪಾಲಿನ ವಂತಿಗೆ ಕೊಡದಾದ್ದರಿಂದ ವೆಚ್ಚವನ್ನು ತೂಗಿಸಲಾಗದೆಯೆ ಅಧಿಕಾರಿಗಳು ಕೆಲ ತಿಂಗಳುಗಳ ಹಿಂದೆಯೇ ದೇವಾಲಯವನ್ನು ಮುಚ್ಚಿದ್ದಾರೆಂದು ಅವರಿಗೆ ತಿಳಿದುಬಂತು.



ಲಾವಣೆಗಳನ್ನು ಕಂಡು ಚಾತುರ್ಯನಿಗೆ ಸಮಾಧಾನವಾಗಿತ್ತು. ಹೀಗಿರುತ್ತಿರಲೊಂದು ದಿನ ಮದನಕಾಮನು, "ಚಾತುರ್ಯ, ನಾವೀಗ ಸುಮ್ಮನೆ ಸಮಯವನ್ನು ವ್ಯಯಿಸುತ್ತಿದ್ದೇವೆ. ಹೊರಬಿದ್ದು ಊರು ನೋಡಲು ಹೋಗಲು ಇದು ಸಮಯವಲ್ಲವೆ? ಏನಾದರೂ ಚಟುವಟಿಕೆಯಲ್ಲಿ ತೊಡಗಲು ನನ್ನ ಕೈ ಕಾಲುಗಳು ಹಾತೊರೆಯುತ್ತಿವೆ. ನಾನಂತೂ ಆಲಸಿಯಾಗಿ ಕೂಡಲಾರೆ" ಎಂದು ನುಡಿದನು.

"ಹೌದು, ನೀನೆನ್ನುವುದು ನಿಜ. ಇದಕ್ಕೆಲ್ಲ ನೀನು ಸಿದ್ಧನಾಗುವ ದಾರಿಯನ್ನೇ ನಾನು ಕಾಯುತ್ತಿದ್ದೆ."

ಇಷ್ಟೆಂದವನೇ ಚಾತುರ್ಯನು ಹಿತ್ತಲಿಗೆ ಹೋಗಿ ಎರಡೂ ಕುದುರೆಗಳಿಗೆ ಥಡಿ ಹಾಕಿ ಬಾಗಿಲಿಗೆ ತಂದನು. ನಂತರ ಇಬ್ಬರೂ ಯೋಗ್ಯ ವಸ್ತ್ರಗಳನ್ನು ಧರಿಸಿಕೊಂಡು ಕುದುರೆಗಳನ್ನೇರಿದರು.

ರಾಜಕುಮಾರ ಹಾಗೂ ಮಂತ್ರಿಕುಮಾರರಿಗೆ ದೇವಾಲಯಗಳ ಬಗ್ಗೆ ತುಂಬ ಗೌರವವಿದ್ದುದರಿಂದ ಮೇಲಿನ ವೃತ್ತಾಂತ ಕೇಳಿ ವಿಷಾದವೆನಿಸಿತು. ಕೂಡಲೇ ಅವರಿಬ್ಬರೂ ನಗರದ ವರಿಷ್ಠಾಧಿಕಾರಿಯೆಡೆಗೆ ಹೋಗಿ, "ಸ್ವಾಮಿ, ಶಿವಾಲಯವನ್ನೇಕೆ ಮುಚ್ಚಿಬಿಟ್ಟಿದ್ದೀರಿ?" ಎಂದು ಪ್ರಶ್ನಿಸಿದರು. ಶಾಂತಚಿತ್ತದಿಂದ ಇವರ ಮಾತನ್ನಾಲಿಸಿದ ಅಧಿಕಾರಿಯ ಮನಸ್ಸನ್ನು ಪರಿವರ್ತಿಸಿ ನಾಗರಿಕರ ನೈತಿಕ ಆರೋಗ್ಯಕ್ಕೆ ದೇವಾಲಯದಲ್ಲಿ ನಿತ್ಯ ಪೂಜಾದಿಗಳು ನಡೆಯುವದರ ಅವಶ್ಯಕತೆಯನ್ನು ಅವನ ಮೇಲೆ ಬಿಂಬಿಸಲು ಅವರಿಬ್ಬರೂ ಸಮರ್ಥರಾದರು.

ಇಷ್ಟಕ್ಕೆಯೆ ಆ ಪ್ರಶ್ನೆಯ ಕೈ ಬಿಡದೆ ಅವರಿಬ್ಬರೂ ಊರಿನ ಪ್ರಮುಖರನ್ನು ಕಂಡು ದೇವಾಲಯದ ಸುವ್ಯವಸ್ಥೆ ಊರವರ ಆದ್ಯ ಕರ್ತವ್ಯವೆಂಬುದನ್ನು ಪರಿಣಾಮಕಾರಿಯಾದ ರೀತಿಯಲ್ಲಿ ತಿಳಿ

ಹೇಳಿದಾಗ ತಮ್ಮ ಪಾಲಿನ ವಂತಿಗೆಯನ್ನು ಸಲ್ಲಿಸಲು ಅವರೂ ಒಪ್ಪಿದರು. ಅನಂತರ ನಗರದ ವರಿಷ್ಠಾಧಿಕಾರಿಯು ದೇವಾಲಯದ ಬಾಗಿಲುಗಳನ್ನು ಮತ್ತೆ ತೆರೆಯಲು ಹಾಗು ನಿತ್ಯ ಪೂಜಾದಿಗಳನ್ನು ಪ್ರಾರಂಭಿಸಲು ಆಜ್ಞೆವಿಧಿಸಿದನು.

ಈ ವಾರ್ತೆ ಊರಲ್ಲೆಲ್ಲ ಹಬ್ಬಿ ದೇವಾಲಯ ಮತ್ತೆ ಸಾರ್ವಜನಿಕರಿಗೆ ಮುಕ್ತವಾಗುವ ದಿನದಂದು ಫಲಪುಷ್ಪಾದಿಗಳನ್ನು ತೆಗೆದುಕೊಂಡು ಸಾವಿರಾರು ಜನರು ಅಲ್ಲಿಗೆ ಬಂದರು. ಅಂದು ದೇವಾಲಯವನ್ನು ಸಂದರ್ಶಿಸಿದ ಮೊದಲಿಗರಲ್ಲಿ ಮದನಕಾಮ ಹಾಗು ಚಾತುರ್ಯರಿದ್ದರು. ಪ್ರೇಕ್ಷಕರ ಮನದಲ್ಲಿ ಭಕ್ತಿಯ ಸೆಲೆಯನ್ನೇ ಪುಟಿಸುವಂತಿದ್ದ ಶಿವಲಿಂಗಕ್ಕೆ ಅವರಿಬ್ಬರೂ ಪ್ರಾರ್ಥನೆಯನ್ನು ಸಲ್ಲಿಸಿದರು. ರಾಜಕುಮಾರನಂತೂ ಕಣ್ಮುಚ್ಚಿ ಕೆಲ ಕ್ಷಣಗಳ ವರೆಗೆ ಧ್ಯಾನಮಗ್ನನಾಗಿ ದೇವತೆಯನ್ನು ನಮಿಸಿ ಕಣ್ತೆರೆದಾಗ ಅವನ ಮನಸ್ಸಿನ ಭಾರವೆಲ್ಲ ಇಳಿದಂತಾಗಿ ಅವನಲ್ಲಿ ನವ್ಯಚೇತನ ಮೂಡಿದಂತಾಯಿತು.

ಇತರರೆಲ್ಲರಂತೆ ಇವರಿಬ್ಬರೂ ದೇವಾಲಯದ ಪ್ರಾಕಾರವನ್ನೆಲ್ಲ ಸುತ್ತುತ್ತ ಪ್ರಾಚೀನ ಶಿಲ್ಪಕಲಾವಿದರ ಹಾಗೂ ಚಿತ್ರಕಾರರ ಕಲೆಯ ಸೊಬಗನ್ನು ಸವಿಯುತ್ತ ನಡೆದರು.

ಉತ್ತರ ಪ್ರಾಕಾರದಲ್ಲಿ ಅವರು ನಡೆದಿದ್ದಾಗ ಒಂದು ಚಿತ್ರವು ರಾಜಕುಮಾರನ ಮನಸ್ಸನ್ನಾಕರ್ಷಿಸಿತು. ಗೋಡೆಯ ಮೇಲಿನ ಆ ಚಿತ್ರವು ಸುರಸುಂದರಿಯರಾದ ಇಬ್ಬರು ಯುವತಿಯರದಾಗಿತ್ತು. ರಾಜಕುಮಾರನನ್ನು ಮೋಹಿಸಿದ್ದು ಚಿತ್ರಕಲೆಯಲ್ಲ. ಆ ಕಲೆಯ ಮೂಲಕ ಮೈದಳೆದು ಬಂದ ಆ ಪ್ರಸನ್ನಮೂರ್ತಿಗಳು. ಸ್ವತಃ ಕಲಾಭಿಮಾನಿಯೂ ಆದ ರಾಜಕುಮಾರ ಇಷ್ಟೊಂದು ಚೆಲುವೆಯರೂ ಸಕಲ ಸಾಮುದ್ರಿಕ ಲಕ್ಷಣಗಳಿಂದ ಕೂಡಿದವರೂ ಆದ ಯುವತಿಯರನ್ನೆಂದೂ ಕಂಡಿರಲಿಲ್ಲ. ಈ ಚಿತ್ರಗಳನ್ನು ಬರೆದವನ ಕಲ್ಪನಾಶಕ್ತಿ ಎಷ್ಟೇ ಪಕ್ವವಾಗಿದ್ದರೂ ಶುದ್ಧ ಕಲ್ಪನೆಮಾತ್ರದಿಂದಲೇ ಈ ಚಿತ್ರಗಳನ್ನವರು ಬಿಡಿಸಲು ಸಾಧ್ಯವೇ ಇಲ್ಲ; ಜೀವಂತ ವ್ಯಕ್ತಿಗಳನ್ನೇ ನೋಡಿ ಚಿತ್ರಿಸಿರಬೇಕು ಎಂದು ಅವನು ಬಗೆದನು.

ಈ ಚಿತ್ರಗಳು ಜೀವಂತ ವ್ಯಕ್ತಿಗಳವೇ ಎಂಬ ಕಲ್ಪನೆಯೊಂದಿಗೆಯೇ ಅವನ ಹೃದಯದ ಬಾಗಿಲು ತೆರೆದಂತೆ ಆಗಿ ಪ್ರೇಮವೆಂಬ ಬುಗ್ಗೆ ಸೆಲೆಯೊಡೆದು ಚಿಮ್ಮತೊಡಗಿತು.

ಹುಚ್ಚನಿಗೂ ಪ್ರೇಮಿಗೂ ಇರುವ ಅಂತರ ಬಹಳ ಕಡಿಮೆ. ಹುಚ್ಚನ ಹುಚ್ಚಿನ ಅವಧಿ ತುಸು ದೀರ್ಘವಾಗಿದ್ದರೆ ಪ್ರೇಮಿಯ ಹುಚ್ಚಿನ ಅವಧಿ ಕಡಿಮೆಯಿರುತ್ತದೆ. ಆದರೆ ಇವರಿಬ್ಬರಲ್ಲಿ ಹುಚ್ಚು ಇರುವ ಅವಧಿಯಲ್ಲಿ ವ್ಯವಹಾರಜ್ಞಾನ ಸೊನ್ನೆ. ಯಾರೊಬ್ಬ ವಿನಾಕಾರಣ ನಗುತ್ತಿರುವುದನ್ನು ಕಂಡರೆ ಅವನು ಹುಚ್ಚ ಇಲ್ಲವೆ ಪ್ರೇಮಿಯಾಗಿರಬೇಕೆಂದು ನೀವು ಭಾವಿಸಲಡ್ಡಿಯಿಲ್ಲ. ಅಂತೆಯೆ ಮದನಕಾಮ ಸುಮ್ಮಸುಮ್ಮನೇ ನಸುನಗಲಾರಂಭಿಸಿದಾಗ ಅವನ ಮಿತ್ರ ಚಾತುರ್ಯನಿಗೆ ಚಿಂತೆಗಿಟ್ಟಿತು. ಆದರೂ ಅವನ ನಗು ನಿಲ್ಲಲಿಲ್ಲ. ಯಾಕೆ ನಗುತ್ತಿರುವಿಯೆಂಬ ಚಾತುರ್ಯನ ಪ್ರಶ್ನೆಗೆ ಉತ್ತರವಾಗಿ ಮದನಕಾಮ ಮತ್ತೆ ಮುಗುಳ್ನಗೆ ಸೂಸಿದನೆ ಹೊರತು ತುಟಿ ಬಿಚ್ಚಲಿಲ್ಲ.

ಮಂತ್ರಿಕುಮಾರ ಚಾತುರ್ಯ ಎಷ್ಟೇ ಬುದ್ಧಿವಂತನಾಗಿದ್ದರೂ ತನ್ನ ಮಿತ್ರನ ಮನಃಸ್ಥಿತಿಗೂ ಆ ಚಿತ್ರದಲ್ಲಿನ ವ್ಯಕ್ತಿಗೂ ಸಂಬಂಧ ಕಲ್ಪಿಸುವುದು ಅವನಿಗೆ ಸಾಧ್ಯವಾಗಲಿಲ್ಲ. ಅಷ್ಟರಲ್ಲಿಯೆ ಚಾತುರ್ಯನ ಹೃದಯವನ್ನೇ ಕಲಕುವಂತಹ ಇನ್ನೊಂದು ಘಟನೆ ನಡೆಯಿತು. ರಾಜಕುಮಾರನ ಶ್ವಾಸ ಬಿಸಿಯುಸಿರಿನಲ್ಲಿ ಮಾರ್ಪಟ್ಟು ಅವನ ಹುಬ್ಬುಗಳ ಮೇಲೆ ಬೆವರ ಹನಿಗಳು ಕಂಡವು. ಏನು ಮಾಡುವದೆಂದು ಚಾತುರ್ಯ ಆಲೋಚಿಸುವಷ್ಟರಲ್ಲಿಯೇ ಮದನಕಾಮ ಮೂರ್ಛೆ ಹೊಂದಿ ಕೆಳಗೆ ಬಿದ್ದ.

ಆಗ ಚಾತುರ್ಯನಿಗಾದ ದುಃಖ ಅಪರಿಮಿತವಾದದ್ದು.

"ಅಯ್ಯೋ ದೇವರೆ, ರಾಜಕುಮಾರನು ತನಗಾಗುವ ಆಘಾತದಿಂದ ಚೇತರಿಸಿಕೊಳ್ಳುತ್ತಿದ್ದಾನೆಂದು ನಾನು ಬಗೆಯುವಷ್ಟರಲ್ಲಿಯೇ ಅವನು ಮೇಲೆ ಹೋಗಿದ್ದಾನೆ. ಅವನ ತಂದೆ-ತಾಯಿಗಳಿಗೆ ನಾನೇನು ಹೇಳಲಿ? ಅವನಿಗಾಗಿರುವದಾದರೂ

ಏನು?" ಎಂದು ಚಾತುರ್ಯನೂ ಅಳಲಾರಂಭಿಸಿದನು.

ಅಷ್ಟರಲ್ಲಿಯೇ ಹತ್ತಾರು ಜನರ ಗುಂಪೇ ಅಲ್ಲಿ ಸೇರಿತು. ರಾಜಕುಮಾರನ ಸ್ಥಿತಿಯನ್ನು ಕಂಡು ಸ್ತ್ರೀಯೊಬ್ಬಳು ದೇವಸ್ಥಾನದ ಬಾವಿಯಿಂದ ನೀರು ತಂದು ಅವನ ಮುಖದ ಮೇಲೆ ಸಿಂಪಡಿಸಿದಳು. ಅದರಿಂದೆಚ್ಚರಗೊಂಡ ಮದನಕಾಮನು ತನ್ನೆದೆಯ ಮೇಲೆ ಕೈಯಿರಿಸಿಕೊಂಡು ಆ ಚಿತ್ರದಲ್ಲಿಯ



ಯುವತಿಯರನ್ನೇ ದಿಟ್ಟಿಸಿ ನೋಡಲಾರಂಭಿಸಿದನು. ಮತ್ತೆ ಒಂದು ಕ್ಷಣ ಕಣ್ಣು ಮುಚ್ಚಿ ತೆರೆದರೂ ಅಲ್ಲಿಯ ಅವನ ದೃಷ್ಟಿ ಬೇರೆಡೆಗೆ ಹೊರಳಲೇ ಇಲ್ಲ. ಆಗ ಚಾತುರ್ಯನಿಗೆ ತನ್ನ ಮಿತ್ರನ ಸ್ಥಿತಿಯೂ ಅರ್ಥವಾಗತೊಡಗಿತು. ಕೂಡಲೇ ಅವನು ಮಿತ್ರನೆಡೆಗೆ ಹೊರಳಿ ಅವನ ಕಿವಿಯಲ್ಲಿ, "ಗೆಳೆಯಾ ನಿನಗೆ ಯಾವ ಚಿಂತೆಯೂ ಬೇಡ. ಈ ಯುವತಿಯರು ಜಗತ್ತಿನ ಯಾವ ಮೂಲೆಯಲ್ಲಿದ್ದರೂ ನಾನು ಶೋಧಿಸಿತರುತ್ತೇನೆ. ನನ್ನ ಮಾತನ್ನು ನಂಬು" ಎಂದು ಉಸುರಿದನು. ಅದನ್ನು ಕೇಳಿ ರಾಜಕುಮಾರನು ಎದ್ದು ಕುಳಿತನು.

ಆ ಯುವತಿಯರನ್ನು ಶೋಧಿಸುವುದೆಂತೆಂದು ಚಿಂತಿಸಿದ ಮಂತ್ರಿಕುಮಾರ ಚಾತುರ್ಯನು ಆ ದೇವಾಲಯದ ವಿಶ್ವಸ್ಥನೆಡೆಗೆ ಹೋಗಿ ತನ್ನ ಪರಿಚಯ ಮಾಡಿಕೊಂಡು ಸ್ಥಿತಿಯನ್ನೆಲ್ಲ ವಿವರಿಸಿದನು. ಸಹಾನುಭೂತಿಯಿಂದ ಅವನು ಹೇಳಿದ್ದನ್ನು ಕೇಳಿಕೊಂಡ ವಿಶ್ವಸ್ಥನು ಯುವತಿಯರಾರೆಂದು ತನಗೂ ತಿಳಿಯದೆಂದೂ ಆದರೆ ಆ ಚಿತ್ರವನ್ನು ಬಿಡಿಸಿದ ಕಲಾವಿದ ಮಾತ್ರ ತನ್ನ ಪರಿಚಯದವನೆಂದೂ ಹೇಳಿದನು. ಆಗ ಚಾತುರ್ಯನು ಆ ಚಿತ್ರಕಾರನನ್ನು ಕಂಡರೆ ಯುವತಿಯರ ಶೋಧನೆ ಸಾಧ್ಯವಾಗಬಹುದೆಂದೆಣಿಸಿ ಅವನ ಬಗ್ಗೆ ಶಕ್ಯವಿದ್ದ ವಿಷಯಗಳನ್ನೆಲ್ಲ ಸಂಗ್ರಹಿಸಿದನು. ಸುಮಾರು ೬೦ ವರುಷದವನಿರಬಹುದಾದ ಆ ಚಿತ್ರಕಾರನ ಹೆಸರು ವೆಂಕಯ್ಯನೆಂದೂ ಅವನಿರುವುದು ದೇವಕೀಪುರದಲ್ಲೆಂದೂ ತಿಳಿಯಿತು. ಅಲ್ಲದೇ ವಿಶ್ವಸ್ಥನು ಊರಿಗೆ ಹೋಗುವ ದಾರಿ ಮುಂತಾದವನ್ನೆಲ್ಲ ಹೇಳಿದನಲ್ಲದೇ ವೆಂಕಯ್ಯನಿಗೊಂದು ಪರಿಚಯ ಪತ್ರವನ್ನೂ ಕೊಟ್ಟನು. ಆದರೆ ಹತ್ತು ವರ್ಷಗಳಿಂದ ವೆಂಕಯ್ಯನಿಂದ ಯಾವ ವಾರ್ತೆಯೂ ಇರದ್ದರಿಂದ ಅವನು ಇನ್ನೂ ಜೀವಿಸಿರುವನೇ ಎಂಬ ಬಗ್ಗೆ ಮಾತ್ರ ತನ್ನ ಸಂದೇಹವನ್ನು ಅವನು ವ್ಯಕ್ತಪಡಿಸಿದನು.

ಸಜ್ಜನನಾದ ವಿಶ್ವಸ್ಥನು ಚಾತುರ್ಯನು ಮರಳಿ ಬರುವವರೆಗೆ ರಾಜಕುಮಾರ ಮದನಕಾಮನನ್ನು ನೋಡಿಕೊಳ್ಳುವುದಾಗಿ ಆಶ್ವಾಸನೆಯಿತ್ತಿದ್ದರಿಂದ ಚಾತುರ್ಯನಿಗೆ ಅವನಿಗೆ ಎಷ್ಟು ಕೃತಜ್ಞತೆಯನ್ನು ಸಲ್ಲಿಸಿದರೂ ಸಾಲದಾಯಿತು. ಇದರಿಂದ ಹುರುಪುಗೊಂಡ ಚಾತುರ್ಯನು ತನ್ನ ಮಿತ್ರನನ್ನು ಮತ್ತೊಮ್ಮೆ ಕಂಡು ಅವನಿಗೆ ಮತ್ತೆ ಧೈರ್ಯ ಹೇಳಿ ಕುದುರೆಯನ್ನೇರಿ ದೇವಕೀಪುರದ ಕಡೆಗೆ ಭರದಿಂದ ಸಾಗಿದನು. ನೀರಡಿಸಿದ ಕುದುರೆಗೆ ನೀರುಣಿಸಲು ಮಾತ್ರ ಕೆಳಗಿಳಿದ ಚಾತುರ್ಯನು ೧೧ ದಿನಗಳವರೆಗೆ ಸುದೀರ್ಘ ಪ್ರವಾಸಮಾಡಿ ದೇವಕೀಪುರ ಸೇರಿದಾಗ ವೆಂಕಯ್ಯ ಇನ್ನೂ ಜೀವಂತನಿರಬಹುದೋ ಇಲ್ಲವೋ ಎಂಬ ಪ್ರಶ್ನೆ ಮಾತ್ರ ಭೂತದಂತೆ ಅವನ ಬೆನ್ನಟ್ಟಿ ಬಂದಿತ್ತು. ●

(ಮುಂದಿನ ಸಂಚಿಕೆ ನೋಡಿ)

---

## ಗಂಡಿನ ಗೃಹಕೃತ್ಯ

ಸಾಮಾನ್ಯವಾಗಿ ಪಕ್ಷಿಗಳಲ್ಲಿ ಸುಂದರವೂ ವರ್ಣರಂಜಿತವೂ ಆದುದು ಗಂಡೇ ಆಗಿರುತ್ತದೆ. ಪ್ರಣಯಕಾಲದಲ್ಲಿ ಅದು ಕುಣಿದು, ಕುಪ್ಪಳಿಸಿ, ಮಧುರಗಾಯನ ಮಾಡಿ, ಇತರ ಗಂಡುಗಳನ್ನು ಓಡಿಸಿ ಹೆಣ್ಣನ್ನು ಒಲಿಸಿಕೊಂಡು ಕೂಡುತ್ತದೆ. ಅನಂತರ ಗರ್ಭಧರಿಸಿ, ಮೊಟ್ಟೆಯಿಟ್ಟು ಮರಿಮಾಡಿ ಅವು ದೊಡ್ಡವಾಗಿ ಹಾರಿಹೋಗುವವರೆಗೂ ಅವುಗಳ ನಿಗಾವಣೆ ಹೆಣ್ಣು ಪಕ್ಷಿಯದೇ ಆಗಿರುತ್ತದೆ. ಆದರೆ ವಿಲ್ಸನ್ ಥ್ಯಾಲಾ ರೋಪ್ ಎಂಬ ಪಕ್ಷಿಜಾತಿಯಲ್ಲಿ ಇದಕ್ಕೆ ವಿರುದ್ಧ ಸ್ವಭಾವ ಕಂಡುಬರುತ್ತದೆ. ಈ ಜಾತಿಯಲ್ಲಿ ಗಂಡು ಚಿಕ್ಕದು ಹಾಗೂ ಅಂದಗೇಡಿ. ಹೆಣ್ಣೇ ಗಂಡನ್ನು ಆಯ್ದು, ಮಿಕ್ಕ ಹೆಣ್ಣುಗಳನ್ನು ಓಡಿಸಿ, ಗಂಡನ್ನು ಪ್ರೋತ್ಸಾಹಿಸಿ, ಕೂಡಿ, ಮೊಟ್ಟೆ ಇಟ್ಟು ಎತ್ತಲೋ ಹೋಗಿಬಿಡುತ್ತದೆ. ಮರಿಗಳು ದೊಡ್ಡವಾಗಿ ಹಾರಿಹೋಗುವವರೆಗೂ ಎಲ್ಲಾ ಜವಾಬ್ದಾರಿಯನ್ನು ಗಂಡು ಪಕ್ಷಿಯೇ ನಿರ್ವಹಿಸುತ್ತದೆ.

● ಕೆ. ವೆಂಕಣ್ಣಾಚಾರ್

# ನಿಮ್ಮ ಶಬ್ದ ಭಾಂಡಾರ ಬೆಳೆಯಲಿ

## ಶಬ್ದಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ

ಪ್ರತಿ ತಿಂಗಳೂ ಇಲ್ಲಿ ಕೆಲವು ಶಬ್ದಗಳ ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆಮೇಲೆ ಇದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.

೧. ಹೋರೆ
(ಅ) ಬಡಿದಾಟ
(ಆ) ನಕ್ಷತ್ರ
(ಇ) ಕೆಲಸ
(ಈ) ಕಾಪಾಡು

೨. ಮೋಹರ
(ಅ) ಒಂದು ನಾಣ್ಯ
(ಆ) ಸಂದಣಿ
(ಇ) ಭ್ರಾಂತಿ
(ಈ) ಅಂಟಿಕೊಂಡದ್ದು

೩. ನಿವಾತ
(ಅ) ಶಾಂತ
(ಆ) ಎದುರಾಡದ
(ಇ) ವಾಸಿಸುವ
(ಈ) ಬೇಸಗೆ

೪. ನಿಹೀನ
(ಅ) ಕೊಬ್ಬಿದ
(ಆ) ಒಳ್ಳೆಯ
(ಇ) ಅಸಮಾನ
(ಈ) ತೀರ ಕೀಳು

೫. ಹೊಲ್ಲಮೆ
(ಅ) ಕೆಡುಕು
(ಆ) ಕೃಷಿ
(ಇ) ಟೊಳ್ಳುತನ
(ಈ) ನಿಸ್ಸಾರ

೬. ಮೋಡಿ
(ಅ) ಮೊಟಕು
(ಆ) ರೀತಿ
(ಇ) ಆಕಾಶ
(ಈ) ಬುದ್ಧಿ ಇಲ್ಲದವಳು

೭. ಪ್ರಚಲಿತ
(ಅ) ತೊಂದರೆಪಟ್ಟ
(ಆ) ಸುಡುತ್ತಿರುವ
(ಇ) ಸದ್ಯದ
(ಈ) ಹೇಳಿಕೊಟ್ಟ

೮. ಬೇವಸ
(ಅ) ಕಹಿ
(ಆ) ಗತಿಗೇಡಿ
(ಇ) ಉಭಯ ಸಂಕಟ
(ಈ) ಚಿಂತೆ

೯. ಪಾರತ್ರಿಕ
(ಅ) ಕೆರೆಯ ಮೂರನೇ ದಂಡೆ
(ಆ) ಕೊಬ್ಬಿದ ಹಿಂಭಾಗ
(ಇ) ಪರಲೋಕದ
(ಈ) ಭಿಕ್ಷುಕ

೧೦. ಪ್ಲವಂಗ
(ಅ) ಜಿಗಿಜಿಗಿದು ಸಾಗುವ
(ಆ) ಒಂದು ಕಂಪಾದ ಮಸಾಲೆ
(ಇ) ಬಂಗಾಲದಾಚೆಯ ದೇಶ
(ಈ) ಕೈಕಾಲು ಸರಿ ಇಲ್ಲದವ

೧೧. ನಿಭಾಯಿಸು
(ಅ) ತೊಡೆದುಹಾಕು
(ಆ) ನಿರ್ವಹಿಸು
(ಇ) ಪುಸಲಾಯಿಸು
(ಈ) ಗುಟ್ಟು ಮಾಡು

೧೨. ಪರಿಪಂಥಿ
(ಅ) ವೈಷ್ಣವ
(ಆ) ಸುತ್ತುದಾರಿ
(ಇ) ಹಟಮಾರಿ
(ಈ) ಎದುರಾಳಿ

# ಶಬ್ದ ಭಾಂಡಾರದ ಸರಿಯಾದ ಅರ್ಥಗಳು

೧. ಹೋರೆ

(ಇ) ಕೆಲಸ, ದುಡಿತ, ಉದಾ- ಹೋರೆ ಇಲ್ಲದವ ಹೊರಗೋಡ ಸಾರಿಸಿದ. (ಕನ್ನಡ)

೨. ಮೋಹರ

(ಅ) ಸಂದಣಿ, ರಾಶಿ, ಜಂಗುಳಿ, ಸೈನ್ಯ. ಉದಾ- ಆ ಮೋಹರದ ನಡುವೆ ಸಿಕ್ಕ ಮಗು, ಮೋಹರಿಸು ಎಂದರೆ ರಾಶಿ ಬೀಳು, ಕಲೆ, ಸಂದಣಿ ಕೂಡು, ಯುದ್ಧಕ್ಕೆ ಅನುವಾಗಿ ನಿಲ್ಲು (ಕನ್ನಡ).

೩. ನಿವಾತ

(ಅ) ಶಾಂತ, ಗದ್ದಲವಿಲ್ಲದ, ಗಾಳಿಯಿಂದ ರಕ್ಷಿಸಲ್ಪಟ್ಟ. ಉದಾ: ನಿವಾತ ಸ್ಥಳದಲ್ಲಿ ಕುಳಿತು ತಪಸ್ಸು ಮಾಡಿದ. (ಸಂ. ನಿ = ಇಲ್ಲ, ವಾತ = ಗಾಳಿ)

೪. ನಿಹೀನ

(ಈ) ತೀರ ಕೀಳ. ಅತಿಹೀನ, ಅತಿ ದುಷ್ಟ, ಕೀಳು ಜನ್ಮದ; ವಂಚನೆಗೊಳಗಾದ, (ಸಂ. ನಿ = ತೀರ, ಹೀನ = ಕೀಳು.

೫. ಹೊಲ್ಲಮೆ

(ಅ) ಕೆಡುಕು, ಕೆಟ್ಟ ಕೆಲಸ, ಮಾಡಬಾರದ್ದು, ಒಳಿತಲ್ಲದ್ದು, ಅನುಚಿತ. ಉದಾ- ಒಳ್ಳೆಹೊಲ್ಲಮೆಗಳು ಅವನಿಗೆ ಗೊತ್ತಿಲ್ಲ (ಕನ್ನಡ).

೬. ಮೋಡಿ

(ಅ) ರೀತಿ, ಶೈಲಿ, ಮುರುಕ; ಮಾತು ಕೃತಿಗಳಲ್ಲಿ ಒಂದು ವಿಶೇಷ ಭಂಗಿ. ಉದಾ- ಅವಳ ಮೋಡಿ ಹೃದಯಂಗಮವಾಗಿತ್ತು. (ಮರಾಠಿ-ಮೋಡ್).

೭. ಪ್ರಚಲಿತ

(ಇ) ಸದ್ಯದ, ಈಗ ನಡೆಯುತ್ತಿರುವ; ವಾಡಿಕೆಯಾದ; ಹೊರಟ; ಕದಡಲ್ಪಟ್ಟ, ತಳ್ಳಲ್ಪಟ್ಟ. ಉದಾ- ಪ್ರಚಲಿತ ಸಮಾಚಾರ, ಪ್ರಚಲಿತ ಪ್ರಸಂಗ, (ಸಂ. ಪ್ರ = ಮುಂದೆ, ಚಲಿತ.)

೮. ಬೇವಸ

(ಈ) ಚಿಂತೆ, ದುಮ್ಮಾನ, ವಿಷಾದ, ಉಮ್ಮಳ. (ಕನ್ನಡ).

೯. ಪಾರತ್ರಿಕ

(ಇ) ಪರಲೋಕದ, ಮರಣಾನಂತರದ, ಉದಾ- ಪಾರತ್ರಿಕ ಸೌಖ್ಯ, ಪಾರತ್ರಿಕ ಸದ್ಗತಿ. (ಸಂ. ಪರತ್ರ = ಇನ್ನೊಂದು ಕಡೆ)

೧೦. ಪ್ಲವಂಗ

(ಅ) ಜಗಿಯುತ್ತ ಸಾಗುವ, ಆದ್ದರಿಂದ ಮಂಗ, ಕಪ್ಪೆ, ಕುದುರೆ. (ಸಂ)

೧೧. ನಿಭಾಯಿಸು

(ಅ) ನಿರ್ವಹಿಸು; ಸೈರಿಸು, ಸಹಿಸು. ಉದಾ- ಇಷ್ಟೆಲ್ಲ ತೊಂದರೆಗಳಿದ್ದರೂ ಕೆಲಸ ನಿಭಾಯಿಸಿಕೊಂಡು ಹೋದ. ('ನಿರ್ವಹಿಸು'ವಿನ ಮರಾಠಿ ಅಪಭ್ರಂಶ 'ನಿಭಾವಣೇಂ')

೧೨. ಪರಿಪಂಥಿ

(ಈ) ಎದುರಾಳಿ, ವಿರೋಧಿ, ಅಡ್ಡ ಬರುವವ, ಶತ್ರು. (ಸಂ.)

**ನಿಮ್ಮ ಶಬ್ದಶಕ್ತಿಯ ತರಗತಿ**

ನೀವು ಶಬ್ದಗಳಿಗೆ ಅರ್ಥ ಆರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದ ಶಕ್ತಿಯ ತರಗತಿಗಳನ್ನು ತಿಳಿಯಿರಿ.

| | |
|---|---|
| ೬-೮ ಸರಿಯಿದ್ದರೆ..... | ಸಾಧಾರಣ |
| ೯-೧೦ ಸರಿಯಿದ್ದರೆ..... | ಉತ್ತಮ |
| ೧೧-೧೨ ಸರಿಯಿದ್ದರೆ.... | ಅತ್ಯುತ್ತಮ |

☆ ಪುಸ್ತಕ ವಿಭಾಗ




● ಡಾ.ಎಚ್.ಎಸ್. ವೆಂಕಟೇಶ ಮೂರ್ತಿ

ಸಂಗ್ರಹ: ಮೋಹನ ಕಳಸದ

# ತಾಪಿ

* * * * * * * * * * * * * * * * * * * *

**ಮನುಷ್ಯನ ಮನಸ್ಸು ವಿರುದ್ಧ ದಿಕ್ಕಿಗೆ ಪ್ರವಹಿಸುವ ನದಿಯೆ? ಹೌದೆನ್ನುತ್ತವೆ ಮನಃಶಾಸ್ತ್ರಜ್ಞರ ನಿರೀಕ್ಷಣೆಗಳು.**

**ಇಲ್ಲಿ ತಾಪಿ ಅಂಥದೊಂದು ನದಿ. ಅದು ಕೆಲವೊಮ್ಮೆ ಶಾಂತ, ಇನ್ನು ಕೆಲವೊಮ್ಮೆ ಪ್ರಶಾಂತ, ಮತ್ತೆ ಕೆಲವೊಮ್ಮೆಯಂತೂ ಹುಚ್ಚೆದ್ದು ಕಣ್ಯುವ ಪ್ರವಾಹ ಅದರದು.**

**ಈ ಕಾದಂಬರಿಯಲ್ಲಿನ ಪಾತ್ರಗಳ ಸ್ವಭಾವವೂ ಹಾಗೆಯೆ. ಕೆಲವು ಶಾಂತ, ಕೆಲವು ಪ್ರಶಾಂತ; ಇನ್ನು ಕೆಲವಂತೂ ಹುಚ್ಚೆದ್ದು ಹರಿವಂಥವು. ಈ ಮೂರನೆಯ ಗುಂಪಿಗೆ ಸೇರಿದ ವ್ಯಕ್ತಿಗಳ ಮನೋವ್ಯಾಪಾರವಿಲ್ಲಿ ತುಂಬ ಪರಿಣಾಮಕಾರಿಯಾಗಿ ಚಿತ್ರಿಸಲ್ಪಟ್ಟಿದೆ.**

**ಯುವ ಜನಾಂಗದ ಹಸಿಬಿಸಿ ಮನಸ್ಸುಗಳ ವ್ಯಾಪಾರದಲ್ಲಿ ಲಾಭವೆಷ್ಟು? ಹಾನಿಯೆಷ್ಟು? ಎಂಬುದನ್ನಿಲ್ಲಿ ಲೆಕ್ಕ ಹಾಕಿದ್ದಾರೆ, ಕವಿ-ನಾಟಕಕಾರ-ಕಾದಂಬರಿಕಾರ ಡಾ. ಎಚ್.ಎಸ್. ವೆಂಕಟೇಶಮೂರ್ತಿ.**

* * * * * * * * * * * * * * * * * * *

ಯಾರೋ ಧಡ ಧಡ ಬಾಗಿಲು ಬಡಿದರು.

ಎದೆಗೇ ಗುದ್ದಿದಂತಾಗಿ ಥಟ್ಟನೇ ಕಣ್ಣು ಬಿಟ್ಟು ಎದ್ದು ಕೂತೆ. ನಾನು ಮುಂಬಯಿನಿಂದ ಪ್ರಯಾಣ ಮಾಡುತ್ತಿದ್ದ ಫ್ಲಯಿಂಗ್ ರಾಣಿ ಯಾವ ಕಾಲದಿಂದಲೂ ಹೀಗೇ ನಿಶ್ಚಲ ನಿಂತಿದೆಯೋ ಎಂಬಂತೆ ಸ್ತಬ್ಧವಾಗಿತ್ತು.

ತನ್ನ ಭಾರೀ ಚೀಲವನ್ನು ಸೊಂಟಕ್ಕೇರಿಸುತ್ತಿದ್ದ ಒಬ್ಬನನ್ನು ಕೇಳಿದೆ,

"ಕ್ಯಾ ಸ್ಟೇಷನ್?"

"ಸೂರತ್, ಸೂರತ್" ಎಂದು ಗಡಿಬಿಡಿಯಿಂದ ಹೇಳುತ್ತ ಆತ ತನ್ನ ಪತ್ನಿಯನ್ನ ಅಪಾಯವಾಗದಂತೆ ಕೆಳಗಿಳಿಸಿ, ಅರೆನಿದ್ದೆಯಲ್ಲಿದ್ದ ಮಕ್ಕಳನ್ನು ಒಂದೊಂದಾಗಿ ಕೆಳಗಿಳಿಸತೊಡಗಿದ.

ಸರಿಯಾದ ಸಮಯಕ್ಕೆ ನಿದ್ರಾಭಂಗ ಮಾಡಿದ ಆತನನ್ನು ಮನಸ್ಸಿನಲ್ಲಿಯೇ ಅಭಿನಂದಿಸಿದೆ. ನನ್ನ ಸೂಟ್‌ಕೇಸನ್ನು ಸ್ವಲ್ಪ ಶ್ರಮದಿಂದಲೇ ಎತ್ತಿ ಹಿಡಿದು ಬಲಗೈಲಿ ತೂಗುತ್ತಾ, ಎಡಗೈಲಿ ಬಾಗಿಲ ಕಂಬಿ ಹಿಡಿದು ನೆಲಕ್ಕೆ ಹಾರಿಕೊಂಡೆ.

ಬೆಳಗಿನ ಮೂರು ಗಂಟೆಯ ಸಮಯ. ನಿಲ್ದಾಣದಲ್ಲಿ ಉಳಿದವರು ಸುಮಾರು ಐವತ್ತು ಜನ. ನನ್ನದಲ್ಲದ ಈ ಅಪರಿಚಿತ ನೆಲದಲ್ಲಿ ಏನು ಮಾಡಬೇಕೋ ತಕ್ಷಣ ಹೊಳೆಯದೆ ದಿಗ್ಭ್ರಾಂತನಾದೆ. ನನ್ನವರನ್ನೆಲ್ಲಾ ಕಳೆದುಕೊಂಡಂತೆ ಭಾಸವಾಗತೊಡಗಿತು. ನನಗೆ ಅಳು ಬರುತ್ತಿದೆಯೇ-ಅನುಮಾನವಾಯಿತು. ಕಣ್ಣಲ್ಲಿ ನೀರು ತುಂಬುತ್ತಿರುವಂತೆ ತೋರಿತು. ನಿಲ್ದಾಣದ ಇನ್ನೊಂದು ಮೂಲೆಯಲ್ಲಿ ತೆರೆದಿದ್ದ ಒಂದು ಅಂಗಡಿಯ ಎದುರು ಎರಡು ಮೂರು ತದ್ರೂಪಗಳು ಕಾಣಿಸುತ್ತಿದ್ದವು. ಒಂದಿಬ್ಬರು ವ್ಯಾಪಾರ ಮಾಡುತ್ತಿದ್ದರು.

ನಾನು ಹೊರಡುವಾಗ ಬೆಂಗಳೂರಿನ ನಿಲ್ದಾಣದ ಬಳಿ ಅಪ್ಪ, ಅಮ್ಮ ಸುಮ್ಮ ಬಂದಿದ್ದರು. ಅಪ್ಪ ಗಂಭೀರವಾಗಿದ್ದರು. ಅಮ್ಮ ಅವರ ಪಕ್ಕದಲ್ಲಿ ನೆರಳಲ್ಲಿ ನಿಂತಿದ್ದರಿಂದ ಅವರ ಮುಖ ಸ್ಪಷ್ಟ ಕಾಣಿಸುತ್ತಿರಲಿಲ್ಲ. ಅವರು ಮೌನವಾಗಿ ಅಳುತ್ತಿದ್ದರು ಎಂದು ನನ್ನ ನಂಬಿಕೆ. ರೈಲು ಡಬ್ಬಿಯಲ್ಲಿ ನನ್ನ ಸ್ಥಳ ಕಾದಿರಿಸಿಯಾದ ಮೇಲೆ ಅಪ್ಪ ನನ್ನನ್ನು ಪಕ್ಕಕ್ಕೆ ಕರೆದು ಮೆಲು ಧ್ವನಿಯಲ್ಲಿ 'ಹಣ ಜೋಪಾನ. ಒಳಜೇಬಿನಲ್ಲಿ ಇಟ್ಟಿದ್ದೀ ತಾನೆ? ಮೇಲೆ

ಪಿನ್ನು ಹಾಕಿದ್ದೀಯಲ್ಲ.... ಎಚ್ಚರ ಪರಸ್ಥಳ' ಎಂದಿದ್ದರು.

ರೈಲು ಹೊರಟಾಗ ಸುಮ್ಮಿ ಅಳುತ್ತಿದ್ದಳು. 'ಅಣ್ಣಾ ಬೇಗ ಬಾ' ಎಂದು ಕೂಗಿದ್ದಳು. ಸುಮ್ಮಿಯನ್ನು ಎತ್ತಿಕೊಂಡ ಅಮ್ಮ ಅವಳ ಕೈ ಹಿಡಿದು ಆಡಿಸುತ್ತಿದ್ದರು.

ಸೂರತ್‌ನಲ್ಲಿ ಸಧ್ಯಕ್ಕೆ ನನ್ನ ಏಕಮಾತ್ರ ಆಸರೆ ಜೋಬಿನಲ್ಲಿದ್ದ ಅಪ್ಪ ಕೊಟ್ಟಿದ್ದ ಹಣ. ಕಾಲೇಜಿಗೆ ಕಟ್ಟಬೇಕಾದದ್ದು. ಇನ್ನೊಂದು ತಿಂಗಳು ಇಲ್ಲಿ ಬದುಕುವ ವ್ಯವಸ್ಥೆ. ನನ್ನ ಭವಿಷ್ಯದ ಎಲ್ಲ ಬಣ್ಣ ಬಣ್ಣದ ಕನಸೂ ಜೋಬಿನಲ್ಲೇ ಮುದುರಿಕೊಂಡಿದ್ದವು. ಬೆಳಗಾಗಿ ಈ ನಿಲ್ದಾಣದಲ್ಲಿ ಜನ ತುಂಬುವುದರೊಳಗೆ ಅದನ್ನೊಮ್ಮೆ ಕಣ್ಣಾರೆ ನೋಡುವ ತವಕ. ಸೂಟ್‌ಕೇಸನ್ನು ಹಿಡಿದು ನಿಲ್ದಾಣದುದ್ದಕ್ಕೂ ನಡೆಯತೊಡಗಿದೆ. ಹತ್ತು ಹೆಜ್ಜೆ ಹೋಗುವದರಲ್ಲೇ ಗಂಡಸರ ಮೂತ್ರಿ ಕಂಡಿತು. ಅದರೊಳಕ್ಕೆ ನುಗ್ಗಿ ದೀಪವಿದ್ದ ಒಂದು ಕೋಣೆಗೆ ಹೋಗಿ ಬಾಗಿಲು ಮುಚ್ಚಿಕೊಂಡೆ. ಕಕ್ಕಸು ಹೊಲಸು ತುಂಬಿತ್ತು. ದರಿದ್ರ ವಾಸನೆ. ಪ್ಯಾಂಟು ಇಳಿಸಿ ಡ್ರಾಯರಿನ ಜೋಬಿಗೆ ಹಾಕಿದ್ದ ಪಿನ್ನು ಬಿಚ್ಚಿ ಪೊಟ್ಟಣ ಹೊರತೆಗೆದೆ. ಪ್ಯಾಂಟು ಕೆಳಗೆ ಬೀಳದಿರಲಿ ಎಂದು ಕಾಲು ಕಿಸಿದು ವಿಚಿತ್ರ ಭಂಗಿಯಲ್ಲಿ ನಿಂತು ಪೊಟ್ಟಣ ಬಿಚ್ಚಿದೆ. ಹೊಸಾ ಹಸುರು ನೋಟುಗಳು ಗರಿ ಗರಿ ಸದ್ದು ಮಾಡಿದವು. ಅಪ್ಪನ ಪ್ರೀತಿಗೆ ಕೃತಜ್ಞತೆ ಉಕ್ಕಿತು. ಒಂದು ನೋಟು ಮಾತ್ರ ತೆಗೆದು ಹೊರಜೋಬಿನಲ್ಲಿಟ್ಟುಕೊಂಡೆ. ಉಳಿದದ್ದನ್ನು ಮೊದಲಿನಂತೆಯೇ ಭದ್ರಮಾಡಿದೆ.

ನಾನು ಅಂಗಡಿಯ ಕಡೆ ಹೊರಟೆ. ಅಂಗಡಿಯ ಮುಂದೆ ಬೀಡಿ ಸೇದುತ್ತಾ ಹರಟುತ್ತಿದ್ದ ಆ ಕೊರಮರು ನೀಲಿ ಅಂಗಿ, ಹಿತ್ತಾಳೆ ಬಿಲ್ಲೆಯಲ್ಲಿದ್ದರು. ಅಂಗಡಿಯವನು ನಶ್ಯ ತೀಡುತ್ತಾ ಏನೋ ಜೋಕು ಹೊಡೆಯುತ್ತಿದ್ದ. ಕಪ್ಪಗೆ ಗುಂಡು ಗುಂಡನೆ ಕುಂಬಳಕಾಯಿನಂತೆ ಕುಕ್ಕರಿಸಿದ್ದ. ಅಂಗಡಿಯಲ್ಲಿ ಕೆಲವು ಪೇಪರುಗಳು, ಪುಸ್ತಕಗಳು, ಅರೆಬೆತ್ತಲೆ ಹುಡುಗಿಯರ ಚಿತ್ರಗಳಿರುವ ಇಂಗ್ಲಿಷ್ ಪತ್ರಿಕೆಗಳೂ ಇದ್ದವು. ಅವುಗಳಲ್ಲಿ ನನ್ನ ಗಮನ ಸೆಳೆದದ್ದು ಕನ್ನಡದ 'ಕಸ್ತೂರಿ.' ನಾನು ಮಹಾ ಕನ್ನಡದ ಅಭಿಮಾನಿ ಅಂತಲ್ಲ. ಬೇರೆ ಬೇರೆ ಪತ್ರಿಕೆಗಳ ಮಧ್ಯೆ ಒಂಟಿಯಾಗಿದ್ದ 'ಕಸ್ತೂರಿ'ಯ ಬಗ್ಗೆ ನನಗೇಕೋ ತುಂಬ ಪ್ರೀತಿ ಉಂಟಾಯಿತು. ಬೆಂಗಳೂರಿನಲ್ಲಿ ನಾನು ಕನ್ನಡ ಓದುವದು ಕಡಿಮೆಯೇ. ಆದರೆ ಇಲ್ಲಿ ನನ್ನ ಜೊತೆಗಿರಲಿ, ಅದನ್ನ ತೆಗೆದುಕೊಳ್ಳೋಣ ಎನ್ನಿಸಿತು. ನನಗೆ ಹರಕು ಮುರುಕು ಹಿಂದಿ ಬರುತ್ತಿತ್ತು. 'ಕಸ್ತೂರಿ'ಯನ್ನು ತೋರಿಸುತ್ತಾ ಅಂಗಡಿಯವನಿಗೆ "ನನಗೆ ಆ ಪತ್ರಿಕೆ ಕೊಡಿ" ಎಂದು ಕೇಳಿದೆ. ಆ ಕರಿಯ ಕಣ್ಣರಳಿಸಿದ. ಕಣ್ಣುಗಳು ಯಾವುದೋ ಅವ್ಯಾಜ ಪ್ರೀತಿಯಿಂದ ಥಳ ಥಳ ಹೊಳೆದವು.

"ಏನು, ನೀವು ಮೈಸೂರಿನವರಾ....?"

"ಓ.... ನಿಮಗೆ ಕನ್ನಡ ಗೊತ್ತು...."

"ನಾನೂ ಮೈಸೂರಿನವನೇ..... ಇಲ್ಲಿ..... ಇಲ್ಲಿ..... ಒಳಗೆ ಬನ್ನಿ...."

ಆತ ಮೇಲೇಳುತ್ತಾ ನನ್ನನ್ನು ಸ್ವಾಗತಿಸಿದ. ಅಂಗಡಿಯ ಮುಂದೆ ನಿಂತಿದ್ದ ಮೂವರು ನನ್ನನ್ನು ಅಭಿಮಾನದಿಂದ ನೋಡುತ್ತಿದ್ದರು.

ಅಂಗಡಿಯ ಯಜಮಾನನ ಹೆಸರು ಬೆಟ್ಟಪ್ಪ. ಅವನ ಊರು ಮೈಸೂರು ಹತ್ತಿರ ಒಂದು ಹಳ್ಳಿ. ಸೂರತ್‌ಗೆ ಬಂದು ಇಪ್ಪತ್ತು ವರ್ಷಗಳಾಗಿವೆ. ಅವನ ಹೆಂಡತಿಗೆ ಕನ್ನಡ ಓದುವದಕ್ಕೆ ಬರುತ್ತದೆ. ಮಕ್ಕಳಿಗೆ ಕನ್ನಡ ಮಾತನಾಡುವದು ಮಾತ್ರ ಗೊತ್ತು. ಹೆಂಡತಿಗಾಗಿ ಅವನು 'ಕಸ್ತೂರಿ' ತರಿಸುವದು. ಅವಳು ಓದಿಯಾದ ಮೇಲೆ ಅದನ್ನು ಅಂಗಡಿಯಲ್ಲಿ ನೇತು ಹಾಕುತ್ತಾನೆ. ಕಾರಣ ಅದನ್ನು ಯಾರಾದರೂ ನೋಡಿದರೆ ಅವರು ಕನ್ನಡದವರು ಎಂದು ಅವನಿಗೆ ತಕ್ಷಣ ಗೊತ್ತಾಗುತ್ತದೆ. ಅವರನ್ನು ಸ್ವಾಗತಿಸಿ ಸ್ವಲ್ಪ ಮಾತಾಡಿದರೆ ಏನೋ ಸಮಾಧಾನವಂತೆ. ಹನುಮಾನ್ ಪೂಲಿನಲ್ಲಿ ತನ್ನ ಮನೆಯೆಂದೂ, ಅಗತ್ಯ ಒಂದು ದಿನ ತನ್ನ ಮನೆಗೆ ಬರಬೇಕೆಂದೂ ಹೇಳಿದ. ನಾನು ಇಂಜನೀಯರಿಂಗ್ ಓದುವದಕ್ಕೆ ಬಂದಿರುವದನ್ನೂ, ಇನ್ನೂ ಎರಡು ವರ್ಷ ಸೂರತ್‌ನಲ್ಲಿ ಇರಬೇಕಾಗಿರುವದನ್ನೂ ಬೆಟ್ಟಪ್ಪನಿಗೆ ಹೇಳಿ, ಒಂದು ದಿನ ಖಂಡಿತ ಅವನ ಮನೆಗೆ ಬರುತ್ತೇನೆಂದು ಹೇಳಿದೆ. ಬೆಟ್ಟಪ್ಪ ಫ್ಲಾಸ್ಕಿನಲ್ಲಿದ್ದ ಕಾಫಿಯನ್ನು ಬಟ್ಟಲಲ್ಲಿ ಸುರಿದು ನನಗೆ ಕುಡಿಯಲು ಕೊಟ್ಟ. ನಾನು ಕಾಫಿ ಕುಡಿಯುತ್ತಿರುವಾಗ–

"ರಾತ್ರಿಯೆಲ್ಲಾ ನಿಮಗೆ ಸರಿಯಾಗಿ ನಿದ್ದೆ ಇಲ್ಲ. ಅಲ್ವಾ.....? ಸ್ಟೇಷನ್ ಹತ್ತಿರದಲ್ಲೇ ಒಂದು ಹೊಟೇಲ್ ಇದೆ.

ಮಲಗುವದಕ್ಕೆ ಕೋಣೆ ಸಿಗುತ್ತೆ. ಒಂದೆರಡು ಗಂಟೆ ನೀವು ಕಾಲು ಚಾಚಬಹುದು," ಎಂದ.

ನನಗೂ ಆಗಬಹುದು ಎನಿಸಿತು. ಕಾರಣ ಮಲಗುವದು ತೀರಾ ಅನಿವಾರ್ಯವಾಗಿತ್ತು ಎಂದಲ್ಲ. ಬೆಟ್ಟಪ್ಪನೊಂದಿಗೆ ಆಡಬಹುದಾದ ಮಾತುಗಳು ಮುಗಿದಿದ್ದವು. ಇನ್ನೂ ಸ್ವಲ್ಪ ಹೊತ್ತು ಕೂತರೆ ನಮ್ಮ ಮಾತುಗಳು ಸಡಿಲಾಗಿ, ಇನ್ನೊಮ್ಮೆ ಬೆಟ್ಟಪ್ಪನನ್ನು ನೋಡುವದೇ ಬೇಡ ಎನಿಸುವ ಭಯವಾಯಿತು. 'ಕಸ್ತೂರಿ'ಯನ್ನು ಸೂಟ್‌ಕೇಸಿಗೆ ಸೇರಿಸಿ ಎದ್ದು ಮೈ ಮುರಿದೆ. ಬೆಟ್ಟಪ್ಪ ಬೀಡಿ ಸೇದುತ್ತಿದ್ದ ಒಬ್ಬನಿಗೆ "ರಮಣ್ ಭಾಯ್" ಎಂದು ಕರೆದು, ಪ್ರಾಯಶಃ ನನ್ನನ್ನು ಹೊಟೇಲ್‌ಗೆ ಕರೆದುಕೊಂಡು ಹೋಗುವಂತೆ ಗುಜರಾತಿಯಲ್ಲಿ ಹೇಳಿದ.

ಬೆಟ್ಟಪ್ಪ ಹೇಳಿದ್ದ ಹೊಟೇಲ್ಲು ಹತ್ತಿರವೇ. ಮೂರಂತಸ್ತಿನ ಆ ಬಂಗಲೆಗೆ ಲಾಲ್‌ಬಂಗ್ಲಾ ಎಂಬ ಬೋರ್ಡಿತ್ತು. ಕಾವಲಿನವನೊಂದಿಗೆ ಏನೋ ಮಾತಾಡಿ ರಮಣ್‌ಭಾಯ್ ಸುತ್ತಿ ಸುತ್ತಿ ಮೇಲೇರುವ ಇಕ್ಕಟ್ಟಾದ ಮೆಟ್ಟಲುಗಳಲ್ಲಿ ನನ್ನನ್ನು ಮೇಲೆ ಹತ್ತಿಸತೊಡಗಿದ. ಆಗಾಗ ತಿರುಗಿ ನನ್ನನ್ನು ನೋಡಿ ಮುಂದೆ ಹೋಗುತ್ತಿದ್ದ. ಮೆಟ್ಟಲು ಏರುವಲ್ಲಿ ಬಹಳ ಮಬ್ಬಾದ ಬೆಳಕಿತ್ತು.

ಒಂದು ಕ್ಷಣ ಬೆಟ್ಟಪ್ಪ ಮತ್ತು ರಮಣ್‌ಭಾಯ್ ಧೂರ್ತರಿರಬಹುದೇ ಎಂಬ ಅನುಮಾನ. ಅದನ್ನು ಬಲವಂತವಾಗಿ ಆಚೆ ತಳ್ಳಿದೆ. ಬೆಟ್ಟಪ್ಪನ ಅಂಗಡಿಯಲ್ಲಿ 'ಕಸ್ತೂರಿ'ಯಿತ್ತು. ಪ್ರಾಯಶಃ ಬೆಟ್ಟಪ್ಪ ಧೂರ್ತ ಇರಲಾರ.

ರಮಣಭಾಯ್ ನನ್ನನ್ನು ಮೂರನೇ ಅಂತಸ್ತಿಗೆ ಕರೆದುಕೊಂಡು ಬಂದ. ಬೆಟ್ಟಪ್ಪ ಹೇಳಿದಂತೆ ಅಲ್ಲಿ ಕೋಣೆಗಳಿರಲಿಲ್ಲ. ಒಂದೇ ದೊಡ್ಡ ಹಾಲು. ಅಲ್ಲಿ ನೆಲದ ಮೇಲೆ ಸಾಲಾಗಿ ಬಿಡಿಸಿದ್ದ ಹಾಸಿಗೆಗಳಿದ್ದವು. ಒಂದು ರಾತ್ರಿಗೆ ಒಂದು ರೂಪಾಯಿ ಬಾಡಿಗೆ. ಜೋಬಿನಿಂದ ಒಂದು ರೂಪಾಯಿ ತೆಗೆದು ರಮಣ್‌ಭಾಯ್‌ಗೆ ಕೊಟ್ಟೆ. ಒಲ್ಲೆ ಅಂದ. ಒತ್ತಾಯ ಮಾಡಿ ಅವನ ಕೈಯಲ್ಲಿ ತುರುಕಿದೆ. ನಮಸ್ಕಾರ ಹೇಳಿ ಹೊರಟುಹೋದ.

ಹಾಲಿನಲ್ಲಿ ಮಂಕಾದ ದೀಪ ಉರಿಯುತ್ತಿತ್ತು. ನಾನು ಹಾಲಿಗೆ ಬಂದಾಗ ಒಂದೆರಡು ವ್ಯಕ್ತಿಗಳು ತಲೆ ತುಂಬಾ ಹೊದ್ದ ಮುಸುಕು ತೆಗೆದು ನೋಡಿ ಮರುಕ್ಷಣವೇ ಮುಸುಕೆಳೆದು ಮಲಗಿಬಿಟ್ಟರು.

ಆ ಹಾಲಿನಲ್ಲಿ ಉಸಿರಾಡುತ್ತಿದ್ದ ಪ್ರಾಣಿಗಳಲ್ಲಿ ಯಾವುವು ಎಂಥವು ಹೇಳುವಂತಿರಲಿಲ್ಲ. ನನಗೆ ನಿದ್ದೆ ಬರುವದು ದೂರವೇ ಉಳಿಯಿತು. ಹಾಸಿಗೆಗೆ ಮೈ ಹೊಂದಲಿಲ್ಲ. ಸೂಟ್‌ಕೇಸ್‌ನ್ನು ತಲೆಯ ಪಕ್ಕದಲ್ಲೆ ಇಟ್ಟುಕೊಂಡು ಎಷ್ಟೋ ಹೊತ್ತು ಸುಮ್ಮನೇ ಹೊರಳಾಡುತ್ತಿದ್ದೆ.

ಪಕ್ಕದಲ್ಲಿ ಯಾರೋ ಗಟ್ಟಿಯಾಗಿ ಮಾತಾಡತೊಡಗಿ ಥಟ್ಟನೆ ಎಚ್ಚರಾಯಿತು. ಹೇಗೆ ನಿದ್ದೆ ಹತ್ತಿತೋ ನನಗೇ ಆಶ್ಚರ್ಯ. ಗಾಬರಿಯಿಂದ ಕತ್ತೆತ್ತಿ ಸೂಟ್‌ಕೇಸ್ ನೋಡಿದೆ. ಅದು ಇದ್ದಲ್ಲಿಯೇ ಇದ್ದುದು ಕಂಡು ಸದ್ಯ ಬದುಕಿದೆ ಎನಿಸಿತು.

ಪ್ರಾತಃರ್ವಿಧಿಗಳನ್ನೆಲ್ಲಾ ಮುಗಿಸಿದೆ. ಪುರಾತನ ಮಾದರಿಯ ವಾಷ್ ಬೇಸಿನ್ ಇತ್ತು. ಅದರ ಮೇಲೆ ಇದ್ದ ಕನ್ನಡಿ ಸೀಳಿ ಎದುರಿಗೆ ನಿಂತವರನ್ನು ಹಾಸ್ಯ ಮಾಡಿ ಅಣಕಿಸುತ್ತಿತ್ತು; ಇಷ್ಟು ಸಾಕು ಎನಿಸಿ ಹಲ್ಲು ಮೂತಿ ತೊಳೆದುಕೊಂಡು ಸೂಟ್‌ಕೇಸಿನೊಂದಿಗೆ ಕೆಳಕ್ಕೆ ಇಳಿದೆ.

ಹೊಟ್ಟೆಗೆ ಏನಾದರೂ ಮೊದಲು ಬೀಳಬೇಕಾಗಿತ್ತು. ಎದುರಿಗೆ ನಿಂತ ಮಾಣಿಗೆ ತಿಂಡಿ ಏನಿದೆ? ಎಂದು ಹಿಂದಿಯಲ್ಲಿ ಕೇಳಿದೆ. "ಪೂರಿ ರೋಟಿ ದಾಲ್" ಎಂದ. "ಇಡ್ಲಿ ದೋಸೆ?" ಎಂದೆ. "ಮದ್ರಾಸಿಯೇ?" ಎಂದು ಕೇಳಿದ. ನಿನ್ನ ತಲೆ ಎಂದು ಮನಸ್ಸಿನಲ್ಲಿಯೇ ಅವನನ್ನು ಬೈದೆ. ಮಾಣಿ ಮೆಲುಧ್ವನಿಯಲ್ಲಿ "ನಾನ್‌ಪುರ್..... ಕನ್ನಡ ಕೆಫೆ" ಎಂದು ಉಪದೇಶ ಮಾಡಿದ.



ಕಾಲೇಜಿಗೆ ಹಣ ತುಂಬುವದಕ್ಕೆ ಇಂದೇ ಕಡೇ ದಿನ. ಈ ನಗರದ ಯಾವ ಮೂಲೆಯಲ್ಲಿ ಕಾಲೇಜಿನ ಕಟ್ಟಡವಿರಬಹುದೆಂದು ಯೋಚಿಸುತ್ತಿದ್ದೆ. ಒಂದು ರಿಕ್ಷಾ ಹಿಡಿದು ಕೂತು ನಾನ್‌ಪುರ್ ಕನ್ನಡ ಕೆಫೆ ತಲುಪಿದೆ.

ನಾನು ನೇರ ಗಲ್ಲಾದ ಬಳಿಗೆ ಹೋಗಿ ಲಕ್ಷಣವಾಗಿ ಕಳೆಸೂಸುತ್ತಾ ಕೂತಿದ್ದ ವ್ಯಕ್ತಿಯ ಗಮನ ಸೆಳೆಯುವಂತೆ, "ನಾನು ಕನ್ನಡದವನು" ಎಂದೆ. ಆತ ಒಂದು ಕ್ಷಣ ನನ್ನ ಮುಖ ನೋಡಿ ಮತ್ತೆ ಗಿರಾಕಿಗಳಿಂದ ಹಣ

ತೆಗೆದುಕೊಳ್ಳುತ್ತಾ ''ಮೈಸೂರಿನವರೇ?'' ಎಂದು ಕೇಳಿದ. ನಿನ್ನೆ ರಾತ್ರಿ ಬೆಟ್ಟಪ್ಪನ ಮುಖದಲ್ಲಿ ಕಂಡು ಬಂದ ಅಕ್ಕರೆಯಾಗಲಿ ಧ್ವನಿಯ ಉತ್ಸಾಹವಾಗಲೀ ಈತನಲ್ಲಿ ಸ್ವಲ್ಪವೂ ಕಾಣಲಿಲ್ಲ.

''ನೋಡಿ ನನಗೆ ಇಳಿಯುವದಕ್ಕೆ ಒಂದು ಕೋಣೆ ಬೇಕು,'' ಎಂದೆ.

''ದೊಡ್ಡ ಕೋಣೆ ದಿನಕ್ಕೆ ಐದು ರೂಪಾಯಿ, ಚಿಕ್ಕದು ಮೂರು ರೂಪಾಯಿ. ಎರಡಕ್ಕೂ ಅಟ್ಯಾಚ್ಡ್ ಬಾತ್ ಉಂಟು. ಒಬ್ಬರೇ ಇರ್ಬೇಕು. ಹಿಂದಿನಿಂದ ಇನ್ನೊಬ್ಬರನ್ನು ಸೇರಿಸುವಂತಿಲ್ಲ. ಹದಿನೈದು ಅಡ್ವಾನ್ಸು ಕೊಡಬೇಕು,'' ಎಂದು ಎಲ್ಲಾ ಒಂದೇ ಉಸುರಿನಲ್ಲಿ ಒದರಿದ.

ಎಷ್ಟು ದಿನ ಇರುವದು ಎಂದು ಮುಂತಾಗಿ ವಿವರಗಳನ್ನು ದಾಖಲು ಮಾಡಿಕೊಂಡು ''ಸೂರತ್‌ನಲ್ಲಿ ನಿಮ್ಮ ಪರಿಚಯದವರು ಯಾರಾದರೂ ಉಂಟೇ?'' ಎಂದು ಕೇಳಿದ. ಇದೆಲ್ಲಾ ಏಕೋ ಅತಿಯಾಯಿತು ಎನ್ನಿಸಿತು. ಆವರೆಗಿನ ವರ್ತನೆಯಿಂದ ಮನಸ್ಸಿನಲ್ಲೇ ಅಸಹನೆ ಹೆಚ್ಚುಗುತ್ತಿತ್ತು. ಇಲ್ಲ ಎಂದು ಒದರಬೇಕೆಂದೆನಿಸಿದರೂ ಏಕೋ ಹಾಗೆ ಮಾಡದೆ ಬೆಟ್ಟಪ್ಪ, ರೈಲ್ವೆ ನಿಲ್ದಾಣದ ಅಂಗಡಿ ಎಂದು ಬಿಟ್ಟೆ. ನಿನ್ನೆ ರಾತ್ರಿ ಬೆಟ್ಟಪ್ಪನ ಪರಿಚಯವಾದುದೂ ಈಗ ತಕ್ಷಣ ಅವನ ಹೆಸರು ನೆನಪಾದುದೂ ಬಹಳ ಚನ್ನಾಗಿ ಹೊಂದಿಕೆಯಾಗಿ ಒಂದು ಥರಾ ಖುಷಿಯಾಯಿತು.

ಆತ ಬೆಲ್ಲು ಮಾಡಿ ಗೋಪಿ ಎಂಬವನನ್ನು ಕರೆದು ''ಇವರನ್ನು ೧೧೫ ನೇ ಕೋಣೆಗೆ ಬಿಡು'' ಎಂದ.

ಗೋಪಿ ರೂಮು ತೋರಿಸಿ, ''ಫ್ಯಾನ್ ಇದೆ.... ನಿಮಗೆ ಏನಾದರೂ ಬೇಕಾದರೆ ಈ ಕಾಲಿಂಗ್ ಬೆಲ್ ಇದೆ.... ಒತ್ತಿದರೆ....'' ಎಂದು ನಕ್ಕು ''ಬಿಸಿ ನೀರು ತರುತ್ತೇನೆ,'' ಅಂದ.

ತೃಪ್ತಿಯ ನಿಟ್ಟುಸಿರುಬಿಟ್ಟು ಸ್ನಾನದ ತಯಾರಿ ನಡೆಸಿದೆ. ಗೋಪಿ ನೀರು ತರುವದಕ್ಕೆ ಕೆಲವು ನಿಮಿಷ ಹಿಡಿಯಿತು. ನಾನು ಕೋಣೆಯ ಬಾಗಿಲು ಮುಂದೆ ಮಾಡಿ ಕಿಟಕಿಯ ಮೂಲಕ ರಸ್ತೆಯ ಕಡೆ ನೋಡತೊಡಗಿದೆ.

ಬಸ್ಸು, ಲಾರಿ, ರಿಕ್ಷಾ, ಬಿಳಿಯ ಉಡುಪು, ಪೈಜಾಮ್, ಖಾದಿ ಟೋಪಿ, ಸ್ಕರ್ಟುಗಳ ಕೆಳಗೆ ತುಂಬಿಕೊಳ್ಳುತ್ತಿರುವ ತೊಡೆಗಳು, ಸೆರಗು ಬಲಕ್ಕೆ ಹೊದ್ದ ಗಾತ್ರದ ಹೆಂಗಸರು....ಹೀಗೆ ಕಿಟಕಿ ಮೂಲಕ ಒಂದು ಅಂತರ ಇಟ್ಟುಕೊಂಡು ಸೂರತ್ತನ್ನು ನೋಡುವದರಲ್ಲಿ ಏನೋ ಮಜಾ ಎನ್ನಿಸಿ ಆರಿಸಿ ಆರಿಸಿ ನೋಡುತ್ತಾ ಇದ್ದೆ.



ಕನ್ನಡ ಕೆಫೆಯಲ್ಲಿ ಸ್ನಾನ ತಿಂಡಿ ಮುಗಿಸಿ ರಿಕ್ಷಾ ಹಿಡಿದು ಕಾಲೇಜ್ ಬಳಿ ಬಂದಾಗ ಹನ್ನೊಂದು. ಮೇಲ್ನೋಟಕ್ಕೆ ಕಾಲೇಜು ಭವ್ಯವಾಗಿ ಎತ್ತರವಾಗಿ ಕಂಡು, ಪರವಾಗಿಲ್ಲ ಇಷ್ಟು ದೂರ ಬಂದದ್ದೂ ಸಾರ್ಥಕ ಎಂದು ವಿಚಿತ್ರವಾದ ತೃಪ್ತಿಯಾಯಿತು.

ಹನ್ನೊಂದು ಗಂಟೆಯಾದರೂ ಕಾಲೇಜಿನ ಬಳಿ ಸಂಬಂಧಪಟ್ಟವರು ಯಾರೂ ಸುಳಿಯಲಿಲ್ಲ. ಕಾರಿಡಾರನ್ನು ಪ್ರವೇಶಿಸಿ ಇಂಜನೀಯರಿಂಗ್ ವಿಭಾಗದ ಉದ್ದಕ್ಕೂ ಓಡಾಡಿದೆ. ಪ್ರಿನ್ಸ್‌ಪಾಲರ, ವಿವಿಧ ವಿಭಾಗದ ಮುಖ್ಯಾಧಿಕಾರಿಗಳ, ಕಾಲೇಜಿನ ಆಫೀಸ್ ಎಲ್ಲ ಬಂದಾಗಿದ್ದವು. ಪ್ರಿನ್ಸ್‌ಪಾಲ್ ಹೆಸರು ಪ್ರೊಫೆಸರ್ ಘಂಟೇವಾಲ. ಅರ್ಧ ಗಂಟೆಯಾಯಿತು. ಇವತ್ತು ಕಾಲೇಜಿಗೆ ರಜಾ ಇರಬಹುದೇ ಎಂದು ಅನುಮಾನವಾಯಿತು. ಕೂಡಲೇ ನೋಟೀಸು ಬೋರ್ಡುಗಳನ್ನು ನೋಡಿದೆ. ಸೂರತ್ತಿನ ಇಚ್ಛಾನಾಥ ದೇವಾಲಯದ ರಥೋತ್ಸವದ ನಿಮಿತ್ತ ಕಾಲೇಜಿಗೆ ರಜೆ ಕೊಟ್ಟಿದ್ದರು. ಮುಂದೇನು ಎಂದು ಒಂದು ಕ್ಷಣ ಯೋಚಿಸಿದೆ.

ಈಗ ನನಗೆ ಉಳಿದಿರುವದು ಒಂದೇ ಮಾರ್ಗ. ಪ್ರೊ. ಘಂಟೇವಾಲರನ್ನು ಕಾಣುವದು.

ಕಾಲೇಜಿನ ಮುಂಭಾಗದ ರಸ್ತೆಗೆ ಬಂದಾಗ ಒಬ್ಬ ಹುಡುಗ ಕಂಡ. ವಿಚಾರಿಸಿದೆ.

''ಈ ಕಾಲೇಜಿನ ಹಿಂಭಾಗದಲ್ಲೇ ಪ್ರಿನ್ಸಿಪಾಲರ ಮನೆ'' ಎಂದು ಆ ಹುಡುಗ ಹೇಳಿದ.

ಕಾಲಿಂಗ್ ಬೆಲ್ ಒತ್ತಿದಾಗ ದೇವರಂತೆ ಘಂಟೇವಾಲ ಪ್ರತ್ಯಕ್ಷರಾದರು. ಎತ್ತರಕ್ಕೆ ಬೆಳ್ಳಗೆ ಮೊರಾರ್ಜಿ ದೇಸಾಯರಂತೆ ಕಂಡರು. ನನ್ನನ್ನು ನೋಡಿ ಸ್ವಾಗತದ ನಗೆ ನಕ್ಕು ಪ್ರಾಯಶಃ ಗುಜರಾತಿಯಲ್ಲಿ ಎರಡು ಮಾತು ಉಚ್ಚರಿಸಿ ನನ್ನನ್ನು ಒಳಗೆ ಕೂಡ್ರಿಸಿ ತಾವೂ ಕೂತು ''ಏನಾಗಬೇಕಿತ್ತು?'' ಎಂದರು.

''ನಾನು ಮೈಸೂರಿನಿಂದ ಇಂಜನೀಯರಿಂಗ್‌ಗಾಗಿ ಬಂದಿರುವ ವಿದ್ಯಾರ್ಥಿ. ಬಿ.ಎಸ್ಸಿ. ಮುಗಿಸಿ ಕಡಿಮೆ ಅವಧಿಯ ಇಂಜನೀಯರಿಂಗ್ ಕೋರ್ಸಿಗೆ ಇಲ್ಲಿ ಅವಕಾಶ ದೊರೆತದ್ದರಿಂದ ಕಾಲೇಜಿನ ಪತ್ರ ತಲುಪಿದ ಕೂಡಲೇ

ಹೊರಟು ಬಂದೆ. ಇವತ್ತು ಕಾಲೇಜಿಗೆ ಹಣ ಕಟ್ಟಲಿಕ್ಕೆ ಕೊನೆಯದಿನ...."

ಪ್ರೊಫೆಸರ್ ನನಗೆ ಧೈರ್ಯವಾಗುವಂತೆ ಸದ್ದಿಲ್ಲದ ನಗೆ ಅರಳಿಸಿದರು.

"ಯೋಚಿಸಬೇಡಿ. ಆಫೀಸಿಗೆ ಒಂದು ಲೆಟರ್ ಕೊಡ್ತೀನಿ. ನಾಳೆ ಆಫೀಸ್ ಸೂಪರಿಂಟೆಂಡೆಂಟ್‌ಗೆ ಅದನ್ನು ತೋರಿಸಿ ಹಣ ಕಟ್ಟಿ" ಎಂದರು. ಮನಸ್ಸಿಗೆ ಸಮಾಧಾನವಾಯಿತು. ಪ್ರಿನ್ಸಿಪಾಲರಿಗೆ ಕೃತಜ್ಞತೆ ಹೇಳಿ ಹೊರಟೆ.

ಕನ್ನಡ ಕೆಫೆಗೆ ಹೋಗಿ ಊಟ ಮಾಡಿದೆ. ರೂಮಿನ ಬಾಗಿಲು ಭದ್ರಪಡಿಸಿ ದಿಂಬಿಗೆ ತಲೆ ಕೊಟ್ಟದ್ದೇ ತಡ ಗಾಢ ನಿದ್ರೆ ಹತ್ತಿತು.



ಸೂರತ್ತಿನ ಉದ್ದುದ್ದನೆ ಬೀದಿಗಳಲ್ಲಿ ಎಷ್ಟೋ ಹೊತ್ತು ನಡೆದು ನದಿಯ ಸಮೀಪಕ್ಕೆ ಬಂದೆ. ನದಿಯ ಹೆಸರು ತಪತಿ. ಅಲ್ಲಿನವರು ಅದನ್ನು 'ತಾಪಿ' ಎಂದು ಮೊಟಕಾಗಿ ಕರೆಯುತ್ತಿದ್ದರು. ತಾಪಿಯ ಬಲದಂಡೆಯ ಮೇಲೆ ಉದ್ದಕ್ಕೂ ಸೂರತ್‌ನಗರ ಹಬ್ಬಿತ್ತು. ನದಿಯ ಹತ್ತಿರ ಒಂದು ಪಾರ್ಕು. ಅದರ ಹೆಸರು ಚೌಪಾತಿ ಪಾರ್ಕು.

ಬಹಳ ಹೊತ್ತು ಚೌಪಾತಿ ಪಾರ್ಕಿನಲ್ಲಿ ಏನೇನೋ ಯೋಚಿಸುತ್ತಾ ಕುಳಿತಿದ್ದೆ. ಆ ಯೋಚನೆಗಳಲ್ಲಿ ಒಂದು ಸಂಬದ್ಧತೆ ಇರದೆ ರೇಲ್ವೆ ನಿಲ್ದಾಣದಲ್ಲಿ ಆಡುತ್ತಿದ್ದ ಅಮ್ಮನ ಕೈ ಬೆಂಗಳೂರಿನ ಲಾಲ್‌ಬಾಗಿನ ಗ್ಲಾಸ್‌ಹೌಸ್ ಸಮೀಪದ ಸೊಟ್ಟ ಸೈಪ್ರಸ್ ಮರ....

ಚೌಪಾತಿಯಲ್ಲಿ ಜನಸಂದಣಿ ಹೆಚ್ಚಾಯಿತು.

ಒಂದು ರಿಕ್ಷಾ ಹಿಡಿದು ಕನ್ನಡ ಕೆಫೆಗೆ ಬಂದು ಬಿದ್ದೆ. ಸ್ವಲ್ಪ ಹೊತ್ತಿನ ಮೇಲೆ ಗೋಪಿ ಬಾಗಿಲು ಬಳಿ ಬಂದು,

"ಸಂಜೆ ಊಟ?" ಎಂದ.

"ಇಲ್ಲಿಗೇ ತಗೊಂಡು ಬಾ."

"ಮತ್ತೇನಾದ್ರೂ ಬೇಕಾ?"

"ಏನೂ ಬೇಡಾ.... ಥ್ಯಾಂಕ್ಸ್...."

"ಏನಾದ್ರೂ ಬೇಕಾದ್ರೆ ಹೇಳಿ ಸಾರ್. ಸಂಕೋಚ ಮಾಡ್ಕೋಬೇಡಿ."

"ಏನೂ ಬೇಡ ಊಟ ತಂದ್ರೆ ಸಾಕು."

"ಸರಿ ಸಾರ್" ಎಂದು ನೊಂದುಕೊಂಡಂತೆ ಮುಖ ಸಪ್ಪಗೆ ಮಾಡಿ ಗೋಪಿ ಹೊರಟು ಹೋದ. ಗೋಪಿ ಹೀಗೇಕೆ ಕೇಳಿದ.... ಒಂದು ಸಣ್ಣ ಅನುಮಾನ ತಲೆಯಲ್ಲಿ ಸುಳಿಯಿತು.

ಬೆಳಿಗ್ಗೆ ಸುಮಾರು ಎಂಟರ ಸಮಯ. ಆಕಾಶದಲ್ಲಿ ಮೋಡಗಳು ತೇಲುತ್ತಿದ್ದವು. ಇದ್ದಕ್ಕಿದ್ದಂತೆ ಜೋರಾಗಿ ಮಳೆ ಸುರಿಯಲಾರಂಭಿಸಿತು. ಹೊರಗೆ ಹೋಗದ ಪರಿಸ್ಥಿತಿ. ಮಳೆಯ ನೆಪದಲ್ಲಿ ಕೋಣೆಯಲ್ಲಿ ಕೂಡುವಂತಿಲ್ಲ.

ಯಥಾಪ್ರಕಾರ ರಿಕ್ಷಾ ಕಾಲೇಜಿನ ಹತ್ತಿರ ಬಂದಾಗ ಕಾರಿಡಾರಿನಲ್ಲಿ ಹುಡುಗರು ತುಂಬಿದ್ದರು. ಆಫೀಸಿಗೆ ಹೋಗಿ ಸೂಪರಿಂಟೆಂಡೆಂಟ್ ಅವರನ್ನು ಭೆಟ್ಟಿ ಮಾಡಿ ಪ್ರಿನ್ಸಿಪಾಲರ ಪತ್ರ ತೋರಿಸಿದೆ. ಸೂಪರಿಂಟೆಂಡೆಂಟ್ ಷಾ ಕುರ್ಚಿಯಲ್ಲಿ ತುಂಬಿಕೊಂಡಿದ್ದ ಆಜಾನುಬಾಹು. ಬಹಳ ಜಬರ್ದಸ್ತಾಗಿದ್ದರು. ಏನೋ ಕೇಳಲು ಬಂದ ವಿದ್ಯಾರ್ಥಿಗೆ ಈತ ಉತ್ತರಿಸುತ್ತಿದ್ದ, ದಬಾಯಿಸುತ್ತಿದ್ದ ರೀತಿ ನೋಡಿದರೆ ಘಂಟೇವಾಲರಿಗಿಂತ ಕಾಲೇಜಿನಲ್ಲಿ ಈತನದೇ ಹೆಚ್ಚು ಜೋರು ಎನಿಸುತ್ತಿತ್ತು. ಷಾನ ಇಂಗ್ಲಿಷ್ ಸಹ ವಿಚಿತ್ರವಾಗಿತ್ತು. ತುಂಡು ತುಂಡಾಗಿ ಕೆಲವು ಪದಗಳನ್ನು ಕೂಡಿಸಿ ವಾಕ್ಯ ರಚನೆಯ ಜವಾಬ್ದಾರಿಯನ್ನು ಕೇಳುವವರಿಗೇ ಬಿಡುತ್ತಿದ್ದ.

ನನ್ನಿಂದ ಹಣ ಪಡೆದು ರಸೀತಿ ಕೊಟ್ಟ ಷಾ, "ಯೂನಿವರ್ಸಿಟಿಗೆ ಹೋಗಿ ನೀನು ಒಂದು ಸರ್ಟಿಫಿಕೇಟ್ ತರ್‍ಬೇಕು. ಬೇರೆ ಯೂನಿವರ್ಸಿಟಿಯಿಂದ ಬಂದವರು ಅಂತ ಸರ್ಟಿಫಿಕೇಟ್ ತರಬೇಕಾಗುತ್ತೆ. ಏದೋ ಹತ್ತೋ ಫೀಜ್ ಇರುತ್ತೆ. ಕಟ್ಟಿ ತರಬೇಕು. ಲೇಟಾಗೊಲ್ಲಾ" ಎಂದು ತನ್ನದೇ ಶೈಲಿಯ ಇಂಗ್ಲಿಷ್‌ನಲ್ಲಿ ಹೇಳಿದ.

ಯೂನಿವರ್ಸಿಟಿ ಅಹಮದಾಬಾದಿನಲ್ಲಿ. ಇಲ್ಲಿಗೆ ಇನ್ನೂರು ಮೈಲು ದೂರ. ಎಳಕ್ಕೇ ಸಂಜೆಯ ಊಟ ಮುಗಿಸಿ ನೇರವಾಗಿ ರೈಲ್ವೆ ನಿಲ್ದಾಣಕ್ಕೆ ಬಂದೆ. ಅಹಮದಾಬಾದಿನ ರೈಲು ಇನ್ನು ಅರ್ಧ ಗಂಟೆಗೆ ಹೊರಡುವದಿತ್ತು. ತಟ್ಟನೆ ಬೆಟ್ಟಪ್ಪನ ನೆನಪಾಗಿ ಅವನ ಅಂಗಡಿಯ ಹತ್ತಿರ ಹೋದೆ.

ಅಂಗಡಿಯಲ್ಲಿ ಬೆಟ್ಟಪ್ಪನ ಸ್ಥಳದಲ್ಲಿ ಒಬ್ಬಳು ಹೆಂಗಸು ಕೂತಿದ್ದಳು. ಆಕೆ ಬೆಟ್ಟಪ್ಪನ ಹೆಂಡತಿ ಇರಬೇಕೆಂದು ಕೂಡಲೆ ಹೊಳೆಯಿತಾದರೂ ಅದನ್ನು ಅನುಮಾನಿಸುವಷ್ಟು ಆಕೆ ಚೆಲುವಾಗಿದ್ದಳು. ದಕ್ಷಿಣದವರಂತೆ ಎಡಕ್ಕೆ ಸೆರಗು ಹೊದ್ದ ಆಕೆ ಎಂಥವರೂ ನಿಂತು ನೋಡುವಂತೆ ಆಕರ್ಷಕವಾಗಿದ್ದಳು. ಗಿರಾಕಿಗಳೊಂದಿಗೆ ಗುಜರಾತಿಯಲ್ಲಿ ಮಾತಾಡುತ್ತಾ, ಅವರು ಕೇಳುತ್ತಿದ್ದನ್ನು ಎತ್ತಿ ಕೊಡುತ್ತಿದ್ದಳು. ಆಕೆಯನ್ನೇ ನೋಡುತ್ತಾ ನಿಂತೆ. ಅವಳಿಗೆ ಒಳ್ಳೇ ಮೈಕಟ್ಟದೆ. ಬಣ್ಣ ಮಾಸಲು ಬಿಳುಪು. ಮೂಗು ಸ್ವಲ್ಪ ಮೊಂಡು. ಒತ್ತಾದ ರೆಪ್ಪೆಗಳು. ಅವಳು ನಕ್ಕರೆ ಕಣ್ಣುಗಳು ಥಳಗುಟ್ಟುತ್ತವೆ. ಬೆಟ್ಟಪ್ಪನಿಗೆ ಇಂಥ ಹುಡುಗಿ ಸಿಕ್ಕದ್ದು ಆಶ್ಚರ್ಯ ಎನ್ನಿಸಿತು.

''ಬೆಟ್ಟಪ್ಪನವರನ್ನು ನೋಡಬೇಕಾಗಿತ್ತು" ಎಂದು ಪರಿಚಿತ ನಗೆ ಅರಳಿಸಿದೆ. ಅವಳಿಗೆ ಆಶ್ಚರ್ಯ, ಸಂತೋಷ, ಸಂಭ್ರಮ. ಮಾತಾಡಲು ಶುರುಮಾಡಿದಾಗ ಅವಳ ಕಣ್ಣುಗಳು ಸ್ವಲ್ಪ ಮಂಕಾದಂತೆ ತೋರಿತು.

''ಮೊನ್ನೆ ನಿನ್ನೆ ಅವರಿಗೆ ವಿಪರೀತ ಜ್ವರ. ಮಲಗಿಬಿಟ್ಟದ್ದಾರೆ..... ಇವತ್ತು ಸ್ವಲ್ಪ ಜ್ವರ ಬಿಟ್ಟದೆ. ಮನೆಯಲ್ಲೇ ಇರಿ ಅಂತ ಹೇಳಿ ನಾನೇ ಅಂಗಡಿಗೆ ಬಂದೆ," ಅಂದಳು. ನಾನು ಲೊಚಗುಟ್ಟಿ,

'' ಈಗ ಜ್ವರ ಇಲ್ಲ ತಾನೆ? " ಎಂದೆ.

''ಬೆಳಿಗ್ಗೆ ಒಂದು ಹೊತ್ತಿಗೆ ಮೈ ಬೆವರಿತು...... ನಾನು ಬರುವಾಗ ಗೆಲುವಾಗಿದ್ದರು.... ನೀವು ಮೈಸೂರಿನವರಾ? ಇಲ್ಲೇ ಇರುವಿರಾ.... ಒಮ್ಮೆಯಾದ್ರೂ ಮನೇ ಕಡೆ ಬರಲಿಲ್ವಲ್ಲಾ...."

''ಈ ವಾರ ತಾನೇ ಸೂರತ್‌ಗೆ ಬಂದೆ... ಬಂದ ದಿನವೇ ಇವರ ಪರಿಚಯ ಆಯ್ತು. ಮನೆಗೆ ಬನ್ನಿ ಅಂತ ಬೆಟ್ಟಪ್ಪ ಕೂಡ ಹೇಳಿದರು....."

ಬೆಟ್ಟಪ್ಪನ ಹೆಂಡತಿ ಮನೆಯ ವಿಳಾಸದ ಚೀಟಿಕೊಟ್ಟಳು. ಅದನ್ನು ಜೋಬಿನಲ್ಲಿ ತುರುಕಿಕೊಳ್ಳುತ್ತ ಮತ್ತೆ ನೋಡುವದಾಗಿ ಹೇಳಿದೆ. ರೈಲು ಹತ್ತಿ ಕುಳಿತಾಗ ಬೆಟ್ಟಪ್ಪನ ಹೆಂಡತಿಯ ಮುಖ ಮತ್ತೆ ಮತ್ತೆ ಕಣ್ಣಿಗೆ ಕಟ್ಟುತ್ತಿತ್ತು. ಅವಳ ಹೆಸರು ಕೇಳಬೇಕಾಗಿತ್ತು. ಅಥವಾ ಕೇಳದಿದ್ದುದೇ ಸರಿ. ಕೇಳಿದ್ದರೆ ಅಸಭ್ಯತೆಯಾಗುತ್ತಿತ್ತೋ ಏನೋ.....





ಅಹಮದಾಬಾದಿನಲ್ಲಿ ಯೂನಿವರ್ಸಿಟಿಯ ಕಚೇರಿಯಲ್ಲಿ ಉದ್ದನೆಯ ಕ್ಯೂ ಇತ್ತು. ಅವರೆಲ್ಲಾ ನನ್ನ ಹಾಗೇ ಸರ್ಟಿಫಿಕೇಟ್‌ಗಾಗಿ ಬಂದವರು. ನಾನೂ ಕ್ಯೂನಲ್ಲಿ ಸೇರಿಕೊಂಡೆ. ನನ್ನ ಮುಂದಿದ್ದ ತೆಳ್ಳನೆಯ ಮೂಳೆಹಾದ ಗುಜರಾತಿ ಹುಡುಗನೊಬ್ಬನೊಂದಿಗೆ ಮಾತು ಶುರು ಮಾಡಿದೆ. ಅವನ ಹೆಸರು ವೋರಾ. ಆ ಹುಡುಗ ಮುಂಬಯಿಯಲ್ಲಿದ್ದ ಗುಜರಾತಿ. ಈ ವರ್ಷವಷ್ಟೇ ಅವನ ತಂದೆ ತಮ್ಮ ವ್ಯಾಪಾರವನ್ನು ಸೂರತ್‌ಗೆ ವರ್ಗಾಯಿಸಿದ್ದರು. ಅವನೂ ನಾನು ಓದಬೇಕಾಗಿದ್ದ ಕಾಲೇಜಿನಲ್ಲೇ ಇಂಜನೀಯರಿಂಗ್ ವಿದ್ಯಾರ್ಥಿ. ಅವನಿಗೆ ಹತ್ತು ಜನ ತಮ್ಮ-ತಂಗಿಯರು. ಮನೆಯಲ್ಲಿ ವ್ಯಾಸಂಗ ಸಾಧ್ಯವೇ ಇಲ್ಲ. ಅದಕ್ಕಾಗಿ ಹಾಸ್ಟೆಲ್‌ನಲ್ಲಿ ಇರುವದಕ್ಕೆ ನಿರ್ಧರಿಸಿದ್ದ.

ವೋರಾ ಸುಮಾರಾಗಿ ಇಂಗ್ಲಿಷ್ ಮಾತಾಡುತ್ತಿದ್ದ. ಬಹಳ ಸರಳ ಮನಸ್ಸಿನ, ಬೇಗ ಅಪರಿಚಿತರೊಂದಿಗೆ ಹೊಂದಿಕೊಳ್ಳುವ ಸ್ವಭಾವದವನು ಎನ್ನಿಸಿತು. ಬಹಳ ಬೇಗ ಜೋಕು ಮಾಡುತ್ತಾ ನಗುತ್ತ ಹೊಂದಿಕೊಂಡುಬಿಟ್ಟ. ಅವನಿಗೆ ಒಂದು ಬಂಗಾರದ ಹಲ್ಲಿತ್ತು. ಅವನು ನಗುವಾಗ ಅದು ವಿಲಕ್ಷಣವಾಗಿ ಹೊಳೆಯುತ್ತಿತ್ತು.

"ಇವತ್ತು ನಮಗೆ ಸರ್ಟಿಫಿಕೇಟ್ ಸಿಗದಿದ್ದರೆ ಬಹಳ ತೊಂದರೆ ಆಗುತ್ತದೆ," ನಾನೆಂದೆ.

"ಅದಕ್ಕೊಂದು ಉಪಾಯ ಮಾಡುವಾ," ವೋರಾ ಹೇಳಿದ. ಅಲ್ಲಿನ ಜವಾನನ ಹೆಸರು ಪಲಟ್ ಎಂದು. ವೋರಾ ಪಲಟ್‌ನನ್ನು ಒಂದು ಕಡೆ ಕರೆದು ಅವನ ಕೈಯಲ್ಲಿ ಹತ್ತು ರೂ. ತುರುಕಿ "ನಮಗೆ ಇವತ್ತೇ ಸರ್ಟಿಫಿಕೇಟ್ ಬೇಕು" ಎಂದ.

"ನೋಡೋಣ, ನಿಮ್ಮ ಅದೃಷ್ಟ ಹೇಗಿದೆಯೋ? ಅರ್ಧ ಗಂಟೆ ವೇಟ್ ಮಾಡಿ" ಎಂದು ಹೇಳಿ ನಮ್ಮ ಹೆಸರು ಗುರುತು ಮಾಡಿದ ಚೀಟಿ ತೆಗೆದುಕೊಂಡು ಒಳಕ್ಕೆ ಹೋದ.

ಅನಂತರ ಹತ್ತು ನಿಮಿಷದಲ್ಲಿ ಸರ್ಟಿಫಿಕೇಟ್ ನಮ್ಮ ಕೈ ಸೇರಿದವು.



ಮಧ್ಯಾಹ್ನ ಕಾಲೇಜಿಗೆ ಹೋಗಿ ಆಫೀಸಿನಲ್ಲಿ ಸರ್ಟಿಫಿಕೇಟ್ ತಲುಪಿಸಿದೆ. ಊರಿಗೆ ಬಂದು ಪತ್ರ ಬರೆದೆ. ಪತ್ರವನ್ನು ಪೋಸ್ಟ್ ಮಾಡಿ ಟೈಂಟೇಬಲ್ ಗುರುತಿಸುವದಕ್ಕೆಂದು ಪುನಃ ಕಾಲೇಜು ಬಳಿ ಹೋದೆ. ನೋಟೀಸ್ ಬೋರ್ಡಿನಲ್ಲಿ ಟೈಮ್‌ಟೇಬಲ್ ಇತ್ತು. ಅದನ್ನು ಗುರುತಿಸಿಕೊಳ್ಳುವದರಲ್ಲಿ ಮಗ್ನನಾಗಿದ್ದಾಗ ಹಿಂದಿನಿಂದ ಯಾರೋ ಹೆಗಲ ಮೇಲೆ ಕೈ ಇಟ್ಟು "ಹಲೋ" ಎಂದರು. ತಿರುಗಿ ನೋಡಿದರೆ ವೋರಾ. "ಬನ್ನಿ, ನಾನಾಗಲೇ ಅದನ್ನು ಬರ್‍ಕೊಂಡಿದ್ದೇನೆ" ಎಂದ. ಹೊರಟೆವು.

"ದಿನಕ್ಕೆ ಮೂರು ರೂಪಾಯಿ ತೆರುತ್ತ ಕನ್ನಡ ಕೆಫೆಯಲ್ಲಿ ಎಷ್ಟು ದಿವಸ ಇರ್ತೀರಿ?" ವೋರಾ ಕೇಳಿದ.

"ಯಾವುದಾದರೂ ಹಾಸ್ಟೆಲ್ ಹಿಡಿಯಬೇಕು ಅಂತಾ ಯೋಚನೆ.... ನೀವು ಇರಲು ಯೋಚಿಸಿರುವ ಹಾಸ್ಟೆಲ್‌ನಲ್ಲಿ ನನಗೂ ಸ್ಥಳ ದೊರೆಯಬಹುದೇ?"

"ಹಾಸ್ಟೆಲ್ ಸೀಟ್ ಬಗ್ಗೆ ನಾಳೆ ನಿಮಗೆ ಯಾವುದನ್ನೂ ಖಚಿತವಾಗಿ ಹೇಳ್ತೀನಿ" ಅಂದ.

ವೋರಾ ಹೋದ ಮೇಲೆ ಗಡಿಯಾರ ನೋಡಿದೆ. ಇನ್ನೂ ನಾಲ್ಕೂ ಹತ್ತು. ಇಷ್ಟು ಬೇಗ ಹೋಟೇಲ್‌ಗೆ ಹೋಗಿ ಏನು ಮಾಡುವದು? ಬೆಟ್ಟಪ್ಪನ ನೆನಪಾಯಿತು.

ಬೆಟ್ಟಪ್ಪನ ಹೆಂಡತಿ ಬರೆದಿದ್ದ ವಿಳಾಸದ ಚೀಟಿಯನ್ನು ಜೋಬಿನಿಂದ ಹೊರತೆಗೆದು ನೋಡಿದೆ. ಹನುಮಾನ್ ದೇವಾಲಯದ ಪಕ್ಕದಲ್ಲೇ ಮನೆ. ಮನೆ ನಂಬರ್ ೧೦೮.

ಬೆಟ್ಟಪ್ಪನದು ಅಂತಸ್ತಿಲ್ಲದ ಒಂದು ಪುಟಾಣಿ ಮನೆ-ಬಾಗಿಲ ಬಳಿ ಇಬ್ಬರು ಮುದ್ದಾದ ಪುಟ್ಟ ಹುಡುಗಿಯರು ಚಿತ್ರಕ್ಕೆ ಬಣ್ಣ ತುಂಬುತ್ತಾ ಕೂತಿದ್ದರು. ಇವು ಬೆಟ್ಟಪ್ಪನ ಮಕ್ಕಳಿರಬೇಕು ಎನಿಸಿತು.

"ಬೆಟ್ಟಪ್ಪ ಇದ್ದಾರಾ?" ಎಂದು ಮಕ್ಕಳನ್ನು ಕೇಳಿದೆ.

"ಇದ್ದಾರೆ, ಮಲಗಿದ್ದಾರೆ" ಎಂದು ಒಬ್ಬಳು ಮೆಲ್ಲಗೆ ಹೇಳಿದಾಗ ಇನ್ನೊಬ್ಬಳು ತಲೆ ಹಾಕುತ್ತಿದ್ದಳು. ಅಷ್ಟರಲ್ಲಿ ಬಾಗಿಲ ಬಳಿ ಬೆಟ್ಟಪ್ಪನ ಹೆಂಡತಿ ಕಾಣಿಸಿಕೊಂಡು ಮುಖದಲ್ಲಿ ಆಶ್ಚರ್ಯ, ಸಂತೋಷ ತುಳುಕಿಸುತ್ತಾ,

"ಓ ನೀವು.... ಬನ್ನಿ ಬನ್ನಿ" ಎಂದು ಬಾಗಿಲನ್ನು ಪೂರಾ ತೆರೆಯುತ್ತಾ ಹಿಂದೆ ಸರಿದಳು.

ಬೆಟ್ಟಪ್ಪ ಮಂಚದ ಮೇಲೆ ಮಲಗಿದ್ದ. ನನ್ನನ್ನು ನೋಡಿ ಅರ್ಧ ಎದ್ದು ಕೂತ. ಮೂರು ದಿನದಲ್ಲಿ ಆತ ಬಹಳ ಇಳಿದು ಹೋಗಿದ್ದ. ಬೆಟ್ಟಪ್ಪನಿಗೆ ಬೆಳಿಗ್ಗೆ ಜ್ವರ ಆರುತ್ತಿತ್ತು. ಸಂಜೆಯಾಗುತ್ತಲೇ ಸಣ್ಣಗೆ ಛಳಿ ಹತ್ತಿ ಮತ್ತೆ ಏರುತ್ತಿತ್ತು. ಅವನ ತುಟಿಗಳು ಒಣಗಿಹೋಗಿದ್ದವು. ನಾಲಗೆಯಿಂದ ತುಟಿ ಒರೆಸಿಕೊಳ್ಳುತ್ತ,

"ನೀವು ಅಪರೂಪಕ್ಕೆ ಬಂದಿರಿ, ನಾನು ಮಲಗಿದ್ದೀನಿ" ಎಂದ.

ಬೆಟ್ಟಪ್ಪನಿಗೆ ಟೈಫಾಯಿಡ್ ಇರಬಹುದೆ? ಎಂದು ಅನುಮಾನವಾಯಿತು. ಅದೇ ಬೀದಿಯಲ್ಲಿದ್ದ ಒಬ್ಬರು ಷಾಪ್ ಡಾಕ್ಟರ್ ಬಳಿ ಬೆಟ್ಟಪ್ಪ ಔಷಧಿ ತರಿಸುತ್ತಿದ್ದ.

"ಡಾಕ್ಟರ್ ಹೇಗೆ? ಪರವಾಗ್ಗಿಲ್ಲವಾ?" ಎಂದು ಕೇಳಿ ಕುರ್ಚಿಯಲ್ಲಿ ಕುಳಿತೆ.

"ಏನು ಪರವಾಗಿಲ್ಲವೋ.... ನಮಗೆ ಗತಿಯಿಲ್ಲ, ಅವರಿಗೆ ಮತಿಯಿಲ್ಲ" ಎಂದು ಬೆಟ್ಟಪ್ಪ ಅಸಮಾಧಾನ ಸೂಚಿಸಿ ಮುಖ ಹಿಂಡಿಕೊಂಡ.

ಅಷ್ಟರಲ್ಲಿ ಬೆಟ್ಟಪ್ಪನ ಹೆಂಡತಿ ಸೂರತ್‌ನಲ್ಲಿ ಅಪರೂಪದ ವಸ್ತುವಾದ ಕಾಫಿ ಮಾಡಿ ತಂದಳು.

"ಲಕ್ಷ್ಮೀ, ಇವತ್ತು ರಾತ್ರಿ ಇವರು ನನ್ನ ಜೊತೇಲೆ ಊಟ ಮಾಡ್ತಾರೆ" ಎಂದು ಬೆಟ್ಟಪ್ಪ ಹೇಳಿದ.

"ಛೆ, ಛೆ" ಎಂದು ಏನನ್ನೋ ಹೇಳುವದಕ್ಕೆ ನಾನು ತೊಡಗಿದಾಗ ಬೆಟ್ಟಪ್ಪ ಮಧ್ಯೆಯೇ ತಡೆದು,

"ನೀವು ನನ್ನ ಮಾತು ಕೇಳ್ಲೇಬೇಕು. ಇಲ್ಲಾ ನಂಗೆ ಬೇಜಾರಾಗುತ್ತೆ" ಎಂದ.

"ನೀವು ಮಾತಾಡ್ತಿರಿ, ಬಂದೆ" ಎಂದು ಲಕ್ಷ್ಮಿ ಅಡುಗೆ ಮನೆಗೆ ಹೋದಳು. ಅಲ್ಲಿ ಅವಳು ತನ್ನ ಮಕ್ಕಳಿಗೆ "ಮಾಮ ಬಂದಿದೆ, ಮಾತಾಡ್ಸಿ ಹೋಗಿ" ಎನ್ನುತ್ತಿದ್ದುದು ಕೇಳಿಸಿತು.

ಕೋಣೆಯ ಬಾಗಿಲಲ್ಲಿ ಇಣುಕಿದ ಮಕ್ಕಳು ಮೊದಲು ಸಂಕೋಚಪಟ್ಟರೂ ಐದು ನಿಮಿಷದಲ್ಲಿ ಸಂಕೋಚಬಿಟ್ಟು ನನ್ನೊಂದಿಗೆ ಹರಟೋಕೆ ಶುರುಮಾಡಿದರು. ದೊಡ್ಡವಳು ಸೀತ, ಚಿಕ್ಕವಳು ಪಾರ್ವತಿ. ಪಾರ್ವತಿ ನನ್ನ ತೊಡೆ ಹತ್ತಿ ಕೂತಳು. "ನಿಮ್ಮ ಮಕ್ಕಳು ತುಂಬಾ ಚೂಟಿ" ಎಂದಾಗ ಬೆಟ್ಟಪ್ಪ ಅಭಿಮಾನದಿಂದ ನೋಡಿದ.

ಲಕ್ಷ್ಮಿ ಕೋಣೆಯಲ್ಲಿ ಎಲೆ ಹಾಕಿ ನೀರು ತಂಬಿಗೆ ಸಿದ್ಧಪಡಿಸಿದರು. ನನ್ನ ಜೊತೆಗೆ ಬೆಟ್ಟಪ್ಪನೂ ಊಟಕ್ಕೆ ಕೂತ. ಲಕ್ಷ್ಮಿ ನನಗೆ ಅನ್ನ ಚಪಾತಿ ಪಲ್ಯ ಬಡಿಸಿ ಬೆಟ್ಟಪ್ಪನಿಗೆ ಅನ್ನ ತಿಳಿಸಾರು ಹಾಕಿದಳು. ಬೆಟ್ಟಪ್ಪ ನನ್ನ ಜೊತೆ ಕೂತು ಬಲವಂತಕ್ಕೆ ತುತ್ತು ಜಗಿಯುತ್ತಿರುವಂತೆ ತೋರಿತು. ಒಂದು ಮುಷ್ಟಿಯಷ್ಟೂ ಊಟ ಮಾಡಲಿಲ್ಲ. ಲಕ್ಷ್ಮಿ ಬಲವಂತ ಮಾಡಿ ನನಗೆ ಬಡಿಸುತ್ತಿದ್ದಳು. ಬೆಟ್ಟಪ್ಪನ ತೃಪ್ತಿಗಾದರೂ ನಾನು ಸುಮಾರಾಗಿ ಊಟ ಮಾಡಿದೆ.

"ನಾಲಿಗೆ ಕೊರಡಾಗಿದೆ.... ರುಚಿಯೇ ಹತ್ತುತ್ತಿಲ್ಲ..." ಎಂದು ಬೆಟ್ಟಪ್ಪ ಕೈ ತೊಳೆಯುವಾಗ ಹೇಳಿದ.

ಊಟ ಆದ ಮೇಲೆ ಲಕ್ಷ್ಮಿ ಎಲೆ-ಅಡಕೆ ಕೊಟ್ಟಳು. ಬೆಟ್ಟಪ್ಪ ನಶ್ಯ ಏರಿಸಿ ಬೆರಳು ಕೊಡವುತ್ತಿದ್ದ.

"ಹೊತ್ತಾಯ್ತು.... ನಾ ಬರ್ಲಾ....?" ಎಂದು ಮೇಲೆದ್ದೆ.

ಔಷಧ ಮಾತ್ರ ಸರಿಯಾಗಿ ತೆಗೆದುಕೊಳ್ಳುವಂತೆ ಬೆಟ್ಟಪ್ಪನಿಗೆ ಹೇಳಿ, ಅವನ ಅಪ್ಪಣೆ ಪಡೆದು ನಾನು ಹೊರಟಾಗ ಲಕ್ಷ್ಮಿ ಮತ್ತು ಮಕ್ಕಳು ಬಾಗಿಲ ತನಕ ಬಂದರು.

"ಅವರನ್ನು ಸರಿಯಾಗಿ ನೋಡ್ಕೊಳ್ಳಿ" ಎಂದು ಲಕ್ಷ್ಮಿಗೆ ಹೇಳಿದೆ. ಲಕ್ಷ್ಮಿ ತಲೆಯಾಡಿಸಿ "ಆಗಾಗ ಬರ್ತಾ ಇರಿ" ಎಂದಳು. ಬೀದಿಗಿಳಿದಾಗ ಮಕ್ಕಳು "ಮಾಮಾ.... ಟಾಟಾ....." ಎಂದು ಕೈ ಆಡಿಸುತ್ತಿದ್ದರು.



ವೋರಾ ಹೇಳಿದ ಹಾಸ್ಟೆಲ್ ನಮ್ಮ ಕಾಲೇಜಿಗೆ ಸ್ವಲ್ಪ ದೂರದಲ್ಲೇ ಇತ್ತು. ವೋರಾ ಅದೇ ಹಾಸ್ಟೆಲಿನಲ್ಲಿ ಉಳಿಯುವನಾದುದರಿಂದ ನನಗೂ ಅಲ್ಲೇ ಅನುಕೂಲವಾದರೆ ತುಂಬ ಚೆನ್ನ ಅನ್ನಿಸಿತು.

"ಕಾಲೇಜು ಮುಗಿಸಿಕೊಂಡು ಸಂಜೆ ಇಬ್ಬರೂ ನಮ್ಮ ಮನೆಗೇ ಹೋಗೋಣ. ನಿಮಗೆ ಹಾಸ್ಟೆಲ್‌ನಲ್ಲಿ ಸೀಟ್ ದೊರಕಿದ ಬಗ್ಗೆ ಅಧಿಕೃತವಾಗಿ ತಿಳಿಯುತ್ತೆ. ಇವತ್ತು ಮಧ್ಯಾಹ್ನವೇ ಫೋನ್ ಮಾಡೋದಾಗಿ ಪ್ರೆಸಿಡೆಂಟ್ ನಮ್ಮ ತಂದೆಗೆ ತಿಳಿಸಿದ್ದಾರೆ" ಎಂದು ವೋರಾ ಮರುದಿನ ಭೆಟ್ಟಿಯಾದಾಗ ಹೇಳಿದ.

ವೋರಾನ ಮನೆಯ ಮುಂದೆ ರಿಕ್ಷಾ ನಿಂತಿತು. ಮೂರಂತಸ್ತಿನ ಮನೆ. ಎರಡನೇ ಅಂತಸ್ತಿನ ದೊಡ್ಡ ಫ್ಲಾಟನ್ನು ವೋರಾನ ತಂದೆ ಬಾಡಿಗೆಗೆ ಹಿಡಿದಿದ್ದರು. ರೂಮಿನಲ್ಲಿ ನಾನು ವೋರಾ ಕೂತಿದ್ದಾಗ ತಾಯಿ ಕಾಣಿಸಿಕೊಂಡರು.

"ಪಾನಿ ಜೋಯಿಯೇ" ಎಂದು ಉಪಚಾರ ಮಾಡಿದರು. ಗಂಭೀರವಾಗಿ, ಸ್ಥೂಲವಾಗಿದ್ದ ಆಕೆಯನ್ನು ನೋಡಿದಾಗ ಅಮ್ಮನ ನೆನಪಾಯಿತು. ವೋರಾ ನನ್ನ ಪರಿಚಯ ಮಾಡಿಕೊಟ್ಟ.

ವೋರಾನ ತಂದೆ ಅವನಿಗೆ ಒಂದು ಸ್ಲಿಪ್ ಬರೆದಿದ್ದರು. ಅದರಲ್ಲಿ ನನಗೆ ಸೀಟ್ ದೊರಕಿರುವ ಬಗ್ಗೆ ಸೂಚಿಸಿದ್ದರು. ಒಂದು ದೊಡ್ಡ ಸಮಸ್ಯೆ ಅದರಿಂದ ಪರಿಹಾರವಾಯ್ತು.

ಸ್ವಲ್ಪ ಹೊತ್ತಿನಲ್ಲೇ ವೋರಾನ ಚಿಕ್ಕ ತಂಗಿ ಎರಡು ತಟ್ಟೆಯ ತುಂಬ ತಿಂಡಿ, ನೀರು ತೆಗೆದುಕೊಂಡು ಬಂದಳು. ವೋರಾ ಅದು ಅಲ್ಲಿನ ಜನಪ್ರಿಯ ಸ್ವೀಟ್ ಎಂದು ಹೇಳಿದ. 'ಅಡದಿಯಾ' ಎಂದು ಅದರ ಹೆಸರು.

ಒಂದು ಗಂಟೆ ವೋರಾನ ಮನೆಯಲ್ಲಿ ಕಳೆಯಿತು. ಆ ವೇಳೆಗೆ ಶಾಲೆಗಳಿಂದ ಅವನ ತಮ್ಮಂದಿರು, ತಂಗಿಯರು ಬರತೊಡಗಿ ಭಯಂಕರ ಗಲಾಟೆ ಶುರು ಮಾಡಿದರು. ಇನ್ನು ಜಾಗ ಬಿಡುವದು ಒಳ್ಳೆಯದು ಎಂದು ವೋರಾ ಹೇಳಿದ.

ಬೀದಿಗೆ ಬಂದ ಮೇಲೆ ವೋರಾ "ಇಲ್ಲಿಗೆ ಹನುಮಾನ್ ಪೂಲ್ ಸಮೀಪ, ಅಲ್ಲಿ ಸುಂದರವಾದ ಹನುಮಾನ್ ದೇವಾಲಯವಿದೆ. ನಿಮಗೆ ಆಸಕ್ತಿ ಇದ್ದರೆ ನೋಡಬಹುದು" ಎಂದ. ನನಗೆ ಬೆಟ್ಟಪ್ಪನ ನೆನಪಾಯಿತು.

ದಾರಿಯಲ್ಲಿ ನಾನು ವೋರಾಗೆ ಬೆಟ್ಟಪ್ಪನ ವಿಷಯ ಹೇಳಿದೆ– ಅವನ ಪರಿಚಯವಾದದ್ದು ಅವನ ಮನೆಗೆ ಹೋದದ್ದು ಅವನಿಗೆ ಮೈಯಲ್ಲಿ ಸ್ವಾಸ್ಥ್ಯವಿಲ್ಲದ್ದು.

"ನೀವು ಹೇಳೋದು ನೋಡಿದ್ರೆ ಬೆಟ್ಟಪ್ಪನ ಕಾಯಿಲೆ ಗಂಭೀರ ಸ್ವರೂಪದ್ದು ಅನ್ಸತ್ತೆ.... ಅವರು ಬೇರೆ ಯಾರಾದ್ರೂ ಒಳ್ಳೆ ಡಾಕ್ಟನ್ನ ನೋಡೋದು ಉತ್ತಮ" ಎಂದು ವೋರಾ ಹೇಳಿದ.

"ಹಾಗಿದ್ದರೆ ಬೆಟ್ಟಪ್ಪನನ್ನು ನೋಡಿಕೊಂಡು ಹೋಗೋಣ" ನಾನು ವೋರಾಗೆ ಹೇಳಿದೆ.

ಬೆಟ್ಟಪ್ಪನ ಮನೆಯ ಬಾಗಿಲು ಮುಂದೆ ಮಾಡಿತ್ತು. ನಾನು ಹೆಸರು ಹಿಡಿದು ಕೂಗಿದಾಗ ಲಕ್ಷ್ಮಿ ಬಂದಳು. ಕಣ್ಣುಗಳು ಕೆಂಪಾಗಿದ್ದವು. ನಿರುತ್ಸಾಹದಿಂದ "ಬನ್ನಿ" ಎಂದಳು. "ಹೇಗಿದ್ದಾರೆ?" ಎನ್ನುತ್ತಾ ವೋರಾನೊಂದಿಗೆ ಬೆಟ್ಟಪ್ಪ ಮಲಗಿದ್ದ ಕೋಣೆಗೆ ಹೋದೆ.

"ನಿನ್ನೆ ನೀವು ಹೋದ ಮೇಲೆ ರಾತ್ರಿ ತುಂಬಾ ಹೆದರಿಸಿಬಿಟ್ಟರು. ಹುಚ್ಚುಚ್ಚಾಗಿ ಏನೇನೋ ಮಾತಾಡುತ್ತಿದ್ದರು," ಲಕ್ಷ್ಮಿ ಮೆಲ್ಲಗೆ ಹೇಳಿದಳು. ಅವಳ ಕಣ್ಣುಗಳಲ್ಲಿ ನೀರು ತುಂಬುತ್ತಿತ್ತು.

ನನಗಿಂತ ವೋರಾಗೆ ತುಂಬ ಗಾಬರಿಯಾದಂತೆ ತೋರಿತು.

"ಬೇರೆ ಡಾಕ್ಟರನ್ನು ಈ ಕೂಡಲೇ ಕರ್ಕೊಂಡು ಬಂದು ತೋರ್ಸೋದೆ ಉತ್ತಮ. ಆಸ್ಪತ್ರೆಗೆ ಸೇರಿಸಬೇಕಾಗುತ್ತೋ ಏನೋ" ಎಂದು ಲಕ್ಷ್ಮಿಗೆ ಗೊತ್ತಾಗದಂತೆ ಇಂಗ್ಲಿಷಿನಲ್ಲಿ ಹೇಳಿದ.

"ನಡೀರಿ ಹೋಗೋಣ" ಎಂದು ವೋರಾಗೆ ಉತ್ತರಿಸಿ ಡಾಕ್ಟರನ್ನು ನೋಡ್ಕೊಂಡು ಬರೋದಾಗಿ ಲಕ್ಷ್ಮಿಗೆ ತಿಳಿಸಿ ವೋರಾನನ್ನು ಹಿಂಬಾಲಿಸಿದೆ.

"ನಮ್ಮ ಮನೆ ಹತ್ರಾ ತುಂಬಾ ಅನುಭವಿಗಳಾದ ಡಾಕ್ಟರ್ ಇದ್ದಾರೆ. ಅವರನ್ನೇ ನೋಡೋಣ. ನಮ್ಮ ಮನೆಯವರೆಲ್ಲಾ ಅಲ್ಲೇ ಹೋಗೋದು" ವೋರಾ ಹೇಳಿದ. ಡಾ. ದೇಸಾಯಿ ಸೊಗಸಾದ ಫಿಯಟ್ ಕಾರಿಟ್ಟದ್ದರು. ಬೆಟ್ಟಪ್ಪನ ಮನೆಗೆ ಬರುವದಕ್ಕೆ ಕೆಲವು ನಿಮಿಷಗಳೂ ಬೇಕಾಗಲಿಲ್ಲ.

ಡಾಕ್ಟರರು ಬೆಟ್ಟಪ್ಪನನ್ನು ಪರೀಕ್ಷಿಸುತ್ತಿರುವಾಗ ಲಕ್ಷ್ಮಿ ಕೃತಜ್ಞತೆಯಿಂದ ನನ್ನನ್ನು ನೋಡುತ್ತಿರುವಂತೆ ಕಂಡಿತು.

ಡಾಕ್ಟರ್ ಕೆಲವು ಕ್ಯಾಪ್ಸಲ್ ಬರೆದುಕೊಟ್ಟು "ಈ ಕೂಡಲೇ ಇವನ್ನು ತಂದು ಮೂರು ಗಂಟೆಗೆ ಒಂದರಂತೆ ಕೊಡ್ತಾ ಹೋಗಬೇಕು" ಎಂದರು.

"ಪರವಾಗಿಲ್ಲ ತಾನೆ?...." ನಾನು ಡಾಕ್ಟರನ್ನು ಕೇಳಿದೆ.

"ಡೋಂಟ್‌ವರಿ. ಈಗ ನೀವು ಬರ್ದೇ ಹೋಗಿದ್ರೆ ತುಂಬಾ ತೊಂದರೆ ಆಗ್ತಿತ್ತು" ಎಂದರು. ನಾವು ಡಾಕ್ಟರನ್ನು ಬೀಳ್ಕೊಡುವದಕ್ಕೆ ಕಾರಿನ ಬಳಿ ಹೋದಾಗ ಡಾಕ್ಟರ್.... "ರೋಗಿಯನ್ನು ತುಂಬಾ ಹುಷಾರಾಗಿ ನೋಡ್ಕೋಬೇಕು.

ಬರೀ ಎಳ್ನೀರು, ಹಣ್ಣಿನ ರಸ ಮಾತ್ರ ಕೊಡಿ. ರಾತ್ರಿ ಏನಾದ್ರೂ ತೊಂದ್ರೆ ಆದ್ರೆ ತಕ್ಷಣ ನನ್ನ ಬಂದು ನೋಡಿ. ಜ್ವರ ಜಾಸ್ತಿಯಾದ್ರೆ ತಣ್ಣೀರು ಬಟ್ಟೆ ಹಾಕಿ" ಎಂದರು.

''ರಾತ್ರಿ ನೀವು ಇಲ್ಲೇ ಇರೋದು ಒಳ್ಳೇದು" ಎಂದು ವೋರಾ ಹೇಳಿದ.

ನನಗೂ ಹಾಗೇ ತೋರಿತಾದರೂ ಲಕ್ಷ್ಮಿಗೆ ಹಾಗೆ ಹೇಳೋದು ಹೇಗೆ ಎಂದು ಯೋಚಿಸುತ್ತಿದ್ದೆ. ವೋರಾ ನಾನು ಮೆಡಿಕಲ್ ಸ್ಟೋರ್ಸ್‌ಗೆ ಹೋಗಿ ಕ್ಯಾಪ್ಸುಲ್ ತೆಗೆದುಕೊಂಡು ಬಂದೆವು.

''ಡಾಕ್ಟರ್ ತುಂಬಾ ತಜ್ಞರು. ನಾಳೆ ಬೆಳಿಗ್ಗೆ ಇವರಿಗೆ ಜ್ವರ ಇದ್ದರೆ ಕೇಳಿ" ಎಂದು ವೋರಾ ಗುಜರಾತಿಯಲ್ಲಿ ಲಕ್ಷ್ಮಿಗೆ ಧೈರ್ಯ ಹೇಳಿದ. ಲಕ್ಷ್ಮಿ ಕಾಫಿ ಮಾಡಿಕೊಟ್ಟಳು. ಮಕ್ಕಳೊಂದಿಗೆ ಕೆಲವು ನಿಮಿಷ ಮಾತಾಡಿ ವೋರಾ ಹೊರಟು ಹೋದ.

ಬೆಟ್ಟಪ್ಪ ಮುಲುಗುವದಕ್ಕೆ ಶುರು ಮಾಡಿದ. ಹಣೆ ಮುಟ್ಟಿ ನೋಡಿದೆ. ಜ್ವರ ಹತ್ತಿತು. ''ಒದ್ದೆ ಬಟ್ಟೆ ಹಾಕ್ಬೇಕು" ಎಂದು ಲಕ್ಷ್ಮಿಗೆ ಹೇಳಿದೆ ಲಕ್ಷ್ಮಿಯ ಕೈ ಒದ್ದೆ ಬಟ್ಟೆ ಹಾಕುವಾಗ ಕಂಪಿಸುತ್ತಿತ್ತು. ಬೆಟ್ಟಪ್ಪನ ಕನವರಿಕೆ ಹೆಚ್ಚಾಯಿತು. ''ಬೆಟ್ಟಪ್ಪ ಬೆಟ್ಟಪ್ಪ" ಎಂದು ಕೂಗಿದೆ. ಅವನಿಗೆ ಎಚ್ಚರವಾಯಿತು. ಪ್ರಯಾಸದಿಂದ ಕಣ್ಣು ತೆರೆದ. ಬಾಯಿ ತೆರೆಯಲು ಹೇಳಿದೆ. ಬಾಯಲ್ಲಿ ಕ್ಯಾಪ್ಸುಲ್ ಹಾಕಿ ನೀರು ಹಾಕಿ ''ನುಂಗಿ" ಎಂದೆ. ಬೆಟ್ಟಪ್ಪ ಮಾತ್ರೆ ನುಂಗಿ ಮತ್ತೆ ಕಣ್ಣು ಮುಚ್ಚಿಕೊಂಡ.

ಲಕ್ಷ್ಮಿ ನನಗಿಷ್ಟು ಹುಳಿ, ಅನ್ನ ತಂದು ಕೊಟ್ಟಳು. ಮಕ್ಕಳ ಬಳಿ ನನಗೆ ಹಾಸಿಗೆ ಉರುಳಿಸಿ ''ನೀವು ಮಲಗಿಕೊಳ್ಳಿ" ಎಂದಳು.

''ನನಗೆ ಬೇಗ ನಿದ್ದೆ ಬರೋದಿಲ್ಲ. ನಾನಿಲ್ಲೇ ಮಂಚದ ಪಕ್ಕ ಕುರ್ಚಿಯ ಮೇಲೆ ಒರಗ್ತೀನಿ. ನೀವು ನಿದ್ದೆ ಮಾಡಿಲ್ಲ..... ವಿಶ್ರಾಂತಿ ತಗೊಳ್ಳಿ."

''ಪರವಾಗಿಲ್ಲ" ಎಂದು ಹೇಳಿ ಮಂಚದ ಇನ್ನೊಂದು ಪಕ್ಕ ತನ್ನ ಕುರ್ಚಿ ಎಳೆದುಕೊಂಡು ಲಕ್ಷ್ಮಿ ಕೂತಳು.

ಬಹಳ ಹೊತ್ತು ಕಳೆದ ಮೇಲೆ ನನಗೆ ನಿದ್ದೆ ಬಂತು.

ಒಮ್ಮೆ ಏನೋ ಸಪ್ಪಳಾಗಿ ತಟ್ಟನೆ ಕಣ್ತೆರೆದೆ. ಆಗ ಒಂದು ಗಂಟೆ ಸಮಯ. ಲಕ್ಷ್ಮಿ ಬೆಟ್ಟಪ್ಪನಿಗೆ ಮಾತ್ರೆ ನುಂಗಿಸುತ್ತಿದ್ದಳು.

ಬೆಟ್ಟಪ್ಪನ ಕಾಯಿಲೆ ಗುಣವಾಗುವುದಕ್ಕೆ ಒಂದು ವಾರ ಹಿಡಿಯಿತು. ಆ ಸಮಯದಲ್ಲಿ ಪ್ರತಿನಿತ್ಯ ಸಂಜೆ ಕಾಲೇಜು ಮುಗಿಸಿಕೊಂಡು ಬೆಟ್ಟಪ್ಪನ ಮನೆಗೆ ಬಂದು ಅವನೊಂದಿಗೆ ಒಂದೆರಡು ಗಂಟೆ ಕಳೆದು ಹಾಸ್ಟೆಲಿಗೆ ಹೋಗುತ್ತಿದ್ದೆ. ಹೆಚ್ಚು ಪರಿಚಯವಾದಂತೆ ಲಕ್ಷ್ಮಿಯ ಬಗ್ಗೆ ನನಗೆ ಹೆಚ್ಚು ಗೌರವ ಉಂಟಾಯಿತು. ಬೆಟ್ಟಪ್ಪನ ಸಂಪಾದನೆ ಅವರ




''ಹಲೋ.... ಪೊಲೀಸ್ ಸ್ಟೇಶನ್? ಸ್ಸಾರ್, ನಮ್ಮನೆಯ ಕಪಾಟಿನಲ್ಲಿಟ್ಟಿದ್ದ ಎರ್ಡ್ ತಿಂಗಳಿನ ಸಕ್ಕರೆಯನ್ನ ಯಾರೋ ಕದ್ದಿಟ್ಟಿದ್ದಾರೆ..... ಸ್ಸಾರ್."

ಸಂಸಾರಕ್ಕೆ ಸಾಲುತ್ತಿರಲಿಲ್ಲ. ಅದಕ್ಕಾಗಿ ಲಕ್ಷ್ಮಿ ಮನೆಯಲ್ಲಿ ಹೊಲಿಗೆ ಯಂತ್ರ ಇಟ್ಟುಕೊಂಡಿದ್ದಳು. ಆ ಬೀದಿಯ ಹೆಣ್ಣು ಮಕ್ಕಳು ಲಕ್ಷ್ಮಿಯ ಬಳಿ ತಮ್ಮ ಬಟ್ಟೆಗಳನ್ನು ಹೊಲಿಸುತ್ತಿದ್ದರು. ಲಕ್ಷ್ಮಿಯ ಕಂಠ ಬಲು ಸೊಗಸಾಗಿತ್ತು. ಸಮಯ ದೊರೆತಾಗಲೆಲ್ಲಾ ಭಾವಗೀತೆ, ಭಕ್ತಿಗೀತೆ ಹಾಡುತ್ತಿದ್ದರು.

ಭಾನುವಾರ ಬೆಳಿಗ್ಗೆ ಹೋದರೆ ಊಟ ಮುಗಿಸಿಕೊಂಡೇ ಸಂಜೆಯ ವೇಳೆಗೆ ಹಾಸ್ಟೆಲ್‌ಗೆ ಹಿಂದಿರುಗುತ್ತಿದ್ದೆ.

''ಇವತ್ತೇನು ಔತಣ....'' ಎಂದು ವೋರಾ ಹಾಸ್ಯ ಮಾಡುತ್ತಿದ್ದ. ಹಾಸ್ಟೆಲ್‌ನಲ್ಲಿ ಒಟ್ಟು ಐವತ್ತು ಜನ. ಹೆಚ್ಚು ಮಂದಿ ಗುಜರಾತಿಗಳು. ಇಬ್ಬರು ಮರಾಠಿಗರು. ಒಬ್ಬ ಸರ್ದಾರ್ಜಿ. ನಾನೊಬ್ಬನೇ ಕನ್ನಡದವನು. ಹಾಸ್ಟೆಲ್ ಜೊತೆಗಾರರಲ್ಲಿ ನಮ್ಮ ಪಕ್ಕದ ಕೋಣೆಯಲ್ಲಿದ್ದ ಸರ್ದಾರ್ಜಿ ಬಹಳ ವಿಚಿತ್ರ ಮನುಷ್ಯ. ಅವನ ಹೆಸರೂ ವಿಚಿತ್ರವಾಗಿತ್ತು ಚಂಚಲ್‌ಪಾಲಸಿಂಗ್. ಅವನು ಹಾಸ್ಟೇಲಿನ ಹುಡುಗರನ್ನೆಲ್ಲಾ ಹೆದರಿಸಿಕೊಂಡಿದ್ದ. ಕಾಲೇಜ್ ಯೂನಿಯನ್ನಿನ ಎಲೆಕ್ಷನ್‌ಗೆ ನಿಂತು ಹೋದ ವರ್ಷ ಆರಿಸಿ ಬಂದಿದ್ದ.

ಒಂದೆರಡು ವಾರದಲ್ಲೇ ಇವನನ್ನು ಸಹಿಸುವದು ನನಗೆ ಕಷ್ಟಕ್ಕೆ ಬಂತು. ಹೊತ್ತು ಗೊತ್ತು ಇಲ್ಲದೆ ಯಾವಾಗಲೆಂದರೆ ಆವಾಗ ಸರ್ದಾರ್ಜಿ ನಮ್ಮ ಕೋಣೆಗೆ ನುಗ್ಗಿ ಎರಡು ಕುರ್ಚಿಬೇಕು, ಟೇಬಲ್ ಬೇಕು ಎಂದು ಹಿಂಬಾಲಕರಿಂದ ಎತ್ತಿಸಿಕೊಂಡು ಹೋಗುತ್ತಿದ್ದ. ಪಕ್ಕದ ಕೋಣೆಯಲ್ಲಿ ರಾತ್ರಿಯೆಲ್ಲಾ ಕಾರ್ಡ್ಸ್ ಆಡುತ್ತಿದ್ದರು. ಕೆಲವು ಸಾರಿ ರಾತ್ರಿ ಹನ್ನೊಂದು ಹನ್ನೆರಡರ ಮೇಲೆ ಸರ್ದಾರ್ಜಿ ಯಾರಾದರೂ ಹುಡುಗಿಯರನ್ನು ಕರೆ ತಂದು ರೂಮಿಗೆ ಸೇರಿಸಿಕೊಳ್ಳುತ್ತಿದ್ದ.

ನಾನು–ವೋರಾ ಹಾಸ್ಟೆಲ್ ಕಾರ್ಯದರ್ಶಿಯವರನ್ನು ಕಂಡು ಸರ್ದಾರ್ಜಿ ವಿಷಯ ಹೇಳಿ, ''ಅವನ ತೊಂದರೆ ತಪ್ಪಿಸಿ'' ಎಂದು ಕೇಳಿಕೊಂಡವು. ಅದಕ್ಕವರು ''ಅವನಿಗೆ ದೊಡ್ಡವರ ಬೆಂಬಲವಿದೆ ನೀವೇ ಸುಧಾರಿಸಿಕೊಳ್ಳಿ–'' ಎಂದು ನಮಗೆ ಹಿತೋಪದೇಶ ಮಾಡಿದರು.

ಸರ್ದಾರ್ಜಿಗೆ ಬುದ್ಧಿ ಕಲಿಸಬೇಕು ಅಂತ ನಾನು ವೋರಾ ನಿರ್ಧರಿಸಿದೆವು. ಮೂರು ತಿಂಗಳಿಂದ ಅವನ ಜೊತೆ ಹೆಣಗಿ ನಮಗೂ ರೋಸಿ ಹೋಗಿತ್ತು. ಒಂದು ರಾತ್ರಿ ಸರ್ದಾರ್ಜಿಯ ಬಳಗವೆಲ್ಲಾ ಪಕ್ಕದ ಕೋಣೆಯಲ್ಲಿ ಸೇರಿತು. ಸೀಸೆಗಳು ಬಂದಿದ್ದವು. ಮತ್ತು ಏರಿದಂತೆ ಹೊಗರೂ ಏರುತ್ತಿತ್ತು. ಒಬ್ಬ ಕೆಟ್ಟದಾಗಿ ಹಿಂದಿ ಸಿನಿಮಾ ಹಾಡು ಅರಚುವದಕ್ಕೆ ಶುರು ಮಾಡಿದ. ಹಾಸ್ಟಲಿನ ಹುಡುಗರು ಸರ್ದಾರ್ಜಿಗೆ ಅಂಜಿ ಸುಮ್ಮನಿದ್ದರು. ಸರ್ದಾರ್ಜಿಯ ಕೋಣೆಯ ಬಾಗಿಲು ತೆರೆದೇ ಇತ್ತು. ಕೆಲವರಿಗೆ ಬಟ್ಟೆಯ ಅರಿವು ಕೂಡ ಇರಲಿಲ್ಲ. ಒಬ್ಬಿಬ್ಬರಿಗೆ ಚಡ್ಡಿ ಮಾತ್ರ ಇತ್ತು. ಅಸಹ್ಯವಾಗಿ ಕುಣಿಯುತ್ತಿದ್ದರು.

ನಾನು ಜೋರಾಗಿ ಬಾಗಿಲಿಗೆ ಹೊಡೆದು ''ಸಾಕು ನಿಲ್ಲಿಸಿ ನಿಮ್ಮ ರಂಪ!'' ಎಂದು ಕೂಗಿದೆ. ಇದು ಸರ್ದಾರ್ಜಿ ಮತ್ತು ಅವನ ಗೆಳೆಯರಿಗೆ ತುಂಬ ಅನಿರೀಕ್ಷಿತವಾಗಿತ್ತು. ಒಂದು ಕ್ಷಣ ಅವರು ಅಪ್ರತಿಭರಾದರು. ಸರ್ದಾರ್ಜಿ ಹಲ್ಲು ಕಡಿದ. ನನ್ನನ್ನೇ ದುರುಗುಟ್ಟ ನೋಡುತ್ತಿದ್ದ. ಅಷ್ಟೊತ್ತಿಗೆ ಬೇರೆ ಕೋಣೆಗಳ ನಾಲ್ಕಾರು ಜನ ಹುಡುಗರು ಬಂದು ಸೇರಿದರು. ಸರ್ದಾರ್ಜಿ ತನ್ನ ಸೊಂಟದಲ್ಲಿದ್ದ ಮೋಟುಕತ್ತಿಯನ್ನು ಕಿತ್ತು ಗಾಳಿಯಲ್ಲಿ ಆಡಿಸುತ್ತ ''ಇದೇನು ಗೊತ್ತಾ?'' ಎಂದ. ನಾನು ಧೈರ್ಯ ಮಾಡಿ ಒಂದೇ ನೆಗೆತಕ್ಕೆ ಜಿಗಿದು ಅವನ ಕೈಯಲ್ಲಿಯ ಕತ್ತಿ ಕಿತ್ತುಕೊಂಡು, ಆ ವೇಳೆಗೆ ಹಿಂದೆ ನಿಂತಿದ್ದ ವೋರಾನ ಕೈಗೆ ಕೊಟ್ಟೆ.

ನಾನು ವೋರಾ ತಂದಿದ್ದ ಬಕೇಟು ತಗೊಂಡು ಅದರಲ್ಲಿದ್ದ ತಣ್ಣೀರು ಸರ್ದಾರ್ಜಿ ತಲೆಯ ಮೇಲೆ ಸುರಿದೆ. ಸರ್ದಾರ್ಜಿ ನನ್ನನ್ನು ತಳ್ಳಿ ಬಿರುಗಾಳಿಯಂತೆ ಹೊರಟು ಹೋದ.

ಸರ್ದಾರ್ಜಿ ಮತ್ತು ನನ್ನ ಘರ್ಷಣೆಯ ವಿಷಯ ಹಾಸ್ಟೆಲ್ಲಿನ ಕಾರ್ಯದರ್ಶಿಗಳಿಗೆ ಹೇಗೋ ತಿಳಿಯಿತು. ಅವರಿಂದ ಪ್ರೆಸಿಡೆಂಟ್‌ಗೆ ಸುದ್ದಿ ಮುಟ್ಟಿತು. ಸರ್ದಾರ್ಜಿಯನ್ನು, ಹಾಸ್ಟೆಲ್‌ನಿಂದ ಓಡಿಸುವದಕ್ಕೆ ಒಂದು ಒಳ್ಳೆಯ ಕಾರಣಕ್ಕಾಗಿ ಅವರು ಕಾಯುತ್ತಿದ್ದರು. ಪ್ರೆಸಿಡೆಂಟ್ ನನಗೆ, ವೋರಾಗೆ ಹೇಳಿ ಕಳಿಸಿದರು. ನಾವು ಹೋಗಿ ಪ್ರೆಸಿಡೆಂಟ್‌ರನ್ನು ನೋಡಿದಾಗ ನನ್ನ ಬೆನ್ನು ಚಪ್ಪರಿಸಿ ''ನೀನು ಒಳ್ಳೇ ಕೆಲ್ಸ ಮಾಡಿದೆ. ಅವನನ್ನು ಹಾಸ್ಟೆಲ್‌ನಿಂದ ಓಡಿಸ್ತೀನಿ. ಆದ್ರೆ....'' ಎಂದು ತಡೆದರು.

"ಏನು ಹೇಳಿ ಪರವಾಗಿಲ್ಲ" ಎಂದೆ.

"ಅವನೊಬ್ಬನ್ನೇ ತೆಗೆಯೋದು ಕಷ್ಟ. ಜಗಳ ಮಾಡಿದೋರು ಅಂತ ಅವನ ಜೊತೆ ನಿನ್ನನ್ನೂ ತೆಗೆಯಬೇಕಾಗುತ್ತೆ. ನೀನು ಯೋಚ್ನೆ ಮಾಡ್ಬೇಡ. ನಿನಗೆ ಬೇರೆ ಕಡೆ ಅನ್ಕೂಲ ಮಾಡಿಕೊಡ್ತೀನಿ. ನನ್ನ ಸ್ನೇಹಿತರೊಬ್ಬರು ಮೈಸೂರಿನವರು ಸಲಾಬತ್‌ಪುರದಲ್ಲಿ ಇದಾರೆ. ನಿನಗೆ ಎಲ್ಲ ಅನುಕೂಲ ಅವರು ಮಾಡಿಕೊಡ್ತಾರೆ. ಏನೂ ಯೋಚ್ನೆ ಮಾಡ್ಬೇಡ."

ಹೀಗೆ ನನಗೂ ಹಾಸ್ಟೆಲ್‌ಗೂ ಋಣ ಹರಿಯಿತು. ವೋರಾ ಮಾತ್ರ ಹಾಸ್ಟೆಲ್‌ನಲ್ಲೇ ಮುಂದುವರೆಯಲು ನಿರ್ಧರಿಸಿದ.

ಸಂಜೆ ಐದರ ವೇಳೆಗೆ ನಾನು ಸಲಾಬತ್‌ಪುರಕ್ಕೆ ಹೋದೆ. ಮೂರನೇ ಕ್ರಾಸಿನ ಮೂರನೇ ಮನೆಯೇ ವೆಂಕಟರಾಮಯ್ಯನವರದು. ಗೇಟಿನ ಬಳಿ ಇಬ್ಬರು ಹುಡುಗಿಯರು ಮಾತಾಡುತ್ತಾ ನಿಂತಿದ್ದರು. ಲಕ್ಷಣವಾಗಿದ್ದಾರೆ ಅನ್ನಿಸಿತು. ಗೇಟ್ ಬಳಿ ಹೋಗಿ–

"ವೆಂಕಟರಾಮಯ್ಯ ಇದ್ದಾರಾ?" ಎಂದು ಇಂಗ್ಲೀಷಿನಲ್ಲಿ ಕೇಳಿದೆ. ಹುಡುಗಿಯರು ಪರಸ್ಪರ ಮುಖ ನೋಡಿಕೊಂಡು ನಕ್ಕರು. ಚಿಕ್ಕವಳು "ನಿಮಗೆ ಕನ್ನಡ ಬರುತ್ತಾ?" ಅಂತ ಕೇಳಿದಳು.

ಪ್ರೆಸಿಡೆಂಟ್ ಈ ದಿನ ನಾನು ಬರಬಹುದೆಂದು ವೆಂಕಟರಾಮಯ್ಯನವರಿಗೆ ಫೋನು ಮಾಡಿದ್ದರು. ನನ್ನನ್ನು ನೋಡಿದವರೇ ನಾನೇ ಆ ಕನ್ನಡದವನಿರಬಹುದೆಂದು ಈ ಚಾಣಾಕ್ಷೆಯರು ಗುರುತಿಸಿದ್ದರು.

"ತಂದೆ ಸೊಸೈಟಿಗೆ ಹೋಗಿದ್ದಾರೆ. ನೀವು ಬಂದರೆ ಕೂಡುವದಕ್ಕೆ ಹೇಳಿದ್ದಾರೆ" ಎಂದು ದೊಡ್ಡವಳು ಹೇಳಿದಳು.

ತಂದೆ ಬರುವವರೆಗೂ ಹುಡುಗಿಯರು ವರಾಂಡದಲ್ಲಿ ನನ್ನೊಂದಿಗೆ ಮಾತಾಡುತ್ತಾ ಕೂತಿದ್ದರು. ತಾಯಿ ದೇವಸ್ಥಾನಕ್ಕೆ ಹೋಗಿದ್ದರು. ಹೊಸಬ, ಅಪರಿಚಿತ ಎಂಬ ಸಂಕೋಚ ಈ ಹುಡುಗಿಯರಿಗಿಲ್ಲ. ಸೂರತ್ತಿಗೆ ಬಂದಾಗಿನಿಂದಲೂ ನೋಡುತ್ತಿದ್ದೇನೆ. ಇಲ್ಲಿ ಪ್ರಾಯದ ಹುಡುಗಿಯರು ಹುಡುಗರೊಂದಿಗೆ ಸಲೀಸು ಬೆರೆಯುತ್ತಿದ್ದರು.

ವೆಂಕಟರಾಮಯ್ಯನವರ ದೊಡ್ಡ ಮಗಳು ಪ್ರೀತಿ. ಸುಮಾರು ಇಪ್ಪತ್ತು ವರ್ಷ ಇರಬಹುದು. ಮೊಣಕಾಲ ಮೇಲೆ ಬರುವ ತುಂಡು ಲಂಗ, ಮೇಲೊಂದು ಷರ್ಟ್. ಕೂದಲು ಹೆಣೆಯದೆ ಹರಡಿಕೊಂಡಿದ್ದಳು. ಬಿ.ಎ. ಕೊನೆಯ ವರ್ಷದಲ್ಲಿ ಇದ್ದಾಳಂತೆ.

ಚಿಕ್ಕವಳು ವಿಮಲಾ. ಹೈಸ್ಕೂಲಿಗೆ ಹೋಗುತ್ತಿದ್ದಾಳಂತೆ. ಮಾತು ಹೆಚ್ಚು. ಸ್ವಲ್ಪ ಚೆಲ್ಲು ಚೆಲ್ಲಾಗಿ ಇದ್ದಾಳೆ. ಎಲ್ಲರೂ ಅವಳನ್ನು ನಿಮ್ಮಿ ಎಂದು ಕೂಗುತ್ತಾರಂತೆ.

"ಓಹೋ ನೀವು...." ಎಂದು ಗಟ್ಟಿಯಾಗಿ ಕೂಗುತ್ತ ವೆಂಕಟರಾಮಯ್ಯ ಬಂದರು. ನಾನು ಎದ್ದು "ಹೌದು, ರಾಜಪೂತ್ ಹಾಸ್ಟೆಲ್ ಪ್ರೆಸಿಡೆಂಟ್ ಕಳಿಸಿದರು," ಎಂದೆ.

"ಕೂತ್ಕೊಳ್ಳಿ, ಕೂತ್ಕೊಳ್ಳಿ" ಎಂದು ವೆಂಕಟರಾಮಯ್ಯ ಉಪಚಾರ ಮಾಡಿ ನನ್ನ ಪರಿಚಯ ಇತ್ಯಾದಿ ಕೇಳಿ ತಿಳಿದುಕೊಂಡರು. ನನ್ನ ಊಟ ವಸತಿಗೆ ಏನಾದರೂ ವ್ಯವಸ್ಥೆ ಮಾಡಬೇಕೆಂದು ಪ್ರಾರ್ಥಿಸಿಕೊಂಡೆ. ಅಷ್ಟರಲ್ಲಿ ಪ್ರೀತಿ ಕಾಫಿ ತಂದಳು.

"ಅದೆಲ್ಲಾ ಆಗುತ್ತೆ. ನೀವು ಮೊದಲು ಕಾಫಿ ತಗೊಳ್ಳಿ" ಎಂದು ವೆಂಕಟರಾಮಯ್ಯ ಹೇಳಿದರು.

ವೆಂಕಟರಾಮಯ್ಯನವರ ಮನೆಯ ಪಕ್ಕದಲ್ಲಿ ವಚ್ಛೂಬೇನ್ ಎಂಬ ಮುದುಕಿಯ ಮನೆ. ಒಂಟಿ ಜೀವ. ಅಂತಸ್ತಿಲ್ಲದ ಬೋಳು ಮನೆ ಮಾತ್ರ. ಮನೆಯ ಹೊರಗಿನ ಒಂದು ಕೋಣೆಯನ್ನು ವಚ್ಛೂಬೇನ್ ಆಂಧ್ರದ ಕಡೆಯ ಒಬ್ಬರಿಗೆ ಬಾಡಿಗೆಗೆ ಕೊಟ್ಟಿದ್ದಳು. ಆ ವ್ಯಕ್ತಿ ತಿಂಗಳಿಗಷ್ಟು ಹಣ ಕೊಡುತ್ತಾ ವಚ್ಛೂಬೇನ್ ಮನೆಯಲ್ಲೇ ಊಟ ಮಾಡುತ್ತಿದ್ದ. ಇಂಥವರೇ ಇನ್ನೊಬ್ಬರು ಊಟಕ್ಕೆ ಸಿಕ್ಕರೆ ಅನುಕೂಲವಾಗುತ್ತೆ ಎಂದು ವಚ್ಛೂಬೇನ್ ವೆಂಕಟರಾಮಯ್ಯನವರಿಗೆ ಹೇಳಿದ್ದಳಂತೆ. ತಿಂಗಳಿಗೆ ಅರವತ್ತು ರೂ. ಕೊಟ್ಟು ನಿಶ್ಚಿಂತೆಯಿಂದ ಊಟ ಮಾಡಬಹುದೆಂದು ಹೇಳಿದರು. ಇದಕ್ಕೆ ನನ್ನ ಒಪ್ಪಿಗೆ ಸೂಚಿಸಿದೆ.

ಪ್ರೀತಿ ಹೋಗಿ ವಚ್ಛೂಬೇನ್‌ಳನ್ನು ಕರೆದುಕೊಂಡು ಬಂದಳು. ಸ್ಥೂಲ ಶರೀರದ ಮುದುಕಿ. ವೆಂಕಟರಾಮಯ್ಯ ನನ್ನ ಪರಿಚಯ ಮಾಡಿಕೊಟ್ಟರು. ವಚ್ಛೂಬೇನ್ ಸಂತೋಷದಿಂದ ನನ್ನ ದತ್ತು ಸ್ವೀಕಾರ ಮಾಡಿದಳು. ಇನ್ನು

ಉಳಿದದ್ದು ವಸತಿ ಸಮಸ್ಯೆ.

ವೆಂಕಟರಾಮಯ್ಯನವರ ಮನೆಯಲ್ಲಿ ಇದ್ದವರು ನಾಲ್ವರು. ಅವರ ಮಹಡಿಯ ಮೇಲೆ ಎರಡು ಕೋಣೆ, ಒಂದು ಹಜಾರ ಎಲ್ಲಾ ಇದ್ದವು. ಒಂದು ಕೋಣೆಯಲ್ಲಿ ಉಪಾಧ್ಯಾಯಿನಿಯಾಗಿ ಕೆಲಸ ಮಾಡುತ್ತಿದ್ದ ಗುಜರಾತಿ ಹೆಣ್ಣುಮಗಳು ಬಾಡಿಗೆಗೆ ಇದ್ದಳು.

''ಇಪ್ಪತ್ತೊ ಮೂವತ್ತೋ ಕೊಡ್ತಾ ಇದ್ದಾರೆ. ಮೂರು ವರ್ಷವಾಯಿತು. ಪಕ್ಕದ ಕೋಣೆಯಲ್ಲಿ ಯತಿರಾಜನ್ ಅಂತ ತಮಿಳಿನವರೊಬ್ಬರು ಇದ್ದರು. ಹೋದ ತಿಂಗಳು ಬೇರೆ ಮನೆ ಮಾಡಿ, ಹೆಂಡತಿ ಮಕ್ಕಳನ್ನು ಕರೆ ತಂದಿದ್ದಾರೆ. ಈಗ ಆ ಕೋಣೆ ಖಾಲಿ ಇದೆ. ನಿಮಗೆ ಒಪ್ಪಿಗೆಯಾದರೆ ಅಲ್ಲೇ ಇರಬಹುದು," ಎಂದು ವೆಂಕಟರಾಮಯ್ಯ ಹೇಳಿದರು. ವಿಮ್ಮಿ ಬಂದಳು. ಕೋಣೆ ನೋಡಲಿಕ್ಕೆ ಅವಳೊಂದಿಗೆ ಮೇಲೆ ಹೋದೆ. ನಾವು ಕೋಣೆಯ ಬಳಿ ಹೋದಾಗ ಒಂದು ಬಾಗಿಲು ಮುಚ್ಚಿದ ಮೊದಲ ಕೋಣೆಯಲ್ಲಿ ಒಬ್ಬಳು ತರುಣ' ಮಂಚದ ಮೇಲೆ ಕುಳಿತು ಏನೋ ಓದುತ್ತಿದ್ದಳು. ನಮ್ಮನ್ನು ನೋಡಿ ಬಾಗಿಲು ಮುಂದೆ ಮಾಡಿಕೊಂಡಳು. ವಿಮ್ಮಿ ಎರಡನೇ ಕೋಣೆಗೆ ನನ್ನನ್ನು ಕರೆದುಕೊಂಡು ಹೋಗಿ ಕಿಟಕಿಗಳನ್ನು ತೆರೆದು 'ಒಪ್ಪಿಗೆಯೇ' ಎನ್ನುವಂತೆ ನನ್ನ ಮುಖ ನೋಡುತ್ತಾ ನಿಂತಳು. ಎಲ್ಲಿಯೂ ಬಾತ್ ರೂಂ ಕಾಣಲಿಲ್ಲ.

''ಈ ಕೋಣೆಯಲ್ಲಿದ್ದ ಯತಿರಾಜನ್ ಸ್ನಾನಕ್ಕೆ ಏನ್ಮಾಡ್ತಿದ್ರು?"

''ನಮ್ಮಲ್ಲಿ ಬಾತ್ ರೂಂ ಇದೆಯಲ್ಲಾ" ವಿಮ್ಮಿ ಹೇಳಿದಳು.

ವೆಂಕಟರಾಮಯ್ಯನವರ ಮನೆ ಬಹಳ ಬೇಗ ಒಗ್ಗಿ ಹೋಯಿತು. ಮನೆಯ ಯಜಮಾನಿ ಗೃಹಲಕ್ಷ್ಮಿಯೇ. ಅವರನ್ನು ನೋಡಿದರೆ ಅಮ್ಮನನ್ನು ನೋಡಿದ ಹಾಗಾಗುತ್ತಿತ್ತು. ನಾನು ಅವರಿಗೆ ಪ್ರೀತಿ, ವಿಮ್ಮಿಯರಂತೆ ''ಅಮ್ಮ" ಎನ್ನತೊಡಗಿದೆ. ಮನೆಯಲ್ಲಿ ಏನೇ ವಿಶೇಷ ತಿಂಡಿ ಮಾಡಲಿ, ವಿಮ್ಮಿಯೊಂದಿಗೆ ಕಳಿಸಿಕೊಡುತ್ತಿದ್ದರು.

ನನ್ನ ಪಕ್ಕದ ಕೋಣೆಯಲ್ಲಿದ್ದ ಇಳಾಬೇನ್ ಬಹಳ ದೊಡ್ಡ ಮನಸ್ಸಿನ ಹೆಣ್ಣು. ಹೆಚ್ಚಾಗಿ ಇಂಗ್ಲೀಷ್, ಹಿಂದಿ ಓದುತ್ತಿದ್ದರು. ಅರವಿಂದರ ಸಾಹಿತ್ಯವೆಂದರೆ ಆಕೆಗೆ ಹುಚ್ಚು. ಆಗಾಗ ನನಗೆ ಅರವಿಂದರ ಪುಸ್ತಕಗಳ ಬಗ್ಗೆ ಹೇಳುತ್ತಿದ್ದಳು. ನಾನೂ ಪುರಸೊತ್ತಿದ್ದಾಗ ಆಕೆಯ ಕೋಣೆಗೆ ಹೋಗುತ್ತಿದ್ದೆ. ಮೊದಮೊದಲು ಹಾಗೆ ಹೋದಾಗಲೆಲ್ಲ ಸಾಹಿತ್ಯ, ತತ್ವಜ್ಞಾನ ಕುರಿತು ಮಾತಾಡುತ್ತಿದ್ದೆವು.

ತತ್ವಜ್ಞಾನದಲ್ಲಿ ನನಗಿಂತ ಹೆಚ್ಚು ಆಸಕ್ತಿ ಇದ್ದವರು ವಚ್ಛೂಬೇನ್‌ಳ ಮನೆಯಲ್ಲಿದ್ದ, ಈಗ ನನ್ನೊಂದಿಗೆ ಊಟದ ಜೊತೆಗಾರನಾಗಿದ್ದ ಆಂಧ್ರದ ಪಾಸ್ಕಲ್ ರಾವ್. ಅವನಿಗೆ ಮೂವತ್ತಕ್ಕೆ ಮೀರಿ ವಯಸ್ಸಾಗಿತ್ತು. ಅವನನ್ನು ಒಮ್ಮೆ ನೋಡಿದರೆ ಮರೆಯುವದು ಸಾಧ್ಯವಿಲ್ಲ–ಅಂಥ ವಿಲಕ್ಷಣ ರೂಪು, ಕಪ್ಪು ಬಣ್ಣ, ಕುಳ್ಳ ಆಸಾಮಿ.

ಪಾಸ್ಕಲ್‌ರಾವ್ ನಿತ್ಯ ನಮ್ಮ ಮಹಡಿಗೆ ಬರುತ್ತಿದ್ದ. ಸಭ್ಯ ನಾಗರಿಕ ವ್ಯಕ್ತಿ. ಸಂಜೆ ೮ ರಿಂದ ೯ರ ವರೆಗೆ ಇಳಾಬೇನ್ ಭಜನೆ ಮಾಡುತ್ತಿದ್ದರು. ಬೇಜಾರಾದಾಗ ನಾನೂ ಭಜನೆಗೆ ಹೋಗುತ್ತಿದ್ದೆ. ನಮ್ಮ ಮನೆಯ ಯಜಮಾನರು ತುಂಬಾ ಆಸಕ್ತರು. ಸಾಯಿಬಾಬಾನ ಖಾಸಾ ಭಕ್ತರು. ಥಾಳಾಗಿ ಹುಬ್ಬಿನ ನಡುವೆ ಕುಂಕುಮ ಧರಿಸಿ ಆಗಾಗ ಅವರೂ ಭಜನೆಗೆ ಬರುತ್ತಿದ್ದರು. ವಿಮ್ಮಿಯಂತೂ ಭಜನೆಗೆ ನಿತ್ಯದ ಗಿರಾಕಿ. ಒಂದು ಸಮಯ ವಿಮ್ಮಿ ತಪ್ಪಿಸಿಕೊಂಡರೂ ಪಾಸ್ಕಲ್‌ರಾವ್ ತಪ್ಪಿಸಿಕೊಂಡದ್ದನ್ನು ನಾನು ಎಂದೂ ಕಾಣೆ.

ಈ ದಿನಗಳಲ್ಲಿ ವೋರಾ ಒಮ್ಮೆ ನನ್ನ ಕೋಣೆಗೆ ಬಂದ. ಅವನು ಬಂದಾಗ ಇಳಾಬೇನ್ ನನ್ನ ಕೋಣೆಯಲ್ಲಿ ನಾನು ಹೊಸದಾಗಿ ಕೊಂಡು ತಂದಿದ್ದ ಈಸಿ ಛೇರಿನಲ್ಲಿ ಕಾಲು ಮಡಿಸಿ ಕೂತಿದ್ದಳು. ನಾನು ಹಗ್ಗ ಹೆಣೆದ ಮಂಚದಲ್ಲಿ ಕೂತಿದ್ದೆ. ಇಳಾಬೇನ್ ಅರವಿಂದರ 'ಸಾವಿತ್ರಿ'ಯ ಬಗ್ಗೆ ಏನೋ ಹೇಳುತ್ತಿದ್ದಳು. ವೋರಾಗೆ ಇಳಾಬೇನ್ ಪರಿಚಯ ಮಾಡಿಸಿದೆ. ಸೌಜನ್ಯಕ್ಕೆ ಎರಡು ಮಾತಾಡಿ ಇಳಾಬೇನ್ ತನ್ನ ಕೋಣೆಗೆ ಹಿಂದಿರುಗಿದಳು. ಆಕೆ ಹೋದ ಮೇಲೆ ವೋರಾ ಬಾಗಿಲು ಮುಂದೆ ಮಾಡಿ,

''ಅಬ್ಬಾ ಎಂಥ ಹೆಂಗಸು! ಈಕೆ...." ಎಂದ ಕಣ್ಣರಳಿಸಿದ.

''ಏಕೆ?" ಎಂದೆ.

“ನಾನು ಬೇಕಾದಷ್ಟು ಚೆಲುವೆಯರನ್ನು ನೋಡಿದ್ದೇನೆ. ಕೆಲವರಿಗೆ ಮೈಕಟ್ಟಿರುತ್ತದೆ. ರೂಪ ಇರೋದಿಲ್ಲ. ಕೆಲವರಿಗೆ ರೂಪ ಇರುತ್ತೆ: ಮೈ ಕಟ್ಟಿರೋದಿಲ್ಲ. ಈಕೆ ನಿಜವಾಗ್ಲೂ ಹೆಣ್ಣು. ನಿಮಗೆ ಹೇಗೆ ಇಷ್ಟು ಬೇಗ! ಅರವಿಂದರ ಹುಚ್ಚು ಹಿಡೀತು ಅಂದ್ಕೊಂಡೆ. ನಾಕು ದಿನ ನಿಮ್ಮ ರೂಮಲ್ಲಿ ಉಳಿದರೆ ನನಗೂ ಅರವಿಂದರ ಹುಚ್ಚು ಹಿಡಿಯಬಹುದು,” ಎಂದು ಬಂಗಾರದ ಹಲ್ಲು ತೋಳಗಿಸುತ್ತಾ ನಕ್ಕ.

“ಪೋರಾ, ನಿಮಗೆ ಯಾವಾಗಲೂ ತಮಾಷೆ. ಆಕೆ ತುಂಬ ದೊಡ್ಡ ಹೆಣ್ಣು ಮಗಳು” ಎಂದು ನಾನು ಬೇಸರದ ಧ್ವನಿಯಲ್ಲಿ ಹೇಳಿದೆ.

“ಸಾರಿ, ಬೇಜಾರು ಮಾಡ್ಕೋಬೇಡಿ. ಸುಮ್ನೆ ತಮಾಷೆಗೆ ಹೇಳಿದೆ,” ಎಂದ. ಅವತ್ತಿನಿಂದ ಇಳಾಬೇನ್ ಜೊತೆ ಮೊದಲಿನಷ್ಟು ಫ್ರೀಯಾಗಿ ಮಾತಾಡೋದು ನನಗೆ ಸಾಧ್ಯವಾಗ್ತಿಲ್ಲ.

ವೆಂಕಟರಾಮಯ್ಯನವರ ಮನೆಗೆ ವಾರಕ್ಕೊಮ್ಮೆಯಾದರೂ ಭೆಟ್ಟಿ ಕೊಡುತ್ತಿದ್ದ ಇನ್ನೊಬ್ಬ ವ್ಯಕ್ತಿ ಯತಿರಾಜನ್. ಆತ ಬರುವಾಗೆಲ್ಲಾ ತನ್ನ ಹೆಂಡತಿ ಸಾವಿತ್ರಿ ಮತ್ತು ಮಕ್ಕಳನ್ನು ಕರೆದುಕೊಂಡು ಬರುತ್ತಿದ್ದ. ಸಾಮಾನ್ಯವಾಗಿ ಭಾನುವಾರ ಈ ತಮಿಳು ಸಂಸಾರ ಆಗಮಿಸುತ್ತಿತ್ತು.

ಕೆಲವು ಬಾರಿ ಯತಿರಾಜನ್ ಒಬ್ಬನೇ ತನ್ನ ಕರಿ ಸ್ಕೂಟರ್ ಗುಡುಗುಡಿಸುತ್ತಾ ಬರುತ್ತಿದ್ದ. ಪ್ರೀತಿಯನ್ನೋ ವಿಮ್ಮಿಯನ್ನೋ ಹಿಂದೆ ಕೂರಿಸಿಕೊಂಡು ಮನೆಗೆ ಕರೆದುಕೊಂಡು ಹೋಗುತ್ತಿದ್ದ. ಪುನಃ ರಾತ್ರಿ ಊಟದ ನಂತರ ಮನೆಗೆ ಕರೆತಂದು ಬಿಟ್ಟು ಹೋಗುತ್ತಿದ್ದ. ಪ್ರೀತಿಗೆ ವಯಸ್ಸಾಗಿದೆ, ಯತಿರಾಜನ್ ಜೊತೆ ಇಷ್ಟು ಸಲುಗೆಯಿಂದ ಇರುವದರ ಬಗ್ಗೆ ತಾಯಿ-ತಂದೆ ಕಿಂಚಿತ್ತೂ ಯೋಚಿಸುವದಿಲ್ಲವಲ್ಲಾ ಎಂದು ನನಗೆ ಆಶ್ಚರ್ಯವಾಗುತ್ತಿತ್ತು.



“ಈ ಬಂಗ್ಲೆ ಶಾಲಾಭಿವೃದ್ಧಿ ಸಮಿತಿಯ ಅಧ್ಯಕ್ಷರದ್ದು.
ಅಲ್ಲಿ ಕಾಣ್ತೀರೋದು ಶಾಲೆ!”

ಯತಿರಾಜನ್ ನೋಡಿದರೆ ಮಹಾ ಧೂರ್ತನ ಹಾಗೆ ಕಾಣುತ್ತಿದ್ದ.



ಒಂದು ದಿನ ಕಾಲೇಜಿನ ಬಳಿ ಫೋರಾ ನಾನು ಮಾತಾಡುತ್ತ ಕೂತಿದ್ದೆವು.

"ನನಗೆ ಬಹಳ ಬೇಜಾರಾಗಿದೆ. ಚೌಪಾತಿಗೆ ಹೋಗೋಣವೇ?" ಎಂದೆ.

"ಆಯಿತು ನಡೆಯಿರಿ" ಎಂದು ಫೋರಾ ಹೇಳಿದ. ರಿಕ್ಷಾ ಹಿಡಿದು ಇಬ್ಬರೂ ಚೌಪಾತಿಗೆ ಹೋದೆವು. ನದಿಗೆ ಹೊಂದಿದ ತಂತಿ ಬೇಲಿಯ ಪಕ್ಕದ ಕಲ್ಲು ಬೆಂಚಿನ ಮೇಲೆ ಇಬ್ಬರೂ ಕೂತೆವು.

ಸ್ವಲ್ಪ ಹೊತ್ತಾದ ನಂತರ ನಾನು ಫೋರಾಗೆ ಪ್ರೀತಿ ಮತ್ತು ಯತಿರಾಜನ್ ವಿಷಯ ಹೇಳಿದೆ. ಫೋರಾ ಸೀರಿಯಸ್ ಆಗಿ ಕೆಳಗಿನ ಪ್ರಶ್ನೆಗಳನ್ನು ಕೇಳತೊಡಗಿದ.

"ಪ್ರೀತಿ ಹೇಗಿದ್ದಾಳೆ?"

"ಚನ್ನಾಗಿದ್ದಾಳೆ"

"ಅಂದರೆ....?"

"ಲಕ್ಷಣವಾಗಿದ್ದಾಳೆ."

"ವಯಸ್ಸು?"

"ಹತ್ತೊಂಬತ್ತು ಇರಬಹುದು."

"ನೀವು ಅವಳನ್ನು ಪ್ರೀತಿಸ್ತಿದ್ದೀರಾ?" ಫೋರಾ ಕೇಳಿದ. ನಾನು ಎರಡು ನಿಮಿಷ ತೆಪ್ಪಗೆ ಕೂತಿದ್ದೆ. ಆ ಮೇಲೆ "ನಿಮ್ಮ ಊಹೆ ಬಹಳ ಸೊಗಸಾಗಿದೆ," ಎಂದು ನಕ್ಕುಬಿಟ್ಟೆ.

ಪ್ರೀತಿಯ ತಾಯಿ ಆಗಾಗ ಪ್ರಸ್ತಾಪಿಸುತ್ತಿದ್ದ, ಅವರ ತಮ್ಮ ಇಂಡಿಯಾನಾ ಯೂನಿವರ್ಸಿಟಿಯ ಪ್ರೊಫೆಸರ್ ನೆನಪಾಯಿತು ನನಗೆ. ಪ್ರೀತಿಯನ್ನು ತಮ್ಮನಿಗೆ ಕೊಡಬೇಕೆಂಬ ಉತ್ಸಾಹ ತಾಯಿಗೆ. ಒಮ್ಮೆ ಪ್ರೀತಿಯ ಎದುರೇ ಅಮ್ಮ ನನ್ನೆದುರು ಆ ಪ್ರಸ್ತಾಪ ಮಾಡಿದ್ದರು. ಆಗ ಪ್ರೀತಿ ಅದೇಕೆ ಹಾಗೆ ಸಿಡುಕಿದಳು? ಅವಳ ಆ ಸಿಡುಕು ನನಗೆ ಅದೆಷ್ಟು ಪ್ರಿಯವಾಯಿತಲ್ಲ! ಈ ವಿಷಯ ಫೋರಾಗೆ ಹೇಳೋದು ಮಾತ್ರ ಏಕೊ ನನಗೆ ಸಾಧ್ಯವಾಗ್ತಿಲ್ಲ.



ಒಂದು ದಿನ ಡ್ರಾಯಿಂಗ್ ಕ್ಲಾಸಿನಲ್ಲಿ ಓಗ್ಲೆ ಸೀರಿಯಸ್ಸಾಗಿ ಬೋರ್ಡಿನ ಮೇಲೆ ಏನೋ ಬರೆಯುತ್ತಾ ವಿವರಿಸುತ್ತಿದ್ದರು. ಬಿ.ಎಸ್ಸಿ. ಮುಗಿಸಿ ಬಂದ ನನಗೆ ಡ್ರಾಯಿಂಗ್ ಜೀರೋ ಆಗಿತ್ತು. ನನ್ನ ಪಕ್ಕದಲ್ಲಿದ್ದ ಫೋರಾ,

"ಈ ದಿನ ನೀವು ಬರೋಕೆ ಮುಂಚೆ ಬೆಟ್ಟಪ್ಪ ನಿಮ್ಮನ್ನ ಕೇಳಿಕೊಂಡು ಬಂದಿದ್ರು" ಎಂದು ಪಿಸುಗುಟ್ಟಿದ.

"ಯಾಕಂತೆ?" ನಾನೂ ಬಾಯಿಗೆ ಪುಸ್ತಕ ಅಡ್ಡ ಹಿಡಿದು ಕೇಳಿದೆ.

"ನಾಳೆ ಅವರ ಚಿಕ್ಕ ಮಗಳ ಹುಟ್ಟು ಹಬ್ಬವಂತೆ. ತಪ್ಪದೆ ಹೋಗಬೇಕಂತೆ. ಬಹಳ ಹೊತ್ತು ಕಾಯುತ್ತಿದ್ದರು. ಕೊನೆಗೆ ನಾನು ನಿಮ್ಮನ್ನು ಕಳಿಸುವ ಜವಾಬ್ದಾರಿ ತಗೊಂಡ ಮೇಲೆ ಹೋದ್ರು," ಎಂದ.

ಪದಿನೈದು ರೂ. ಕೊಟ್ಟು ಪಾರ್ವತಿಗಾಗಿ ಪದಕ ಇರುವ ಸುಂದರವಾದ ಮುತ್ತಿನ ಹಾರ ಕೊಂಡೆ.

ನಾನು ಬೆಟ್ಟಪ್ಪನ ಮನೆಗೆ ಹೋದಾಗ ಗಂಟೆ ಐದು. ಲಕ್ಷ್ಮಿ ಒಬ್ಬಳೇ ಮಂಚದ ಮೇಲೆ ಮಲಗಿದ್ದಳು. "ಬನ್ನಿ" ಎಂದಳು. ಮಕ್ಕಳು ಆಡಲು ಹೋಗಿದ್ದರು. ಬೆಟ್ಟಪ್ಪ ಮನೆಗೆ ಬರುವ ಸಮಯ ಆಗಿತ್ತು.

"ಏಕೆ ಮಲಗಿದ್ದೀರಿ?" ಎಂದು ಕೇಳಿದೆ.

"ಬೆಳಗಿನಿಂದ ಸ್ವಲ್ಪ ತಲೆ ನೋವು."

"ಜ್ವರ ಇದೆಯಾ?" ಎಂದು ಕೇಳಿದೆ.

"ನೋಡಿ," ಎಂದು ನನ್ನ ಕಡೆ ಕೈ ಚಾಚಿ ಕಣ್ಣು ಮುಚ್ಚಿಕೊಂಡಳು. ಅವಳ ಕೈ ಹಿಡಿದು ನೋಡಿದೆ. ಬಿಸಿಯಾಗಿತ್ತು. ಕಂಪಿಸುತ್ತಿತ್ತು. ಅವಳ ಬೆರಳು ನನ್ನ ಬೆರಳಿಗೆ ಹೆಣೆದುಕೊಂಡವು.

"ಸುಮಾರಾಗಿ ಬಿಸಿ ಇದೆ. ಕೋಡಾಪೈರಿನ್ ತರ್ರೀನಿ. ಅರ್ಧ ಗಂಟೇಲಿ ಕಡಿಮೆಯಾಗುತ್ತೆ," ಎಂದು ಹೊರಗೆ ಬಂದೆ.

ಮಾತ್ರೆ ತೆಗೆದುಕೊಂಡು ಮರಳುವಾಗ ನನಗೆ ಕೆಲವು ಕೆಟ್ಟ ಯೋಚನೆಗಳು ಬರುತ್ತಿದ್ದವು. ಬಲವಂತವಾಗಿ ಅವನ್ನು ಅದುಮಿಟ್ಟೆ. ನನ್ನ ಬಗ್ಗೆ ನನಗೇ ಅಸಹ್ಯ ಅನ್ನಿಸಿತು.

ಬೆಟ್ಟಪ್ಪ ಬಂದಿದ್ದ. ಹುಡುಗರೂ ಬಂದಿದ್ದರು. ಮಾತ್ರೆಯಿಂದ ಲಕ್ಷ್ಮಿಗೆ ಸ್ವಲ್ಪ ಗುಣವಾಯಿತು. ಪಾರ್ವತಿಗೆ ಮುತ್ತಿನ ಹಾರ ಉಡುಗೊರೆ ಕೊಟ್ಟು ಹುಟ್ಟು ಹಬ್ಬದ ಸಿಹಿ ತಿಂಡಿ ತಿಂದು ವಾಪಸಾದೆ.



ನಮ್ಮ ಕಾಲೇಜಿನ ವಾಟರ್ ಟ್ಯಾಂಕ್ ಬಿರುಕು ಬಿಟ್ಟು ನೀರಿನ ಅವ್ಯವಸ್ಥೆ ಶುರುವಾಯಿತು. ಹತ್ತು ಗಂಟೆಯ ವೇಳೆಗೆ ನೀರೆಲ್ಲಾ ದಬದಬ ಸೋರಿ ಹೋಗುತ್ತಿತ್ತು. ಮಧ್ಯಾಹ್ನ ಕಾಲೇಜಿನ ಮೂತ್ರಿಯಲ್ಲಿ ಮೂಗು ಹಾಕುವಂತಿರಲಿಲ್ಲ. ಎರಡು ಮೂರನೇ ಅಂತಸ್ತಿನಲ್ಲಿದ್ದ ನಲ್ಲಿಗಳಲ್ಲಿ ನೀರು ನಿಂತು ವಾರವೇ ಆಯಿತು.

ಒಂದು ದಿನ ನಾನು ವೋರಾ ಕ್ಯಾಂಟೀನ್‌ನಲ್ಲಿ ಇದೇ ಮಾತು ಆಡುತ್ತಿದ್ದಾಗ ಚಂಚಲ್‌ಪಾಲ್ ಬಂದು–

"ಕ್ಷಮಿಸಿ, ನಾನು ನಿಮ್ಮ ಜೊತೆ ಕೂಡಬಹುದೇ?" ಎಂದು ಕೇಳಿದ. ಹಾಸ್ಟೆಲ್‌ನ ಘರ್ಷಣೆಯ ನಂತರ ಚಂಚಲ್‌ಪಾಲ್ ಇದೇ ಮೊದಲು ನಮ್ಮೊಂದಿಗೆ ಮಾತಾಡಿದ್ದು. ಯೂನಿಯನ್ ಇಲೆಕ್ಷನ್ ಸಮೀಪಿಸುತ್ತಿತ್ತು. ಕಾರ್ಯದರ್ಶಿ ಸ್ಥಾನಕ್ಕೆ ನಿಂತಿದ್ದ ಚಂಚಲ್‌ಪಾಲ್ ನಮ್ಮ ಬಳಿ ಕೂಡುತ್ತ–

"ನೀರಿನ ಅವ್ಯವಸ್ಥೆ ನೋಡಿದಿರಾ? ತೊಂದರೆ ವಿದ್ಯಾರ್ಥಿಗಳಿಗೋ ಮೆನೇಜ್‌ಮೆಂಟಗೊ? ಎಷ್ಟು ದಿನ ಅಂತ ನಾವು ಸುಮ್ಮನಿರೋದು!" ಎಂದ.

"ನಾವು ಏನು ಮಾಡಬಹುದು?" ವೋರಾ ಕೇಳಿದ.

"ಸ್ಟ್ರೈಕ್ ಮಾಡೋದೊಂದೇ ಮಾರ್ಗ," ಚಂಚಲ್ ಪಾಲ್ ಟೇಬಲ್ ಗುದ್ದಿದ.

ಚಂಚಲ್ ಪಾಲ್ ಮತ್ತು ನನ್ನ ವಿರೋಧ ಕಾಲೇಜಿನಲ್ಲಿ ಎಲ್ಲರಿಗೂ ತಿಳಿದಿತ್ತು. ಚುನಾವಣೆ ಬಂದದ್ದರಿಂದ ಸರ್ದಾರ್ಜಿ ನನ್ನ ಸ್ನೇಹ ಬಯಸಿ ಬಂದಿದ್ದ. ನನ್ನ ಅವನ ನಡುವೆ ವೈಮನಸ್ಸಿಲ್ಲ ಎಂದು ವಿದ್ಯಾರ್ಥಿಗಳಿಗೆ ತೋರಿಸಬೇಕಾಗಿತ್ತು.

ಮಾರನೆಯ ದಿನ ನಾನು, ವೋರಾ ಮತ್ತು ಚಂಚಲ್ ಪಾಲ್ ಪ್ರಿನ್ಸಿಪಾಲರನ್ನು ಭೇಟ ಮಾಡಿದೆವು.

"ವಿದ್ಯಾರ್ಥಿಗಳಿಗೆ ಅನುಕೂಲ ಮಾಡಿಕೊಡಬೇಕು. ಸರಿಯೇ. ಆದರೆ ಮ್ಯಾನೇಜ್‌ಮೆಂಟನ ಆರ್ಥಿಕ ಸ್ಥಿತಿ ಈಗ ಚೆನ್ನಾಗಿಲ್ಲ," ಎಂದು ಘಂಟೀವಾಲ ಹೇಳಿದರು.

ಪ್ರಿನ್ಸ್‌ಪಾಲ್ ಹೀಗೆ ಮಾತಾಡಬಹುದು ಎಂದು ನಾನು ನಿರೀಕ್ಷಿಸಿರಲಿಲ್ಲ.

"ಸರ್ದಾರ್ಜಿ ಮುಖ ಕಂಡರೆ ಅವರಿಗೆ ಆಗೋದಿಲ್ಲ ಅವನು ನಮ್ಮ ಜೊತೆ ಬಂದದ್ದರಿಂದಲೇ ಕೆಲ್ಸ ಕೆಡ್ತು" ಎಂದು ವೋರಾ ನನ್ನನ್ನೇ ಹಿಂದಿನಿಂದ ಆಕ್ಷೇಪಿಸಿದ.

ಮಾರನೆಯ ದಿನ ಕಾಲೇಜು ಶುರು ಆಗುವ ಮೊದಲು ಸರ್ದಾರ್ಜಿ ಮತ್ತು ನಾನು ವಿದ್ಯಾರ್ಥಿಗಳನ್ನು ಉದ್ದೇಶಿಸಿ ಮಾತಾಡಿದೆವು. ನಾನು ಸರ್ದಾರ್ಜಿಯಂತೆ ಉದ್ರೇಕಗೊಳ್ಳದೆ ತರ್ಕಬದ್ಧವಾಗಿ ಮಾತಾಡಿದೆ. ನನ್ನ ಮಾತಿನ ಧಾಟ ಬಹಳ ಜನಕ್ಕೆ ಹಿಡಿಸಿತು ಎಂದು ತೋರಿತು. ವಿದ್ಯಾರ್ಥಿಗಳು ತರಗತಿಗಳನ್ನು ಬಹಿಷ್ಕರಿಸಿದರು.

ಮುಷ್ಕರ ನಾಲ್ಕನೇ ದಿನಕ್ಕೆ ಕಾಲಿಟ್ಟಿತು. ಮ್ಯಾನೇಜ್‌ಮೆಂಟ್ ಮೌನವಾಗಿತ್ತು.

ರಾತ್ರಿ ಎಂಟು ಗಂಟೆಯ ಸಮಯ ಓಗ್ಲೆ ನನ್ನ ಕೋಣೆಗೆ ಬಂದರು. ನನಗೆ ಆಶ್ಚರ್ಯ.

"ನಿಮ್ಮೊಂದಿಗೆ ಮಾತಾಡಬೇಕು. ಬನ್ನಿ ಹೋಗೋಣ," ಎಂದು ಓಗ್ಲೆ ಹೇಳಿದರು. ಸ್ಕೂಟರ್ ತಂದಿದ್ದರು.

ಚೌಪಾತಿಯ ಕಲ್ಲು ಬೆಂಚಿನ ಮೇಲೆ ಕೂತೆವು.

"ನೋಡಿ ಇವರೆ, ನಿಮ್ಮ ಮುಷ್ಕರದಿಂದ ಮ್ಯಾನೇಜ್‌ಮೆಂಟ್ ಹೆಸರು ಕೆಡ್ತಾ ಇದೆ. ನೀವು ಮುಷ್ಕರ ವಾಪಸ್ ತಗೊಳ್ಳಿ. ನೀರಿನ ವ್ಯವಸ್ಥೆ ನನಗಿರಲಿ. ನನ್ನಲ್ಲಿ ಭರವಸೆ ಇಡಿ," ಓಗ್ಲೆ ಹೇಳಿದರು.

"ನಿಮ್ಮಲ್ಲಿ ಭರವಸೆ ಇದೆ ಸರ್, ಆದರೆ ವಿದ್ಯಾರ್ಥಿಗಳ ಮನವೊಲಿಸುವುದು ಹೇಗೆ ಅಂತ ಯೋಚನೆ...."

"ಈ ಮಾತು ನಂದಲ್ಲ, ಪ್ರೊ. ಘಂಟೀವಾಲ ಹೇಳಿದ್ದಾರೆ. ಮ್ಯಾನೇಜ್‌ಮೆಂಟ್ ವಿದ್ಯಾರ್ಥಿಗಳಿಗೆ ಹೆದರಿತು ಅಂತ ಆಗಬಾರದು. ನೀವು ಹಟ ಸಾಧಿಸಿದರೆ ಎರಡೂ ಪಕ್ಷಗಳಿಗೂ ತೊಂದರೆ. ಯೋಚ್ನೆ ಮಾಡಿ."

ಈ ಗುಟ್ಟಾದ ಒಪ್ಪಂದಕ್ಕೆ ಸರ್ದಾರ್ಜಿ ಒಪ್ಪಬಹುದೇ- ಎಂದು ಅನುಮಾನವಾಯಿತು. ನಾಳೆ ನಮ್ಮ ಅಭಿಪ್ರಾಯ ತಿಳಿಸುವದಾಗಿ ಓಗ್ಲೆ ಅವರಿಗೆ ಹೇಳಿದೆ.

ಮಾರನೆಯ ದಿನ ನಾನು, ವೋರಾ, ಸರ್ದಾರ್ಜಿ ಸಾಧಕ ಬಾಧಕಗಳ ಬಗ್ಗೆ ಚರ್ಚಿಸಿದೆವು. ಮುಷ್ಕರ ಹಿಂತೆಗೆದುಕೊಳ್ಳುವುದರಲ್ಲಿ ಸರ್ದಾರ್ಜಿಗೆ ಉತ್ಸಾಹವಿರಲಿಲ್ಲ. "ನಿಮ್ಮ ಅಭಿಪ್ರಾಯವಾದರೂ ಏನು? ಸ್ಪಷ್ಟವಾಗಿ ಹೇಳಿಬಿಡಿ," ಸರ್ದಾರ್ಜಿ ಹೇಳಿದ.

"ಮುಷ್ಕರ ಮಾಡುವದರ ಮೂಲಕ ನಮ್ಮ ಕೊರತೆಯ ಅರಿವು ಮೂಡಿಸಿದ್ದಾಯಿತು. ಮ್ಯಾನೇಜ್‌ಮೆಂಟ್ ನಮ್ಮ ಕೋರಿಕೆ ಮನ್ನಿಸುತ್ತೆ ಎಂಬ ಭರವಸೆಯ ಮೇಲೆ ಈ ಸಾಂಕೇತಿಕ ಮುಷ್ಕರ ಹಿಂತೆಗೆದುಕೊಂಡಿದ್ದೇವೆ ಅಂತಾ ಹೇಳಿಕೆ ಕೊಟ್ಟರಾಯಿತು."

ವೋರಾನೂ ನನ್ನ ಮಾತು ಬೆಂಬಲಿಸಿದ. ಸರ್ದಾರ್ಜಿ ಸ್ವಲ್ಪ ಹೊತ್ತು ಯೋಚಿಸಿ, "ಒಂದು ಕಂಡೀಷನ್‌ಗೆ ಒಪ್ಪೋದಾದ್ರೆ ಸ್ಟ್ರೈಕ್ ಹಿಂತೆಗೆದುಕೊಳ್ಳೋಕೆ ನಾನು ಸಿದ್ಧ," ಎಂದ.

"ವಾಟ್ ಈಜ್ ಯುವರ್ ಕಂಡೀಷನ್?" ವೋರಾ ಕೇಳಿದ.

"ನೀವು ಯೂನಿಯನ್ ಎಲೆಕ್ಷನ್‌ನಲ್ಲಿ ಸ್ಪರ್ಧಿಸಬಾರದು" ಅಂತ ನನ್ನ ಮುಖ ನೋಡುತ್ತ ಹೇಳಿದ.

ಮಾರನೆ ದಿನವೇ ಮುಷ್ಕರ ಮುಗಿಯಿತು.

ನನಗೆ ಘಂಟೀವಾಲರಿಂದ ಕರೆ ಬಂತು. ಸ್ವಲ್ಪ ಆತಂಕದಿಂದಲೇ ಅವರನ್ನು ಕಂಡೆ.

"ನಿಮ್ಮಂಥ ಜವಾಬ್ದಾರಿಯುಳ್ಳ ಯುವಕರು ವಿದ್ಯಾರ್ಥಿನಾಯಕರಾಗೋದಾದ್ರೆ ನಮ್ಮ ಅರ್ಧ ಸಮಸ್ಯೆಗಳು ಪರಿಹಾರವಾಗ್ತವೆ," ಎಂದರು.

ಸರ್ದಾರ್ಜಿ ಬಗ್ಗೆ ಘಂಟೀವಾಲ ನೇರವಾಗಿ ಅಸಮಾಧಾನ ವ್ಯಕ್ತಪಡಿಸಿದರು. ಅವನಿಗೆ ಮ್ಯಾನೇಜ್‌ಮೆಂಟ್‌ಗೆ ವಿರುದ್ಧವಾಗಿರುವ ರಾಜಕೀಯ ಪಕ್ಷವೊಂದರ ಬೆಂಬಲವಿದೆ. ಅವನು ಎಲೆಕ್ಷನ್‌ನಲ್ಲಿ ಜಯ ಗಳಿಸಿದರೆ ಕಾಲೇಜನ್ನು ಶಾಂತಿಯುತವಾಗಿ ನಡೆಸೋದೆ ಕಷ್ಟವಾಗುತ್ತೆ. ಆದುದರಿಂದ ಅವನು ಗೆಲ್ಲದಂತೆ ಮಾಡಬೇಕು ಎಂದು ಹೇಳಿದರು.

"ಈ ಸಂಬಂಧದಲ್ಲಿ ನಾನು ಮಾಡಬೇಕಾದ್ದು ಏನು?" ಎಂದು ಕೇಳಿದೆ.

"ಕಾರ್ಯದರ್ಶಿ ಸ್ಥಾನಕ್ಕೆ ನೀವೂ ಸ್ಪರ್ಧಿಸಿ. ನಾವೆಲ್ಲ ನಿಮಗೆ ಬೆಂಬಲ ಕೊಡುತ್ತೇವೆ," ಪ್ರಿನ್ಸಿಪಾಲ್ ಹೇಳಿದರು.

"ಚುನಾವಣೆಯಲ್ಲಿ ನನಗೆ ಆಸಕ್ತಿ ಇಲ್ಲ. ದಯವಿಟ್ಟು ಕ್ಷಮಿಸಿ," ಅಂತ ಹೇಳಿದೆ.

"ಆಯಿತು. ಸರ್ದಾರ್ಜಿಗೆ ಚುನಾವಣೆಯಲ್ಲಿ ನೀವು ಬೆಂಬಲ ಮಾತ್ರ ಕೊಡಬೇಡಿ. ಅಷ್ಟಾದರೂ ಆದೀತಲ್ಲವೆ?" ಎಂದರು. ಘಂಟೀವಾಲರ ಮಾತನ್ನು ನಾನು ಒಪ್ಪಿಕೊಂಡೆ.



ಸೂರತ್‌ನಲ್ಲಿ ಮಳೆ ಶುರುವಾಯಿತು. ತಾಪಿಯಲ್ಲಿ ನೀರಿನ ಮಟ್ಟ ಹತ್ತು ಅಡಿ ಹೆಚ್ಚಾಗಿದೆ ಎಂದು ಪತ್ರಿಕೆಗಳು ಪ್ರಕಟಿಸಿದವು. ಇಲ್ಲಿ ಮಳೆ ಅಂದರೆ ವಿಚಿತ್ರ. ಕಪ್ಪಾಗಿ ಮೋಡ ಕಟ್ಟುವದೇ ಬೇಡ. ಆಕಾಶದಲ್ಲಿ ಬೆಳ್ಳಗೆ ಹಗುರಾಗಿ ಮೋಡಗಳು ತೇಲುತ್ತಿದ್ದವು. ಎಲ್ಲಿಯ ಮಳೆ ಅಂತ ಹೊರಗೆ ಹೊರಟರೆ ತಣ್ಣಗೆ ಗಾಳಿ ಬೀಸಿ ರಪರಪ ಮಳೆ ಚಚ್ಚುವದಕ್ಕೆ ಪ್ರಾರಂಭವಾಗುತ್ತಿತ್ತು. ಊರಲ್ಲಿ ಬಯಲುಗಳೆಲ್ಲಾ ಹಚ್ಚಗಾದವು.

ಒಂದು ಸಂಜೆ ನಾನಿದ್ದ ಮನೆಯಲ್ಲಿ ಮನೆಮಂದಿಯಲ್ಲಾ ಉತ್ಸಾಹದಿಂದಿದ್ದರು. "ಪೋಂಕ್ ಪಾರ್ಟಿಗೆ ಹೋಗೋಣ ಬೇಗ ಹೊರಡಿ" ವಿಮ್ಮಿ ಓಡಿ ಬಂದು ಹೇಳಿದಳು. ಪೋಂಕ್ ಪಾರ್ಟಿ? ನನಗೆ ಕುತೂಹಲ ಕೆರಳಿತು. ಇಳಾಬೇನ್ ಹಸುರು ಹೂವಿನ ಸೀರೆ ಉಟ್ಟು ತಯಾರಾದಳು. ಬಿಳಿಯ ಪ್ಯಾಂಟ್, ಕೆಂಪು ಹೂವಿನ ಜಂಪರ್‌ನಲ್ಲಿ ಪ್ರೀತಿ, ರೇಷ್ಮೆ ಸೀರೆಯುಟ್ಟದ್ದ ಅಮ್ಮ ಪಾರ್ಟಿಗೆ ತಯಾರಾಗಿದ್ದರು. ನಮ್ಮ ಜೊತೆಗೆ ಪಾಸ್ಕಾಲ್ ರಾವ್ ಬಂದು ಸೇರಿಕೊಂಡರು.

ತಾಪಿಯ ಎಡದಂಡೆಯಲ್ಲಿ ದೂರದವರೆಗೂ ಮರಳು ದಿಣ್ಣೆಗಳು. ನಾವು ಬಡಾಫೂಲ್ ದಾಟ ನದಿಯ ದಂಡೆಗೆ ಬಂದೆವು. ಮರಳು ದಿಣ್ಣೆಗಳ ಮೇಲೆ ಇಡೀ ಸೂರತ್ತೇ ಸೇರಿದಂತಿತ್ತು. ಅಲ್ಲಿ ಹಚ್ಚನೆಯ ಜೋಳದ ಬೆಳಸುರಾಶಿ ಹಾಕಿಕೊಂಡು ಮಾರುತ್ತಿದ್ದರು. ಪೋಂಕ್ ಎಂದರೆ ಹಸಿಯ ಜೋಳದ ಕಾಳು. ಜೋಳದ ಕಾಳಿಗೆ ಕೊಬ್ಬರಿ, ಓಂಪುಡಿ, ಪುರಿ ಹಾಗೂ ಬೆಲ್ಲ ಅಮ್ಮ ಹದ ಮಾಡಿ ಎಲ್ಲರಿಗೂ ಹಂಚಿದಳು. ಪೋಂಕ್ ತಿಂದು ಸಂಜೆಯಾಗುವ ತನಕ ತಿರುಗಾಡಿ ಎಲ್ಲರೂ ಮನೆಗೆ ಬಂದೆವು.



ಎಲೆಕ್ಷನ್‌ನಲ್ಲಿ ಸರ್ದಾರ್ಜಿ ಸೋತ. ನನಗೆ ಸ್ಕಾಲರ್‌ಷಿಪ್ ದೊರೆಯಿತು. ಪ್ರೀತಿ ಇಂಗ್ಲೀಷ್‌ನಲ್ಲಿ ವೀಕ್ ಇದ್ದುದರಿಂದ ದಿನಾ ಒಂದು ಗಂಟೆ.ನನ್ನ ಬಳಿ ಟ್ಯೂಷನ್‌ಗೆ ಬರತೊಡಗಿದಳು. ಪ್ರೀತಿ ಮತ್ತು ನನ್ನ ನಡುವೆ ಏನೋ ಒಂದು ಹೊಸ ಬಗೆ ನಡೀತಾ ಇದೆ ಅಂತಾ ಅನಿಸ್ತಾ ಇತ್ತು.

ಇಳಾಬೇನ್ ಊರಲ್ಲಿಲ್ಲದ ಒಂದು ದಿನ ಪಾನ್ವಾಲ್ ರಾವ್ ನನ್ನ ಕೋಣೆಗೆ ಬಂದು,

''ಪ್ರತಿನಿತ್ಯ ಸ್ವಲ್ಪ ಭಜನೆ ಮಾಡದಿದ್ರೆ ಮನಸ್ಸಿಗೆ ಸಮಾಧಾನವೇ ಆಗುವದಿಲ್ಲ,'' ಎಂದ.

''ಇಳಾಬೇನ್ ನಿಮಗೆ ಮೊದಲಿಂದ ಗೊತ್ತೆ?'' ನಾನು ಕೇಳಿದೆ.

''ಇಲ್ಲಿಗೆ ಬಂದ ಮೇಲೆ. ಮೂರು ವರ್ಷ ಆಯಿತು. ಫಿಲಾಸಫಿ ಅಂದ್ರೆ ನನಗೆ ಹುಚ್ಚು. ಇಳಾಬೇನ್ ಫಿಲಾಸಫಿ ತುಂಬಾ ಓದ್ಕೊಂಡಿದಾರೆ.''

''ನಾಳೆ ಇಳಾಬೇನ್ ಬರಬಹುದು,'' ಎಂದು ಸಮಾಧಾನ ಹೇಳಿ ಕಳಿಸಿದೆ.

ಈಚೆಗೆ ಇಳಾಬೇನ್ ಬಗ್ಗೆ ಹೆಚ್ಚಿನ ವಿವರ ಪ್ರೀತಿಯಿಂದ ಗೊತ್ತಾಗಿತ್ತು. ಇಳಾಬೇನ್‌ಗೆ ಮದುವೆಯಾಗಿತ್ತು. ಗಂಡ ಅದೇ ವರ್ಷ ಸತ್ತು ಹೋದ. ತಂದೆ ದೊಡ್ಡ ವ್ಯಾಪಾರಸ್ಥ. ಇದ್ದಕ್ಕಿದ್ದಂತೆ ಅವರ ವ್ಯಾಪಾರ ಮುಳುಗಿ ಪಾಪರ್ ಆದರು. ಇಳಾಬೇನ್ ತಾಯಿ ಜೊತೆಗೆ ನೌಸಾರಿಗೆ ಬಂದರು. ಅಲ್ಲಿ ಓದು ಮುಂದುವರಿಸಿದರು. ನಾಲ್ಕೈದು ವರ್ಷ ಕಳೆದ ಮೇಲೆ ಇಳಾಬೇನ್ ಟೀಚರ್ ಆಗಿ ಸೂರತ್‌ಗೆ ಬಂದು ನೆಲೆಸಿದರು.



''ಈ ಹುಡುಗನ ಜಾತಕ ಪ್ರಕಾರ ಕೈ ಇಟ್ಟರೆ ಕಲ್ಲು–ಮಣ್ಣು ಎಲ್ಲ ಕಾಸಾಗುತ್ತದೆ.''

''ನಮ್ಮ ಮಗ ಬಿಲ್ಡಿಂಗ್ ಕಂಟ್ರಾಕ್ಟರ್ ಅಂತ ಹ್ಯಾಗ್ಗೊತ್ತಾಯ್ತು ಜೋಯ್ಸ್‌ರೆ?''

ಮತ್ತೊಂದು ದಿನ ಪಾನ್ಸಾಲ್‌ರಾವ್ ನನ್ನ ಕೋಣೆಗೆ ಬಂದು ಬಾಗಿಲು ಹಾಕಿ,

"ನೋಡಿ ಇವರೆ, ಗಂಡು ಹೆಣ್ಣಿನ ಸ್ನೇಹ ಅಂದ್ರೆ ತಕ್ಷಣ ಅಪಾರ್ಥ ಹಚ್ಚಿಬಿಡ್ತಾರೆ.... ನನಗೂ ಇಳಾಬೇನ್‌ಗೂ ಸಂಬಂಧ ಹಚ್ಚಿ ಮಾತಾಡೋ ಜನ ಇದ್ದಾರೆ... ಅಂದ.

"ನಮ್ಮ ಮನಸ್ಸು ಶುದ್ಧವಾಗಿರೋದು ಮುಖ್ಯ. ಬೇರೆಯವರ ಮಾತು ಲೆಕ್ಕಕ್ಕೆ ತಗೋಬೇಕಾಗಿಲ್ಲ," ಎಂದೆ.

"ನಮ್ಮ ಮನಸ್ಸೇನೋ ಶುದ್ಧಾನೇ. ಪ್ರೀತಿ ದೈವಿಕವಾದ ವಿಷಯ ಅಲ್ವಾ? ಅದಕ್ಯಾಕೆ ಜನ ಹಲ್ಕಾ ಅರ್ಥ ಹಚ್ಚಬೇಕು? ಜೊತೆಗೆ ಮಲಗಿದರೇನೇ ಪ್ರೀತೀನಾ?... ಪರಿಶುದ್ಧವಾದ ಆತ್ಮೀಯವಾದ ಅದೈಹಿಕವಾದ ಪ್ರೀತಿ ಸಾಧ್ಯವಿಲ್ವಾ?"

"ನಿಮ್ಮ ಮನಸ್ಸು ನನಗೆ ಅರ್ಥವಾಗುತ್ತೆ. ಇಳಾಬೇನ್ ಗುಣಶಾಲಿ ಮಹಿಳೆ. ವಿಧವೆ ಬೇರೆ. ನೀವು ಏಕೆ ಅವರನ್ನು ಮದುವೆ ಆಗ್ಬಾರ್ದು?..."

ಪಾನ್ಸಾಲ್ ರಾವ್ ಮಂಕಾದ. ಸ್ವಲ್ಪ ಹೊತ್ತು ತಡೆದು,

"ಇಳಾ ಇದಕ್ಕೆ ಒಪ್ಪಬಹುದೆ....? ಆಕೆಗೆ ಯಾವದೂ ಗೊತ್ತಿಲ್ಲ...."

"ನಾನು ಬೇಕಾದ್ರೆ ಆಕೆಯನ್ನು ವಿಚಾರಿಸ್ತೀನಿ," ಅಂದೆ.

"ನಾನು ಹೇಳಿದ್ದು ಅಂತ ದಯವಿಟ್ಟು ಹೇಳಬಾರ್ದು..." ಎಂದು ಪಾನ್ಸಾಲ್‌ರಾವ್ ಎರಡು ಬಾರಿ ವಿನಂತಿ ಮಾಡಿಕೊಂಡ.



ಅಂದು ಕಾಲೇಜು ಮುಗಿಸಿ ಹೊರಬಂದಾಗ ಹನಿ ಹನಿ ಮಳೆ ಪ್ರಾರಂಭವಾಯಿತು. ಮನೆ ಸೇರುವ ವೇಳೆಗೆ ತೊಯ್ದು ತೊಪ್ಪೆಯಾದೆ. ವಿದ್ಯುಚ್ಛಕ್ತಿ ನಿಂತು ಹೋಗಿತ್ತು. ಮನೆಯಲ್ಲಿ ಮಂಕಾದ ಮೊಂಬತ್ತಿಗಳು ಉರಿಯುತ್ತಿದ್ದವು. ನಾನು ಮಹಡಿಗೆ ಹೋದಾಗ ನನ್ನ ಕೋಣೆಯ ಬಾಗಿಲು ಸ್ವಲ್ಪ ಮುಂದುಮಾಡಿದ್ದರು. ಒಳಗೆ ಮಬ್ಬುಕತ್ತಲಲ್ಲಿ ನನ್ನ ಮಂಚದಲ್ಲಿ ಯಾರೋ ಮಲಗಿದಂತೆ ತೋರಿತು. ನನಗೆ ಆಶ್ಚರ್ಯ. ಹತ್ತಿರ ಹೋಗಿ ಕಣ್ಣಲ್ಲಿ ಕಣ್ಣಿಟ್ಟು ನೋಡಿದಾಗ ಮಂಚದಲ್ಲಿದ್ದವರು ತಟ್ಟನೆ ನನ್ನ ಕೊರಳಿಗೆ ಸುತ್ತಿಕೊಂಡು ಮೇಲೆಳೆದುಕೊಂಡರು. ಇದು ಪ್ರೀತಿ ಎಂದು ಗೊತ್ತಾಯಿತು. ಒದ್ದೆಯ ಬಟ್ಟೆಯಲ್ಲಿ ಮೈ ಕಾಯತೊಡಗಿ ನನ್ನ ಸ್ನಾಯುಗಳು ನನ್ನ ಅಂಕೆ ತಪ್ಪತೊಡಗಿದವು.

"ಪ್ರೀತಿ, ಬಿಡು.... ಬಿಡು..." ಎಂದು ವಟಗುಟ್ಟಿದೆ.

" ಐ ಲವ್ ಯು..... ಐ ಲವ್ ಯು...." ಎಂದು ಪ್ರೀತಿ ನನ್ನ ಮೈ ಅಜ್ಜುಗುಜ್ಜಾಗುವಂತೆ ತಬ್ಬಿಕೊಂಡಳು. ಅವಳ ಬಿಸಿಯುಸಿರು ತುಟಿಗೆ ತಾಗತೊಡಗಿತು.

"ಪ್ರೀತಿ, ಡೋಂಟ್ ಬಿ ಸಿಲ್ಲಿ" ಅವಳಿಂದ ಬಿಡಿಸಿಕೊಂಡು ಪಿಸುಗುಟ್ಟಿ ಗದರಿಸಿದೆ. ಪ್ರೀತಿ ತತ್‌ಕ್ಷಣ ಎದ್ದು ಕೂತಳು. ಗಟ್ಟಿಯಾಗಿ ಉಸಿರು ಬಿಡುತ್ತಿದ್ದಳು. ನಾನು ಕಿಟಕಿ, ಬಾಗಿಲು ಅಗಲಕ್ಕೆ ತೆಗೆದೆ. ಪ್ರೀತಿ ಮಾತಾಡಲಿಲ್ಲ.

"ಓ ಪ್ರೀತಿ! ಯು ಆರ್ ಎ ಗುಡ್ ಗರ್ಲ್. ಐ ಲವ್ ಯು ಮೈ ಡೀಯರ್..." ಎಂದು ಬೆನ್ನು ತಟ್ಟುತ್ತಾ ಆಕೆಯ ಕಣ್ಣೀರು ಒರೆಸಿದೆ.

ಮಾರನೆಯ ದಿನ ಕಾಲೇಜಿಗೆ ಹೋದಾಗ ವ್ಹೋರಾಗೆ ಹಿಂದಿನ ದಿನದ ವಿಶೇಷ ಘಟನೆ ತಿಳಿಸಿದೆ.

"ಎಲ್ಲಾ ನಾನು ನಿರೀಕ್ಷಿಸಿದಂತೆ ಆಗುತ್ತಿದೆ," ಎಂದು ವ್ಹೋರಾ ನಿಟ್ಟುಸಿರು ಬಿಟ್ಟ.

ಸ್ವಲ್ಪ ಹೊತ್ತು ತಡೆದು ಮತ್ತೆ ಪ್ರಶ್ನೆ ಮಾಡಿದ,

"ನಿಂದೂ ಪ್ರೀತೀದೂ ಒಂದೇ ಜಾತೀನಾ?"

"ಜಾತಿಯೊಂದೇ. ಆದರೆ ಪಂಗಡ ಬೇರೆ. ನಾನು ಜಾತಿ ಗೀತಿ ಅಂತ ತಲೆ ಕೆಡಿಸಿಕೊಂಡವನಲ್ಲ. ನಾನು ಅಂಥ ಸಂಪ್ರದಾಯಸ್ಥನಾಗಿದ್ದರೆ ಮಾಂಸ ತಿನ್ನೋ ಚೆಟ್ಟಪ್ಪನ ಮನೆಯಲ್ಲಿ ಊಟ ಮಾಡುತ್ತಿರಲಿಲ್ಲ, ರಾಜಪೂತ್ ಹಾಸ್ಟೆಲ್ ಸೇರುತ್ತಿರಲಿಲ್ಲ" ಎಂದು ನಾನು ಜಂಭದಿಂದ ಹೇಳಿದೆ.

"ಮದುವೆ ಆಗೋದು ಊಟ ಮಾಡೋವಷ್ಟು ಸುಲಭ ಅಲ್ಲ," ವ್ಹೋರಾ ನನಗೆ ಹಾಸ್ಯ ಮಾಡಿ ಹೇಳಿದ.

"ನಿನಗೆ ಮದುವೆ ಯೋಚ್ನೆ ಇಲ್ದಿದ್ರೆ ಈಗ್ಲೇ ಪ್ರೀತಿಯಿಂದ ದೂರಾಗೋದು ಒಳ್ಳೇದು," ಎಂದ.

ಅವನ ಮಾತನ್ನೇ ನೆನೆಯುತ್ತ ಮನೆಗೆ ಬರುವಾಗ ಪ್ರೀತಿಯ ಸೋದರ ಮಾವನ ನೆನಪಾಯಿತು. ಅವನು ಸ್ಟೇಟ್ಸ್‌ನಲ್ಲಿ ಇದ್ದಾನಂತೆ. ಈ ನೆನಪನ್ನು ಬಲವಂತ ಮಾಡಿ ಹಿಂದೆ ದೂಡಿದೆ.



ಒಂದು ದಿನ ಯತಿರಾಜನ್ ನನ್ನ ಕೋಣೆಗೆ ಬಂದ. ಇನ್ವಿಟೇಶನ್ ಕೊಟ್ಟ. ಸೂರತ್‌ನಲ್ಲಿ ತಮಿಳು ಸಂಘದ ಉದ್ಘಾಟನೆ. ದಯವಿಟ್ಟು ಬರಬೇಕು ಅಂದ. ಪ್ರೀತಿಯ ಡ್ಯಾನ್ಸ್ ಪ್ರೋಗ್ರಾಂ ಕೂಡ ಇದೆ ಎಂದು ಹೇಳಿದ. ಅವನ ಹಲ್ಲು ಮುರಿಯುವ ಹಾಗೆ ಒದೆಯಬೇಕು ಅನಿಸಿತು. ಥ್ಯಾಂಕ್ಸ್ ಎಂದಿಷ್ಟೇ ಹೇಳಿ ಕಳಿಸಿದೆ.

ತಮಿಳು ಸಂಘದ ಕಾರ್ಯಕ್ರಮದಲ್ಲಿ ಪ್ರೀತಿಯ ನೃತ್ಯ..... ಅಂದರೆ ಯತಿರಾಜನ್‌ಗಾಗಿ ಈ ಅರ್ಥ ಯಾಕೆ ಬರುತ್ತದೋ ನಾ ಕಾಣೆ.

ಪ್ರೀತಿ ಪಾಠಕ್ಕೆ ಬಂದಳು. ತಮಿಳು ಸಂಘದ ಮಾತು ಅವಳೇ ತೆಗೆದಳು. "ನೀವು ಬರ್ತಿರಲ್ಲ?" ಎಂದಳು.

"ಮಾಡ್ಕೋ ಹೋಗು ನಾನ್ಯಾಕೆ?"

"ನಾನು ಡ್ಯಾನ್ಸ್ ಮಾಡೋದು ನಿಮಗೆ ಇಷ್ಟ ಇಲ್ಲವಾ?" ಅಂದಳು.

ಏನು ಹೇಳಬೇಕು ಅಂತಾ ಗೊತ್ತಾಗದೇ "ತಮಾಷೆಗೆ ಅಂದೆ" ಅಂತ ಹೇಳಿದೆ.

ಕಾರ್ಯಕ್ರಮಕ್ಕೆ ನಾನು ವೋರಾ ಹೋಗಿದ್ದೆವು. ಭರತನಾಟ್ಯ. ಪ್ರೀತಿ ವೇದಿಕೆಯ ಮೇಲೆ ಬಂದಳು. ಕಚ್ಚೆ ಹಾಕಿ ಸೀರೆ ಉಟ್ಟಿದ್ದಳು. ಅವಳು ರಂಗಕ್ಕೆ ಬೆನ್ನು ಮಾಡಿ ಸೊಂಟ ತಿರುಗಿಸುವಾಗ ನನಗೆ ಸಂಕಟವಾಯಿತು. "ಬಾ ಹೋಗೋಣ" ಎಂದು ವೋರಾನ್ನ ಕರೆದುಕೊಂಡು ಹೊರಬಂದೆ. ರಂಗ ಮಹಲ್ ಹೊರಗೆ ಜಿಟ ಜಿಟ ಮಳೆ.

ಮಾರನೆಯ ದಿನ ವೆಂಕಟರಾಮಯ್ಯ ನನ್ನನ್ನ ಕರೆದು "ನಾವೂ ಯಾಕೆ ಕನ್ನಡ ಸಂಘ ಪ್ರಾರಂಭಿಸಬಾರ್ದು?" ಎಂದರು. ಇದಕ್ಕೆ ಪ್ರೀತೀನೂ ಒತ್ತಾಯ ಮಾಡಿದಳು. ಒಪ್ಪಿಕೊಂಡೆ. ಸೂರತ್‌ನಲ್ಲಿ ಎಷ್ಟು ಜನ ಕನ್ನಡಿಗರು ಅಂತ ಶೋಧ ನಡೀತು. ವೆಂಕಟರಾಮಯ್ಯನವರ ಮನೆ, ಕನ್ನಡ ಕೆಫೆಯ ಯಜಮಾನರ ಮನೆ, ಗೋಪಿ, ಕೆಫೆಯ ಕೆಲಸಗಾರರು ಹಾಗೂ ಬೆಟ್ಟಪ್ಪನ ಮನೆ.... ಒಟ್ಟು ಮೂವತ್ತು ಜನ ಕೂಡಿದರು. ಪ್ರೀತಿ ಜೊತೆ ಇದ್ದದ್ದರಿಂದ ಉತ್ಸಾಹದಿಂದ ತಿರುಗಾಡಿದೆವು. ಸುಮಾರು ಹಣ ವಂತಿಗೆ ಕೂಡಿಸಿದೆವು. ಕುವೆಂಪು, ಬೇಂದ್ರೆ, ಕಾರಂತ ಯಾರನ್ನಾದ್ರೂ ದೊಡ್ಡವರನ್ನ ಕರೆಸಬೇಕು ಎಂದು ವೆಂಕಟರಾಮಯ್ಯ ಸೂಚನೆ ತಂದರು. "ಈಗ ಕೂಡಿದ ಸ್ವಲ್ಪ ಹಣದಲ್ಲಿ, ಅದೆಲ್ಲಾ ಆಗದ ಮಾತು" ಎಂದೆ. ಕೊನೆಗೆ ಪ್ರೊ. ಘಂಟೀವಾಲರನ್ನು ಕರೆಸುವದೆಂದು ನಿರ್ಧರಿಸಿದೆವು.

ರಂಗಮಹಲ್‌ನಲ್ಲಿ ಕನ್ನಡ ಸಂಘದ ಉದ್ಘಾಟನೆ ಆಯಿತು. ನಾನು ಪ್ರಾಸ್ತಾವಿಕವಾಗಿ ಸಂಘದ ಉದ್ದೇಶ ಕುರಿತು ಮಾತಾಡಿದೆ. ಲಕ್ಷ್ಮಿ ತಡ ಮಾಡಿ ಬಂದದ್ದಕ್ಕೆ ಪ್ರಾರ್ಥನೆಯನ್ನು ಪ್ರೀತಿಯೇ ಮಾಡಿದಳು. ನಂತರ ಲಕ್ಷ್ಮಿ ಬಂದು ಹಾಡು ಹೇಳಿದಳು. ಅವು ಜನರನ್ನು ಬಹಳ ರಂಜಿಸಿದವು. ಪ್ರೀತಿಯ ನೃತ್ಯ ಗೋಪಿಯ ಯಕ್ಷಗಾನ ಕುಣಿತ.... ಕಾರ್ಯಕ್ರಮ ಯಶಸ್ವಿಯಾಯಿತು.

ಕಾರ್ಯಕ್ರಮ ಆದ ಮೇಲೆ ಒಂದೆರಡು ದಿನ ಪ್ರೀತಿ ಬಹಳ ಮಂಕಾಗಿದ್ದಳು. ಪಾಠಕ್ಕೂ ಬರಲಿಲ್ಲ. ಒಂದು ದಿನ ಕಾಲೇಜಿನಿಂದ ನಾನು, ವೋರಾ ನೇರವಾಗಿ ಸಿನಿಮಾಕ್ಕೆ ಹೋದೆವು. ಮನೆಗೆ ಬಂದಾಗ ಒಂಭತ್ತಾಗಿತ್ತು.

"ಏಕೆ ಇಷ್ಟು ತಡ?" ಎಂದು ಪ್ರೀತಿ ಕೇಳಿದಳು.

"ನಾನು ವೋರಾ ಸಿನಿಮಾಕ್ಕೆ ಹೋಗಿದ್ದೆವು."

"ಬೆಟ್ಟಪ್ಪನ ಮನೆಗೆ ಹೋಗಿದ್ದಿಯೇನೋ ಅಂತಿದ್ದೆ" ಅಂದಳು.

ಲಕ್ಷ್ಮಿ ಮತ್ತು ನನ್ನ ಬಗ್ಗೆ ಪ್ರೀತಿಗೆ ಅನುಮಾನ ಶುರುವಾಗಿರೋದು ಸ್ಪಷ್ಟವಾಯಿತು. ನಾನು ಲಕ್ಷ್ಮಿಯ ಜೊತೆ ಫ್ರೀಯಾಗಿ ಮಾತಾಡಿದ್ದು ನಿಜ. ಕನ್ನಡ ಸಂಘದ ಕಾರ್ಯಕ್ರಮಕ್ಕೆ ತಯಾರಿ ನಡೆಸುತ್ತಿದ್ದಾಗ ದಿನಾ ಸಂಜೆ ಲಕ್ಷ್ಮಿ ನನ್ನ ಕೋಣೆಗೆ ಬರುತ್ತಿದ್ದಳು. ಆಗ ನಾನು ಅವಳೊಂದಿಗೆ ಸಲುಗೆಯಿಂದ ಮಾತಾಡುವದನ್ನು ನೋಡಿ ಪ್ರೀತಿ ನನ್ನನ್ನು ತಪ್ಪಾಗಿ ಭಾವಿಸಿದ್ದಾಳೆ, ಎನ್ನಿಸಿತು.

ಮತ್ತೊಂದು ದಿನ ಅವಳಿಗೆ ಹೇಳಿದೆ. "ನೋಡು ಪ್ರೀತಿ.... ನೀನು ಏನೋ ಮನಸ್ಸಿನಲ್ಲಿ ಕಲ್ಪಿಸಿ ಅನುಮಾನ ಪಡ್ತಿದೀಯಾ .... ಲಕ್ಷ್ಮಿ ನನ್ನ ಅಕ್ಕ ಇದ್ದ ಹಾಗೆ. ಸಲುಗೆಯಿಂದ ಮಾತಾಡಿದ್ದಕ್ಕೆ ಅಪಾರ್ಥ ಕಲ್ಪಿಸಬಾರ್ದು."

ಪ್ರೀತಿ ಸ್ವಲ್ಪ ಹೊತ್ತು ಸುಮ್ಮನೆ ಕೂತಿದ್ದು ಎದ್ದು ಹೋದಳು. ನನ್ನ ಮಾತು ನಂಬಿದಳೋ ಇಲ್ಲವೋ ಗೊತ್ತಾಗಲಿಲ್ಲ.

ಲಕ್ಷ್ಮಿಯ ಬಗ್ಗೆ ನಾನು ಪ್ರೀತಿಗೆ ಹೇಳಿದ್ದು ನೂರಕ್ಕೆ ನೂರು ನಿಜವೇ ಎಂದು ನನಗೂ ಸ್ಪಷ್ಟವಿಲ್ಲ.... ಓದಿನಲ್ಲಿ ಮನಸ್ಸು ತೊಡಗಲಿಲ್ಲ.

ಮತ್ತೊಂದು ದಿನ ಪಾನ್ಶಾಲ್‌ರಾವ್ ಬಂದ. ವ್ಯಥೆ ಪಟ್ಟವನಂತೆ ಕಂಡ. "ನೋಡಿ ಇವರೆ, ಇಳಾಬೇನ್ ಜೊತೆ ಆ ಮಾತೇ ತೆಗೆಬೇಡಿ..."

"ನೀವು ನಿರಾಶರಾಗಬೇಕಿಲ್ಲ ರಾವ್, ಇಳಾ ಜೊತೆ ಮಾತಾಡಲಿಕ್ಕೆ ಸಂದರ್ಭ ಕಾಯ್ತಾ ಇದೀನಿ...." ಎಂದು ನಾನು ಹೇಳಿದೆ.

"ಆಕೆ ಜೊತೆ ಮಾತೇ ಬೇಡ. ಅದ್ರಿಂದ ಈಗಿನ ಸ್ನೇಹಕ್ಕೂ ಆಪತ್ತು ಬರಬಹುದು," ಪಾನ್ಶಾಲ್ ರಾವ್ ತಲೆ ಕೊಡವಿದ.

ಇಂಥ ದುರ್ಬಲ ವ್ಯಕ್ತಿಯ ಮಾತು ನಂಬಿಕೊಂಡು ನಾನು ಇಳಾಬೇನ್ ಜೊತೆ ಮಾತಾಡಿದ್ದೆ ನಾನೇ ಮೂರ್ಖನಾಗುತ್ತಿದ್ದೆ ಅಂತಾ ಅಂದುಕೊಂಡೆ.



೧೯೬೮ರ ಅಗಸ್ಟ್ ೮. ನನ್ನ ಜೀವನದಲ್ಲಿ ಮರೆಯಲಾಗದ ದಿನ. ಬೆಳಿಗ್ಗೆ ಎದ್ದಾಗಲೇ ಭಯಂಕರ ಮಳೆ ಸುರಿಯುತ್ತಿತ್ತು. ಕಿಟಕಿ, ಬಾಗಿಲು ತೆರೆದಾಗ ರಸ್ತೆಯಲ್ಲೆಲ್ಲಾ ನೀರು ಹರಿಯುತ್ತಿತ್ತು. ಚರಂಡಿ ಎಲ್ಲಾ ತುಂಬಿ ರಸ್ತೆಯ ಮೇಲೆ ಸುಮಾರು ಒಂದು ಅಡಿಯಷ್ಟು ನೀರು. ತಾಪಿ ನೀರಿನ ಮಟ್ಟ ನೂರಕ್ಕೆ ಹೆಚ್ಚಿದೆ. ನದಿಯ ಸಮೀಪದ ಬಡಾವಣೆಯ ಜನರಿಗೆ ಮನೆ ಖಾಲಿ ಮಾಡಲು ತಿಳಿಸಿದ್ದಾರಂತೆ.

ಒಂಬತ್ತರ ವೇಳೆಗೆ ಮಳೆ ಕಡಿಮೆಯಾಯಿತಾದರೂ ರಸ್ತೆಯಲ್ಲಿನ ನೀರಿನ ಮಟ್ಟ ಹೆಚ್ಚುತ್ತಾ ಇತ್ತು. ಚೋಟಾಪೂಲ್ ಸಂಪೂರ್ಣ ನೀರಲ್ಲಿ ಮುಳುಗಿದೆಯಂತೆ. ಹನುಮಾನ್ ಪೂಲ್‌ನಲ್ಲಿ ಮನೆಗಳಿಗೆ ನೀರು ನುಗ್ಗುವದರಲ್ಲಿದೆಯಂತೆ. ಇಳಾಬೇನ್, ಪ್ರೀತಿ, ವಿಮ್ಮಿ ಕೆಳಗೆ ನೀರು ಹರಿಯುವದನ್ನು ನೋಡುತ್ತಿದ್ದರು. ರಸ್ತೆಯ ನೀರು ನಾವಿದ್ದ ಮನೆಯ ಹೊಸ್ತಿಲು ದಾಟಿ ಒಳಗೆ ಬಂತು. ವೆಂಕಟರಾಮಯ್ಯನವರು ಗಡಬಡಿಸಿದರು. ಅಗತ್ಯ ಸಾಮಾನುಗಳನ್ನು ಮಹಡಿಗೆ ಸಾಗಿಸಲು ಹೇಳಿದರು. ಸೂಟ್‌ಕೇಸ್, ದೇವರ ಪೆಟ್ಟಿಗೆ, ಅಕ್ಕಿ, ಬೇಳೆ, ಹಾಲು, ಮೊಸರು, ನಾಲ್ಕು ಬಿಂದಿಗೆ ನೀರು ಎಲ್ಲ ಮೇಲೆ ಬಂದವು.

ನದಿ ಅಬ್ಬರದಿಂದ ತುಂಬಿ ಹರಿಯುತ್ತಿತ್ತು. ನದಿಯ ಮಧ್ಯೆ ಅರ್ಧಂಬರ್ಧ ಕಾಣುವ ಮರಗಳು, ಗುಡಿಸಲುಗಳು, ದನಕರುಗಳು ಕೊಚ್ಚಿ ಹೋಗುತ್ತಿದ್ದವು. ಈ ದೃಶ್ಯ ಛಳಿ ಹುಟ್ಟಿಸುತ್ತಿತ್ತು. ಎಲ್ಲೋ ಹುಟ್ಟಿ, ಎಲ್ಲೋ ಬೆಳೆದು ಕೊನೆಗೆ ಸಮುದ್ರದ ಗರ್ಭಕ್ಕೆ ಸೇರುತ್ತಿದ್ದವು. ಮನೆಯಲ್ಲಿ ಅಕ್ಕಿ ಕಡಿಮೆ ಇದ್ದುದರಿಂದ ವೆಂಕಟರಾಮಯ್ಯ ೧೦ ಕೆ.ಜಿ. ತರುತ್ತೇನೆಂದು ಹೋದರು. ಆ ಮೇಲೆ ಅಮ್ಮನಿಗೆ ತರಕಾರಿಯ ನೆನಪಾಯಿತು. ನಾನು, ಪಾನ್ಶಾಲ್‌ರಾವ್ ಚೀಲ ತೆಗೆದುಕೊಂಡು ತರಕಾರಿ ತರಲು ಹೊರಟೆವು. ಕೆಳಗಡೆ ರಾವ್ ಮನೆಯಲ್ಲೂ ನೀರು ಹೊಕ್ಕಿತ್ತು. ವಚ್ಛೂಬೇನ್ ಮಂಚದ ಮೇಲೆ ಕುರ್ಚಿ ಇಟ್ಟುಕೊಂಡು ತೂಕಡಿಸುತ್ತಾ ಕುಳಿತಂತಿತ್ತು. ಅವಳನ್ನೂ ವೆಂಕಟರಾಮಯ್ಯನವರ ಮನೆಗೆ ಕಳಿಸಿದೆವು. ಅಂಗಡಿಯ ಮೇಲ್ಛಾವಣಿಯ ಮೇಲೆ ತರಕಾರಿ ವ್ಯಾಪಾರ ನಡೆದಿತ್ತು. ಒಂದಕ್ಕೆ ಎರಡರಷ್ಟು ಬೆಲೆ ತೆತ್ತು ದೂದಿ, ಕರೇಲ್, ಬೇಂಗನ್ ತಂದೆವು.

ಮಧ್ಯಾಹ್ನದ ವೇಳೆಗೆ ನೀರು ಒಂದೊಂದೇ ಮಹಡಿ ಮೆಟ್ಟಲನ್ನೇರಲು ಪ್ರಾರಂಭಿಸಿತು. ಮಹಡಿ ಛಾವಣಿ ಹತ್ತಿ ನೋಡಿದರೆ ಎಲ್ಲೆಲ್ಲೂ ಗಾಜಿನ ಹಾಳೆಯ ಹಾಗೆ ಬಿಸಿಲಿಗೆ ಥಳಗುಟ್ಟುವ ನೀರು. ಮಧ್ಯೆ ಸಮುದ್ರದ ಹಡಗುಗಳ ಹಾಗೆ ಮನೆಗಳು.

ಅಮ್ಮ ಮಹಡಿಯ ಮೇಲೆ ಹಜಾರದಲ್ಲೇ ಒಂದು ಮೂಲೆಯಲ್ಲಿ ಒಲೆ ಹೂಡಿ ಅಡಿಗೆ ಮಾಡಿದರು. ವೆಂಕಟರಾಮಯ್ಯ ಹಜಾರದಲ್ಲಿ ನನ್ನ ಕುರ್ಚಿ ಇಟ್ಟು ಅದರ ಮೇಲೆ ಸಾಯಿಬಾಬಾನ ಫೋಟೋ ಸ್ಥಾಪಿಸಿದರು. ನಂದಾದೀಪ ಇಟ್ಟರು. "ನೀನೇ ಕಾಪಾಡಪ್ಪಾ" ಎಂದು ಕೆನ್ನೆ ಕೆನ್ನೆ ಬಡಿದುಕೊಂಡರು. ಮಧ್ಯಾಹ್ನ ಎರಡು ಗಂಟೆಗೆ ಭಜನೆ ಶುರುವಾಯಿತು. ಪ್ರವಾಹ ತಗ್ಗುವವರೆಗೆ ಭಜನೆ ನಿರಂತರವಾಗಿ ಸಾಗಬೇಕೆಂದು ಯಜಮಾನರ ಸಂಕಲ್ಪ. ಭಜನೆಗೆ ಪಾಸ್ಕಾಲ್‌ರಾವ್, ಇಳಾಬೇನ್, ಪ್ರೀತಿ, ವಿಮ್ಮಿ- ಎಲ್ಲಾ ಸೇರಿಕೊಂಡರು.

ನಾಲ್ಕು ಗಂಟೆಗೆ ನಾವು ಟೀ ಕುಡಿಯುತ್ತಿದ್ದಾಗ ಹಜಾರದ ಕಟಾಂಜನದ ಬಳಿ ನಿಂತಿದ್ದ ವಿಮ್ಮಿ-

"ಲಕ್ಷ್ಮಿ.... ಲಕ್ಷ್ಮಿ ಬಂದರು" ಅಂತ ಕೂಗಿದಳು.

ರಸ್ತೆಯಲ್ಲಿ ಸೊಂಟ ಮಟ್ಟದ ನೀರಿನಲ್ಲಿ ಲಕ್ಷ್ಮಿ ನಿಂತಿದ್ದಳು. ಒಂದು ಮಗು ಸೊಂಟದಲ್ಲಿ. ಇನ್ನೊಂದು ಮಗುವನ್ನು ಹೆಗಲ ಮೇಲೆ ಹಾಕಿಕೊಂಡಿದ್ದಳು. ಅವಳ ಮುಖ ಬಿಳಿಚಿಕೊಂಡಿತ್ತು.

"ವೇದಿಕೆಯ ಮೇಲಿರುವ ಮಾನ್ಯ ಉಳ್ಳಾಗಡ್ಡಿಯವರೆ, ಶ್ರೀಯುತ ಬಳ್ಳೊಳ್ಳಿಯವರೆ, ಸನ್ಮಾನ್ಯ ಕೋತಂಬ್ರಿಯವರೆ ಹಾಗೂ ಶ್ರೀ ಮೆಣಸಿನಕಾಯಿಯವರೆ..."






"ಓಹೋ ವೇದಿಕೆಯ ಮೇಲೆ ಪೂರ್ತಿ ತರಕಾರಿ ಮಾರ್ಕೆಟ್ಟೇ ಇದ್ದಂತಿದೆ."

"ಲಕ್ಷ್ಮಿ ಮುಂದೆ ಬರಬೇಡಿ. ಚರಂಡಿಗೆ ಬಿದ್ದೀರಿ. ನಾನು ಬರುತ್ತೇನೆ" ಎಂದು ಮಹಡಿಯಿಂದ ನಾನು ಗಟ್ಟಿಯಾಗಿ ಕೂಗಿದೆ. ಆಗ ಪ್ರೀತಿಯ ಮುಖ ನೋಡಿದೆ. ಅವಳ ಮುಖದ ಭಾವವನ್ನು ಅಳೆಯುವದು ಕಷ್ಟವಾಯಿತು.

ಮಹಡಿಯ ಕೆಳಗೆ ನನ್ನ ಜೊತೆ ಪಾನ್ಕಾಲ್‌ರಾವ್ ಸಹ ಬಂದ. ಸೀತೆಯನ್ನೊಬ್ಬರು, ಪಾರ್ವತಿಯನ್ನೊಬ್ಬರು ಎತ್ತಿಕೊಂಡೆವು. ಇನ್ನೊಂದು ಕೈಲಿ ನಾನು ಲಕ್ಷ್ಮಿಯ ತೋಳು ಹಿಡಿದುಕೊಂಡೆ.

ಪ್ರೀತಿ ಲಕ್ಷ್ಮಿಗೆ ತನ್ನ ಸೀರೆಯನ್ನು ಕೊಟ್ಟಳು. ಕೋಣೆಯ ಬಾಗಿಲು ಮುಂದೆ ಮಾಡಿ ಲಕ್ಷ್ಮಿ ಸೀರೆ ಬದಲಾಯಿಸಿದಳು.

ಬೆಟ್ಟಪ್ಪನ ಮನೆ ಇದ್ದ ಹನುಮಾನ್ ಫೂಲ್ ತಾಪಿಗೆ ತೀರ ಸಮೀಪ. ಬೆಟ್ಟಪ್ಪ ಹಿಂದಿನ ರಾತ್ರಿ ಸ್ಟೇಷನ್‌ಗೆ ಹೋದವನು ಇನ್ನೂ ಮನೆಗೆ ಬಂದಿರಲಿಲ್ಲ. ಮಧ್ಯಾಹ್ನದವರೆಗೂ ಲಕ್ಷ್ಮಿ ತಡೆದಳು. ಸ್ಟೇಷನ್ ಪ್ರವಾಹದಲ್ಲಿ ಕೊಚ್ಚಿ ಹೋಯಿತು ಅಂತಾ ಯಾರೋ ಹೇಳಿದರು. ಲಕ್ಷ್ಮಿಗೆ ಭಯವಾಗಿ ಇಲ್ಲಿಗೆ ಬಂದಿದ್ದಳು. ಸೀತೆಗೆ ಜ್ವರ ಬೇರೆ ಬಂದಿದ್ದವು.

ಲಕ್ಷ್ಮಿ ಅಳುತ್ತಿದ್ದಳು. ಅವಳನ್ನು ನೋಡಿ ಮಕ್ಕಳೂ ಅಳತೊಡಗಿದವು. "ಸ್ಟೇಷನ್ ನೀರಿನಲ್ಲಿ ಮುಳುಗಿದ್ದು ಸುಳ್ಳು, ಹಾಗಿದ್ದರೆ ರೇಡಿಯೋ ನ್ಯೂಸ್ ಬರ್ತಿತ್ತು"– ಎಂದು ನಾನು ಲಕ್ಷ್ಮಿಗೆ ಧೈರ್ಯ ಹೇಳಿದೆ. ಬೆಟ್ಟಪ್ಪನನ್ನು ನೋಡಿಕೊಂಡು ಬರಲು ಹೊರಟೆ. ಪ್ರೀತಿ ನನ್ನ ಹಿಂದೆ ಬಂದು "ಮಳೆ ಶುರು ಆಗ್ತಾ ಇದೆ. ಈಗ ಎಲ್ಲೂ ಹೋಗೋದು ಬೇಡ" ಅಂದಳು. "ಬೇಗ ಬಂದ್ಬಿಡ್ತೀನಿ" ಅಂದೆ.

ಪಾನ್ಕಾಲ್‌ರಾವ್ ಮತ್ತು ನಾನು ಆಧಾರಕ್ಕೆ ಉದ್ದನೆಯ ಬಡಿಗೆ ಹಿಡಿದುಕೊಂಡು ರಸ್ತೆಗೆ ಬಂದೆವು.

ಸಂಜೆಯ ಮಬ್ಬು ಬೆಳಕಿನಲ್ಲಿ ರಸ್ತೆಯ ನೀರು ಕಣ್ಣಿಗೆ ಅಸಹ್ಯವಾಗಿತ್ತು. ನಾವು ಸ್ವಲ್ಪ ದೂರ ನಡೆಯುತ್ತಾ ತಗ್ಗು ಪ್ರದೇಶ ಬಂದಾಗ ಈಜುತ್ತಾ ನಿಧಾನವಾಗಿ ಅಂಚೆ ಕಛೇರಿಗೆ ತಲುಪಿದೆವು. ಸ್ಟೇಷನ್‌ಗೆ ಫೋನ್ ಮಾಡಿದೆವು. ಸ್ಟೇಷನ್ ಸುರಕ್ಷಿತವಾಗಿತ್ತು. ಆದರೆ ಬೆಟ್ಟಪ್ಪನ ಅಂಗಡಿ ಬಾಗಿಲು ಹಾಕಿದೆ ಅಂತ ಗೊತ್ತಾಯಿತು. ಬೆಟ್ಟಪ್ಪ ಎಲ್ಲಿ ಹೋದ ಎಂದು ತಿಳಿಯಲಿಲ್ಲ. ಸ್ಟೇಷನ್‌ದಲ್ಲಿ ಇಲ್ಲದ ವಿಷಯವನ್ನು ಆತನ ಹೆಂಡತಿಗೆ ಹೇಳುವುದೇ ಬೇಡ–ಅಂತ ಪಾನ್ಕಾಲ್‌ರಾವ್ ಹೇಳಿದ. ಅದಕ್ಕೆ ನಾನು ಒಪ್ಪಿದೆ.

ಬೆಟ್ಟಪ್ಪ ನಿಲ್ದಾಣದಲ್ಲಿ ಕ್ಷೇಮವಾಗಿದ್ದಾನೆಂದು ತಿಳಿದಾಗ ಲಕ್ಷ್ಮಿಗೆ ಮತ್ತೆ ಜೀವಕಳೆ ಮೂಡತೊಡಗಿತು.



ರಾತ್ರಿಯಾಗುತ್ತಾ ತಾಪಿಯ ಅಬ್ಬರ ಸ್ಪಷ್ಟವಾಗಿ ಕೇಳತೊಡಗಿತು. ಎರಡನೇ ಟೆರೇಸಿನ ಮೇಲೆ ಕುಳಿತುಕೊಂಡಿದ್ದೆ. ಆಕಾಶದಲ್ಲಿ ನಕ್ಷತ್ರಗಳು ಥಳಗುಟ್ಟುತ್ತಿದ್ದವು. ಗಾಳಿ ಮೈ ಕೊರೆಯುತ್ತಿತ್ತು. ವಿಚಿತ್ರವಾದ ಯೋಚನೆಗಳು ಬರುತ್ತಿವೆ. ಹುಟ್ಟು, ಸಾವು, ಜೀವನದ ವಿಚಿತ್ರಗತಿ....

ನನ್ನ ಕೋಣೆಯಲ್ಲಿ ಲಕ್ಷ್ಮಿ ಮಗುವಿನೊಂದಿಗೆ ಮಲಗಿದ್ದಾಳೆ. ಪ್ರಾಯಶಃ ಅವಳಿಗೆ ನಿದ್ದೆ ಬಂದಿರುವದಿಲ್ಲ. ಮಗುವಿಗೆ ಜ್ವರ ಹೆಚ್ಚಾದರೆ.... ನನಗೆ ಭಯವಾಗುತ್ತದೆ. ಪ್ರವಾಹ ಲಕ್ಷ್ಮಿಯನ್ನು ಮಕ್ಕಳೊಂದಿಗೆ ಇಲ್ಲಿಗೆ ತಂದಿದೆ. ಬೆಟ್ಟಪ್ಪ ಯಾವ ನಡುಗಡ್ಡೆಯಲ್ಲಿ ಉಸಿರಾಡುತ್ತಿದ್ದಾನೋ ಗೊತ್ತಿಲ್ಲ. ಇಂಥ ಗಳಿಗೆ ವೋರಾ ಜೊತೆಗಿದ್ದರೆ.... ಸೂರತ್ ನೀರಿನಲ್ಲಿ ಮುಳುಗುತ್ತಿರುವದು ಪೇಪರ್‌ನಲ್ಲಿ ಪ್ರಕಟವಾಗಿರಬಹುದು. ಊರಿನಲ್ಲಿ ಅಮ್ಮ ಅಪ್ಪ ತುಂಬಾ ಗಾಬರಿಯಾಗಿರಬಹುದು.

ಪಾನ್ಕಾಲ್‌ರಾವ್ ಎರಡು ಚಾಪೆ ಎತ್ತಿಕೊಂಡು ಟೆರೇಸಿಗೆ ಬಂದ. ಆಕಾಶ ನೋಡುತ್ತಾ ಮಲಗಿಕೊಂಡೆವು. ರಾವ್ ಮಾತು ಶುರು ಮಾಡಿದ–

"ಇವರೆ–ಇಳಾಬೇನ್ ತುಂಬ ಅದ್ಭುತ ಹೆಂಗಸು ಅನ್ಸುತ್ತೆ.... ಆಕೆ ನನ್ನ ಎಷ್ಟು ಆಕ್ರಮಿಸಿದಾರೆ ಅಂದರೆ ಆಕೆ ಇಲ್ದೆ ಬದುಕೋದೆ ಕಷ್ಟ ಅನ್ನಿಸ್ತಿದೆ...."

ಈ ಮಾತು ನನಗೆ ಬೇಸರ ತಂದಿತು. ನಾನು ಮೌನವಾಗಿದ್ದೆ.

"ಒಂದು ಗುಟ್ಟಿನ ಮಾತು–ನಿಮ್ಮಲ್ಲೇ ಇರ್ಲಿ.... ಇಳಾ ನನ್ನ ಜೊತೆ ಬರ್ತಾ ಇದಾಳೆ.... ನಾನು ನಮ್ಮ ಕಡೆಗೆ ವರ್ಗಕ್ಕೆ ಪ್ರಯತ್ನಿಸ್ತಿದೀನಿ.... ವರ್ಗ ಆಗ್ದೆ ಇದ್ರೆ ರಾಜಿನಾಮೆ ಕೊಟ್ಟ ಬಿಡ್ತೀನಿ" ರಾವ್ ಖುಷಿಯಾಗಿದ್ದ. ಉದ್ವಿಗ್ನನಾಗಿದ್ದ.

ನಾನು ಎದ್ದು ಕೂತು ಕೈ ಕುಲುಕಿ ಶುಭಾಶಯ ಹೇಳಿದೆ.

ರಾವ್ ಎಂಥ ವಿಚಿತ್ರ ವ್ಯಕ್ತಿ ಅಂತ ಯೋಚಿಸತೊಡಗಿದೆ. ಇಂಥ ವಿಷಯದಲ್ಲಿ ನಾನೇ ಕ್ರಾಂತಿಕಾರಿ ಅಂದ್ಕೊಂಡಿದ್ದೆ.... ರಾವ್ ಬ್ರಾಹ್ಮಣ. ಕಟ್ಟಾ ಕರ್ಮನಿಷ್ಠ. ಇಳಾ ಮಾಂಸ ತಿನ್ನುತ್ತಾಳೆ. ಅಂತರ್ಜಾತೀಯ ವಿವಾಹ... ರಾವ್ ಸಾವಿರ ಹೆಜ್ಜೆ ಮುಂದೆ ಹೋಗಿದ್ದಾನೆ. ಅಥವಾ ಇಳಾ ಅವನಿಗೆ ಬೇಕಾಗಿದೆ. ಜಾತಿ, ವೈಧವ್ಯ ಅವರ ಮಧ್ಯೆ ಬರಲಾರದು. ರಾವ್ ಕ್ರಾಂತಿಕಾರಿ ಮದುವೆ ಆಗ್ತಿಲ್ಲ. ಇಳಾಗಾಗಿ ತನ್ನ ಅಂತರ್ಯದ ಎಂಥ ಪ್ರತಿರೋಧವನ್ನೂ ಎದುರಿಸಲು ಸಿದ್ಧನಾಗಿದ್ದಾನೆ. ನಮ್ಮ ಕ್ರಾಂತಿಗಳೆಲ್ಲಾ ಹೀಗೆ ವೈಯಕ್ತಿಕ ಒತ್ತಡಗಳಿಗೇ ಹುಟ್ಟುತ್ತವೇನೋ?



ವಿಮ್ಮಿ ನನ್ನ ಭುಜ ಅಲುಗಿಸುತ್ತಾ "ರೀ... ಕಾಫಿ" ಎಂದು ಕೂಗಿದಳು. ಎಚ್ಚರಾಯಿತು. ಎಳೆಬಿಸಿಲಿನಲ್ಲಿ ಸೂರತ್ ತೋಯುತ್ತಿತ್ತು.

"ಮೊದಲು ಕಾಫಿ ಮುಗಿಸಿ. ಆಮೇಲೆ ನೀರಿನ ವಿಷಯ" ಎಂದು ವೆಂಕಟರಾಮಯ್ಯ ಹೇಳಿದರು.

ನಿನ್ನೆ ರಾತ್ರಿಯೇ ನಮ್ಮ ನೀರಿನ ಸಂಗ್ರಹ ಮುಗಿದಿತ್ತು. ಮನೆಗೆ ಓವರ್ ಹೆಡ್ ಟ್ಯಾಂಕ್ ಇರಲಿಲ್ಲ. ಮಹಡಿಯಲ್ಲಿ ನಲ್ಲಿ ಇರಲಿಲ್ಲ. ಕೆಳಗೆ ಅಡಿಗೆ ಮನೆಯಲ್ಲಿ ಎರಡು, ಬಚ್ಚಲಲ್ಲಿ ಎರಡು, ಕಕ್ಕಸದಲ್ಲಿ ಒಂದು ನಲ್ಲಿ ಇದ್ದರೂ ಈಗ ಎಲ್ಲಾ ತಾಪಿಯ ಬಗ್ಗಡದಲ್ಲಿ ಮುಳಗಿದ್ದವು. ನಾನು, ಪಾಸ್ಕಲ್ ರಾವ್ ಏನು ಮಾಡುವುದೆಂದು ಚರ್ಚೆ ಮಾಡಿದೆವು. ಕೊನೆಗೆ ಒಂದು ಉಪಾಯ ಹೊಳೆಯಿತು.

ಈಜು ಬಲ್ಲ ಒಬ್ಬರು ನೀರಿನಲ್ಲಿ ಮುಳುಗಿ ಅಡುಗೆ ಮನೆಗೆ ಹೋಗುವದು. ಉದ್ದನೆಯ ವಾಟರ್ ಪೈಪನ್ನು ನಲ್ಲಿಗೆ ಸಿಕ್ಕಿಸಿ, ನಲ್ಲಿ ತಿರುವಿ ಟ್ಯೂಬಿನ ತುದಿ ಹಿಡಿದುಕೊಂಡು ಮೇಲಕ್ಕೆ ಬರುವದು. ಟ್ಯೂಬಿನಲ್ಲಿ ಮೊದಲು ಇದ್ದಷ್ಟು ಕೊಳೆ ನೀರು ಹೊರಗೆ ಬಂದ ಮೇಲೆ ಕುಡಿಯುವ ಒಳ್ಳೆಯ ನೀರು ನಲ್ಲಿಯಲ್ಲಿ ಬರುತ್ತದೆ.

ಇದಕ್ಕೆ ವೆಂಕಟರಾಮಯ್ಯ ಆಗಬಹುದು ಎಂದರು.

ಹೀಗೆ ನಾವು ಮಾತಾಡುತ್ತಿದ್ದಾಗ ಹೊರಗೆ ಹೆಲಿಕ್ಯಾಪ್ಟರ್ ಸದ್ದಾಯಿತು. ಮಾತು ನಿಲ್ಲಿಸಿ, ಎಲ್ಲಾ ಹಜಾರದ ಕಟಾಂಜನದ ಬಳಿ ನಿಂತೆವು. ಹೆಲಿಕ್ಯಾಪ್ಟರ್ ಹಾರುತ್ತಾ ಬರುತ್ತಿತ್ತು. ಮಹಡಿಗಳ ಮೇಲೆ ನಿಂತ ಜನ ಕೈ ಬೀಸುತ್ತಿದ್ದರು. ಕೂಗುತ್ತಿದ್ದರು. ನಮ್ಮ ಮಹಡಿಯ ಸಮೀಪ ಬಂತು. ಅದರಲ್ಲಿ ಕುಳಿತಿದ್ದ ಬಿಳಿಯ ಜುಬ್ಬದ ವ್ಯಕ್ತಿಗಳು ನಮ್ಮನ್ನು ನೋಡುತ್ತ ಅಭಯ ಹಸ್ತ ತೋರಿಸಿ, "ಕೇಮ್ ಛೋ....? ಕೇಮ್ ಛೋ....?" ಎಂದು ಕೂಗಿದರು. ನಾವು ಉತ್ತರ ಹೇಳುವ ಮೊದಲೇ ಹೆಲಿಕ್ಯಾಪ್ಟರ್ ಮುಂದೆ ಸಾಗಿತು.

"ಕೊಂಪೆ ಪ್ರದೇಶಗಳ ಕಡೆಗೇ ಅವರ ಗಮನ ಹೆಚ್ಚು. ಅವರಿಗೆ ಫುಡ್ ಪ್ಯಾಕೆಟ್‌ಗಳನ್ನು ಒದಗಿಸುತ್ತಾರೆ" ಎಂದು ವೆಂಕಟರಾಮಯ್ಯ ಹೇಳಿದಾಗ ಅವರ ಧ್ವನಿಯಲ್ಲಿ ಅಸಮಾಧಾನ ಇತ್ತು.

ಪಾಸ್ಕಲ್‌ರಾವ್ ಅಂಗಿ, ಪಂಚೆ ಬಿಚ್ಚಿ ಚಡ್ಡಿಯಲ್ಲಿ ಸಾಹಸಕ್ಕೆ ಸಿದ್ಧನಾದ. ಅಡಿಗೆ ಮನೆಯಲ್ಲಿ ನಳ ಎಲ್ಲಿದೆ ಎಂದು ತಿಳಿದುಕೊಂಡು ರಾವ್ ಹೊತ್ತಿಸಿದ ಟಾರ್ಚ್ ಹಿಡಿದು ಒಂದೊಂದೆ ಮೆಟ್ಟಲು ಇಳಿದು ಎದೆ ಮಟ್ಟದ ನೀರಿನಲ್ಲಿ ನಿಂತುಕೊಂಡ.

ರಾವ್‌ನ ಸಾಹಸ ನೋಡಲು ನಾವೆಲ್ಲಾ ಮೆಟ್ಟಲ ಬಳಿ ಸೇರಿದ್ದೆವು. ರಾವ್ ಮೂಗು ಹಿಡಿದುಕೊಂಡು ಬಾಯಿಂದ ಮತ್ತೆ ಮತ್ತೆ ಗಟ್ಟಿಯಾಗಿ ಉಸುರೆಳೆದು ಗುಳುಕ್ ಅಂತ ಮುಳುಗಿಬಿಟ್ಟ. ಸೆಕೆಂಡಿನ ಮೇಲೆ ಸೆಕೆಂಡು ಜಾರುತ್ತಿತ್ತು. ಒಂದು ನಿಮಿಷವಾಯಿತು. ಒಂದೂವರೆ ಆಯಿತು. ವೆಂಕಟರಾಮಯ್ಯ ಪರಪರ ತಲೆ ಕೆರೆದುಕೊಂಡರು. ಇಳಾಬೇನ್ ಮುಖ ಹೆದರಿಕೆಯಿಂದ ಬಿಳಿಚಿಕೊಂಡಿತ್ತು. ಇನ್ನರ್ಧ ನಿಮಿಷ ನೋಡಿ ನಾನೂ ನೀರಿಗೆ ಇಳಿಯಬೇಕೆಂದುಕೊಂಡಾಗ ಟಾರ್ಚಿನ ಬೆಳಕು ಕಂಡಿತು. ಮರುಕ್ಷಣವೇ ರಾವ್ ಪ್ರತ್ಯಕ್ಷನಾದ. ಅವನು ಮೂಗು ಅಗಲಿಸಿ ಉಸಿರಾಡುವ ರೀತಿ ಹೆದರಿಕೆ ತರುವಂತಿತ್ತು. ಎರಡು ನಿಮಿಷದ ನಂತರ ಅವನು ಬಲಗೈಯಿಂದ ಎತ್ತಿ ಹಿಡಿದ ರಬ್ಬರ್ ಟ್ಯೂಬ್‌ನಿಂದ ಕರಿಯ ನೀರು ಬಳಬಳ ಸುರಿಯುತ್ತಿತ್ತು. ಐದೇ ನಿಮಿಷದಲ್ಲಿ ಸ್ವಚ್ಛವಾದ ನೀರು ದಂಡಿಯಾಗಿ ಸುರಿಯತೊಡಗಿತು.

ವಿದ್ಯುತ್‌ಚ್ಛಕ್ತಿಯಿಲ್ಲ. ಪೇಪರ್ ಇಲ್ಲ. ಆಕಾಶವಾಣಿ'ಯಲ್ಲಿ ಬರೀ ಗುರ್ ಅಂತ ಸಪ್ಪಳ. ಸಂಜೆ ನಾಲ್ಕು ಗಂಟೆಗೆ ಹಾರಿಬಂದ ಹೆಲಿಕ್ಯಾಪ್ಟರ್‌ನಿಂದ ಲಕ್ಷಾಂತರ ಮುದ್ರಿತ ಚೀಟಿಗಳನ್ನು ಸೂರತ್ ನಗರದ ಮೇಲೆ ಚೆಲ್ಲಿದರು. ಎರಡು ಚೀಟಿಗಳು ನಮ್ಮ ಮಹಡಿಗೂ ತಲುಪಿದವು.

'ಪ್ರವಾಹ ಇಳಿಮುಖವಾಗಿದೆ. ಹೆದರಬೇಡಿ, ನಾವಿದ್ದೇವೆ.'

ಪ್ರವಾಹದ ನೀರು ಮಹಡಿ ಹತ್ತಲಿಲ್ಲವೆಂಬುದು ನಮಗೆ ಸಮಾಧಾನ. ಹಾಲು ಮುಗಿಯಿತು. ಕಾಫಿ ಇಲ್ಲ. ಅಮ್ಮ ಡಿಕಾಕ್ಷನ್ ಮಾಡಿ ಕೊಟ್ಟಳು. ಸೀತೆಗೆ ಇನ್ನೂ ಪೂರ್ತಿ ಜ್ವರ ನಿಂತಿರಲಿಲ್ಲ. ವೆಂಕಟರಾಮಯ್ಯ ಅವಳ ಹಣೆಗೆ ವಿಭೂತಿ ಬಡಿದು, ಬಾಯಿಗೆ ಒಂದು ಚಮಚ ತೀರ್ಥ ಹಾಕಿದರು.

ಆಕಾಶದಲ್ಲಿ ಚಂದ್ರ ಮಂಕಾಗಿದ್ದ. ಅಲ್ಲೊಂದು ಇಲ್ಲೊಂದು ನಕ್ಷತ್ರಗಳು ಕಾಣುತ್ತಿದ್ದವು. ಭಜನೆ ಸಾಗಿತ್ತು. ಸಾಯಿ ಭಗವಾನ್ ಕಾಪಾಡುತ್ತಾನೆ ಎಂದು ಯಜಮಾನರು ಹೇಳುತ್ತಿದ್ದರು.

ಮಾರನೆಯ ದಿನ ಲಕ್ಷ್ಮಿ ಮಂಕಾಗಿದ್ದಳು. ಸೀತೆಗೆ ಪುನಃ ಜ್ವರ. ನಾನು ಕೋಣೆಗೆ ಹೋಗಿ ಮಗುವಿನ ಮೈ ಮುಟ್ಟಿ ನೋಡಿದೆ. ಬಿಸಿಯಾಗಿತ್ತು. ಆದರೆ ಏನು ಮಾಡುವದು ಎಂದು ತೋರಲಿಲ್ಲ.

ಹತ್ತು ಗಂಟೆಯ ಸಮಯ ಎದುರು ಮಹಡಿಯ ಹುಡುಗರು ರಸ್ತೆಯ ಕಡೆ ಬಾಗಿ ನೋಡುತ್ತಾ ಹೋ.... ಹೋ.... ಎಂದು ಗಟ್ಟಿಯಾಗಿ ಕೂಗತೊಡಗಿದರು. ಕುತೂಹಲದಿಂದ ಕಟಾಂಜನದ ಬಳಿ ಓಡಿ ಬಂದೆವು.

ಓ.... ಚಂಚಲ್‌ಪಾಲ್ ಸಿಂಗ್!

ಎರಡು ಡ್ರಮ್ಮಿಗೆ ಹಲಗೆ ಜೋಡಿಸಿ ತೆಪ್ಪದ ಹಾಗೆ ಮಾಡಿಕೊಂಡಿದ್ದ. ಒಂದು ಉದ್ದನೆ ಗಳು ಹಿಡಿದು ನೀರಿನಲ್ಲಿ ನೆಲಕ್ಕೂರಿ ಮೀಟಿಕೊಂಡು ತೆಪ್ಪ ನಡೆಸುತ್ತಿದ್ದ. ತೆಪ್ಪದ ಮೇಲೆ ಒಂದು ರಟ್ಟಿನ ಪೆಟ್ಟಿಗೆ, ಒಂದು ಪ್ಲಾಸ್ಟಿಕ್ ಬಕೆಟ್ ಇಟ್ಟುಕೊಂಡಿದ್ದ. ಅವನ ಮುಖಕ್ಕೆ ಬಿಸಿಲು ಹೊಡೆಯುತ್ತಿತ್ತು. ಕೈ ಅಡ್ಡ ಮಾಡಿಕೊಂಡು ನಮ್ಮನ್ನು ನೋಡುತ್ತಾ "ಮಕ್ಕಳಿಗೆ ಸ್ವಲ್ಪ ಹಾಲು ಬ್ರೆಡ್ಡು" ಎಂದು ಕೂಗಿದ.

ಎದುರು ಮಹಡಿಯಿಂದ ಒಬ್ಬ ಈಜಿಕೊಂಡು ಬಂದು ವಾಟರ್ ಬ್ಯಾಗಿನಲ್ಲಿ ಹಾಲು ತುಂಬಿಸಿಕೊಂಡು ಹೋದ. ರಾವ್ ಮತ್ತು ನಾನು ನೀರಿಗೆ ಇಳಿದೆವು. ಸರ್ದಾರ್ಜಿ ನನ್ನನ್ನು ಗುರ್ತಿಸಿ "ಇಲ್ಲಾ ನಿಮ್ಮ ಮನೆ?" ಎಂದು ಕೇಳಿದ.

ಹೌದು ಅಂತ ತಲೆಯಾಡಿಸಿ "ಇದೇನು ನಿಮ್ಮ ಸಾಹಸ?" ಅಂತ ನಕ್ಕೆ.

"ಪರೋಪಕಾರ. ಕೈಲಾದಷ್ಟು ಸೇವೆ" ಎಂದ. ನಾನು ಲಕ್ಷ್ಮಿಯ ಮಗುವಿನ ಪರಿಸ್ಥಿತಿ ತಿಳಿಸಿದೆ.

"ಓ, ಶೂರ್, ಮಧ್ಯಾಹ್ನ ಡಾಕ್ಟರನ್ನ ಕರ್ಕೊಂಡು ಬರ್ತೀನಿ. ಇಲ್ಲಾ ಔಷಧಿ ತಗೊಂಡ ಬರ್ತೀನಿ" ಎಂದ ರಾವ್ ಟವೆಲ್ಲಿನಲ್ಲಿ ಬ್ರೆಡ್ ಸುತ್ತಿ ತಲೆಗೆ ಸುತ್ತಿಕೊಂಡ. ನಾನು ಹಾಲಿನ ತಿರುಪಿನ ತಂಬಿಗೆಯನ್ನು ಹಿಡಿದುಕೊಂಡೆ. ಈಜಿಕೊಂಡು ಇಬ್ಬರೂ ಹಜಾರಕ್ಕೆ ಬಂದೆವು.

ಮಧ್ಯಾಹ್ನ ಸರ್ದಾರ್ಜಿ ಪುನಃ ಪ್ರತ್ಯಕ್ಷನಾದ. ಡಾಕ್ಟರ್ ಸಲಹೆ ಪಡೆದು ಮಗುವಿಗೆ ಮಾತ್ರೆ ತಂದಿದ್ದ.



ಪಾಸ್ಕಲ್‌ರಾವ್ ಕೊನೆಯ ಸಿಗರೇಟು ಹೊತ್ತಿಸಿದ. ಹತಾಶನಾಗಿ ನಕ್ಕ. ನನಗೂ ಬೇಸರ. ಸಣ್ಣ ಹೆದರಿಕೆ.

ಅಪ್ಪ, ಅಮ್ಮ ಸುಮ್ಮಿ ಬೆಟ್ಟಪ್ಪ, ಫೋರಾ-ನೆನಪಾಗುತ್ತಿದ್ದರು. ಅವರು ಹತ್ತಿರ ಕೂತು ಮಾತಾಡಿದಂತೆ ಭ್ರಮೆಯಾಗುತ್ತಿತ್ತು. ಊರಲ್ಲಿ ಎಷ್ಟು ಗಾಬರಿಯಾಗಿದ್ದಾರೋ.

ಸ್ವಲ್ಪ ಹೊತ್ತಿಗೆ ಮಲಗುವದಕ್ಕೆ ಬಂದ ಹುಡುಗಿಯರೂ ಮಾತೇ ಆಡದೆ ಮೌನವಾಗಿ ಜಮಖಾನ ಬಿಡಿಸಿ ಮಲಗಿಬಿಟ್ಟರು. ಎಲ್ಲರಿಗೂ ಒಂಟಿತನದ ದಿಗಿಲು. ಸಾವಿನ ಭಯ ಕವಿಯುತ್ತಿದೆಯೇನೋ ಅನಿಸಿತು. ಪ್ರವಾಹ ಒಮ್ಮೆಗೆ ಹೆಚ್ಚಿ ನಮ್ಮ ಮೇಲೆ ಹತ್ತು ಅಡಿ ನೀರು ತಣ್ಣಗೆ ನಿಂತುಬಿಟ್ಟರೆ ಎನ್ನಿಸಿತು.

ಒಂದು ಹೊತ್ತಿನಲ್ಲಿ ವೆಂಕಟರಾಮಯ್ಯ ಗಟ್ಟಿಯಾಗಿ ಕೂಗುವದಕ್ಕೆ ಶುರು ಮಾಡಿದರು. ಭಯದಿಂದ ನಾವು ಧಿಡೀರನೆ ಎದ್ದು ಕೂತೆವು.

"ಕೆಳಗೆ ಬನ್ನಿ, ಕೆಳಗೆ ಬನ್ನಿ" ಎಂದು ಯಜಮಾನರು ಕೂಗಿದರು.

ಕೆಲವೇ ನಿಮಿಷಗಳಲ್ಲಿ ಇಡೀ ಸೂರತ್ತೇ ಎಚ್ಚರಗೊಂಡಂತೆ ಗಟ್ಟಿಯಾದ ಬೊಬ್ಬೆ ಶುರುವಾಯಿತು. ಪ್ರವಾಹ ಇಳಿಯುತ್ತಿತ್ತು, ಉತ್ಸಾಹದಿಂದ ಎಲ್ಲ ಕಿರುಚಿಕೊಳ್ಳುತ್ತಿದ್ದರು.

ನಾವು ಕೆಳಗೆ ಬಂದೆವು. ವೆಂಕಟರಾಮಯ್ಯ ಸಾಯಿ ಬಾಬಾರ ಫೋಟೋಕ್ಕೆ ಪೂಜೆ ಮಾಡಿದರು. ನಾವು ಟಾರ್ಚ್ ಹಿಡಿದು ನೋಡಿದೆವು. ಕ್ಷಣ ಕ್ಷಣಕ್ಕೆ ನೀರಿನ ಮಟ್ಟ ತಗ್ಗುತ್ತಿತ್ತು. ಹತ್ತೇ ನಿಮಿಷಗಳಲ್ಲಿ ಐದು ಮೆಟ್ಟಲು ನೀರು ಇಳಿಯಿತು.

ಬಾಗಿಲಿನಿಂದ ಕಿಟಕಿಗಳಿಂದ ನೀರು ಬೀದಿಗೆ ನುಗ್ಗುತ್ತಿತ್ತು.

ಬೆಳಗಾದಾಗ ಕಳೆದುಹೋಗಿದ್ದ ಸೂರತ್ತಿನ ರಸ್ತೆಗಳು ಕಾಣುತ್ತಿದ್ದವು. ಮಹಡಿಯ ಮೆಟ್ಟಲುಗಳ ಮೇಲೆಲ್ಲಾ ಎರಡಿಂಚು ದಪ್ಪ ಕಪ್ಪು ಜೇಡಿ ಮಣ್ಣು ಕೂತಿತ್ತು. ವೆಂಕಟರಾಮಯ್ಯ ಗಟ್ಟಿಯಾಗಿ ಪಾದವೂರುತ್ತಾ ಸಲಿಕೆ, ಹೆಂಚು ತೆಗೆದುಕೊಂಡು ಬಂದರು. ನಾನು, ರಾವ್ ಎಲ್ಲರೂ ಸೇರಿ ಮಣ್ಣನ್ನು ತೆಗೆದು ಹಾಕಿದೆವು. ಮನೆಯೆಲ್ಲಾ ಸ್ವಚ್ಛ ಮಾಡಿದೆವು. ಊಟ ಮಾಡಿದೆವು. ಧೈರ್ಯವಾಗಿ ಕಾಲೂರುವಂತಾಯಿತು.



ಸೀತೆಗೆ ಜ್ವರ ಕಮ್ಮಿಯಾಗಿತ್ತು.

"ಅವರು ಎಷ್ಟು ಗಾಬರಿಯಾಗಿದ್ದಾರೋ, ನಾನು ಹೋಗಬೇಕು" ಎಂದು ಲಕ್ಷ್ಮಿ ಅನ್ನುತ್ತಿದ್ದಳು.

ಹೊರಗೆ ರಸ್ತೆ ನಡೆಯುವದಕ್ಕೆ ಬರುವಂತಿರಲಿಲ್ಲ. ರಸ್ತೆಯ ಮೇಲೆ ಜೇಡಿ ಮಣ್ಣು ಹೆಪ್ಪುಗಟ್ಟಿತ್ತು. ಸಂಜೆಯ ತನಕ ಆ ಬೀದಿಯ ಗಂಡಸರೆಲ್ಲಾ ಸೇರಿಕೊಂಡು ರಸ್ತೆಯ ಮಧ್ಯೆ ಬೈತಲೆಯ ಹಾಗೆ ಉದ್ದಕ್ಕೂ ಕೆಸರು ಎತ್ತಿ ಹಾಕಿದರು. ಈ ಕೆಲಸ ಮಾರನೇ ದಿನವೂ ನಡೆಯಿತು. ಮಧ್ಯಾಹ್ನದ ವೇಳೆಗೆ ಕೆಲಸ ಒಂದು ಹಂತಕ್ಕೆ ಬಂದು ಸ್ತ್ರೀಯರೂ ರಸ್ತೆಗೆ ಕಾಲಿಡುವಂತಾಯಿತು.

ರಾತ್ರಿ ವಿದ್ಯುಚ್ಛಕ್ತಿಯ ದೀಪಗಳು ಪುನಃ ಬೆಳಗಿದವು. ನಾವೆಲ್ಲಾ ಹರಟೆ ಹೊಡೆಯುತ್ತ ಕೂತಿದ್ದವು. ಆ ಹೊತ್ತಿನಲ್ಲಿ ರಸ್ತೆಯಲ್ಲಿ ಜನ ಹುಚ್ಚರಂತೆ ತಿರುಗಾಡುತ್ತಿದ್ದರು.



ನಮ್ಮ ಮನೆಯ ಮುಂಬಾಗಿಲು ಬಡಿಯುತ್ತಾ ಯಾರೋ "ಸಾರ್, ಸಾರ್" ಎಂದು ಕೂಗಿದರು. "ಅವರು ಬಂದರು" ಎಂದು ಲಕ್ಷ್ಮಿ ಧಡಕ್ಕನೆ ಎದ್ದಳು.

ಬೆಟ್ಟಪ್ಪ ಕಂಡಾಗ ಲಕ್ಷ್ಮಿ ಗಟ್ಟಿಯಾಗಿ ಅಳತೊಡಗಿದಳು. ನಾವೆಲ್ಲಾ ಇರೋದು ಅವರಿಗೆ ಮರೆತು ಹೋಯಿತು. ಬೆಟ್ಟಪ್ಪ ಟವೆಲ್ಲಿನಲ್ಲಿ ಲಕ್ಷ್ಮಿಯ ಕಣ್ಣೀರು ಒರೆಸಿದ. ಮಕ್ಕಳು ಅವನ ಕಾಲು ತಬ್ಬಿಕೊಂಡವು.

"ಸ್ವಾಮಿ, ನೀವು ನನ್ನ ಸಂಸಾರ ಕಾಪಾಡಿದಿರಿ" ಎಂದು ಬೆಟ್ಟಪ್ಪ ವೆಂಕಟರಾಮಯ್ಯನವರಿಗೆ ದೀರ್ಘ ದಂಡ ನಮಸ್ಕಾರ ಹಾಕಿದ. ಯಜಮಾನರು ಅದನ್ನು ಒಪ್ಪಿಕೊಂಡ ಶೀವಿಯಲ್ಲಿ "ಎಲ್ಲಾ ಭಗವಾನರ ಕೃಪೆ" ಎಂದಾಗ ನನಗೆ ಅಸಹ್ಯವಾಯಿತು.

"ಅಪ್ಪಣೆ ಕೊಟ್ಟರೆ ನಾವು ಮನೆಗೆ ಹೊರಡುತ್ತೇವೆ." ಎಂದು ಬೆಟ್ಟಪ್ಪ ಹೇಳಿದ. "ಬೆಳಗ್ಗೆ ಹೋಗುವಿರಂತೆ," ಎಂದು ವೆಂಕಟರಾಮಯ್ಯ ಉಪಚಾರ ಮಾಡಿದರು.

"ಮತ್ತೆ ಬರೋದು ಇದ್ದೇ ಇದೆ" ಎನ್ನುತ್ತಾ ಬೆಟ್ಟಪ್ಪ ಹೊರಟೇಬಿಟ್ಟ. ಲಕ್ಷ್ಮಿ ಅವನ ಹಿಂದೆ ಹೋಗಿಬಿಟ್ಟಳು. ಒಂದು ಮಾತು ನನಗೆ ಹೇಳಬಹುದಿತ್ತು. ಬೆಟ್ಟಪ್ಪನನ್ನು ಕಂಡ ಉದ್ವಿಗ್ನತೆಯಲ್ಲಿ ಮರೆತಳು. ನಮ್ಮ ಮನೆಯ ಸುತ್ತ ಆವರಿಸಿದ್ದ ಪ್ರವಾಹ ಚರಂಡಿಗಳಲ್ಲಿ ನುಗ್ಗುತ್ತಾ ತಾಪಿಯ ಆಳಕ್ಕೆ ಸರಿಯುತ್ತಿತ್ತು. ಎಲ್ಲ ಕಳೆದುಕೊಂಡಂತೆ ಬಹಳ ಬೇಸರವಾಗಿ ನಾನು ರೂಮಿಗೆ ಹೋಗಿ ಮಲಗಿಬಿಟ್ಟೆ.



ಮಾರನೆಯ ದಿನ ಪೇಪರುಗಳು ನಮಗೆ ಸಿಕ್ಕವು. ಪ್ರವಾಹದ ಅನಾಹುತ ತೋರಿಸುವ ಫೋಟೋಗಳು, ಸುದ್ದಿಗಳು ಪೇಜು ತುಂಬಾ ಇದ್ದವು.

ಹತ್ತು ಗಂಟೆಯ ಮೇಲೆ ಕಾಲೇಜಿನ ಬಳಿ ಹೋದೆ. ಪ್ರಿನ್ಸಿಪಾಲ್ ಕಾಲೇಜಿಗೆ ಒಂದು ತಿಂಗಳ ರಜೆ ಅನೌನ್ಸ್ ಮಾಡಿದ್ದರು. ಕಾರಿಡಾರಿನ ಒಂದು ಮೂಲೆಯಲ್ಲಿ ಟೆಲಿಗ್ರಾಂಗಳು ರಾಶಿಯಾಗಿ ಬಿದ್ದಿದ್ದವು. ಅವೆಲ್ಲಾ ಪಾಲಕರಿಂದ ಮಕ್ಕಳಿಗೆ ಬಂದ ಟೆಲಿಗ್ರಾಂಗಳು.

ನಾನು ಊರಿಗೆ ಹೋಗಿ ಬರುವುದೆಂದು ನಿರ್ಧರಿಸಿದೆ. ಮೂರು ದಿನಗಳಲ್ಲಿ ರೈಲ್ವೆ ಮಾರ್ಗವನ್ನು ಸರಿಪಡಿಸಲಾಗುವದು ಎಂದು ಪೇಪರ್‌ನಲ್ಲಿ ಬಂದಿತ್ತು. ಮುಂದಿನ ವಾರ ನಾನು ಊರಿಗೆ ಹೋಗಿಬರುತ್ತೇನೆಂದು ವೆಂಕಟರಾಮಯ್ಯನವರಿಗೆ ಹೇಳಿದಾಗ,

"ಏನವಸರ? ಹದಿನೈದು ದಿನ ಇದ್ದು ಹೋಗಿ. ನಮ್ಮ ಪ್ರೀತಿಯ ಫಿಯಾನ್ಸಿಯನ್ನ ನೋಡಲ್ವೆ?" ಎಂದರು. ವೆಂಕಟರಾಮಯ್ಯ ಆ ಮಾತು ಹೇಳಿದಾಗ ಒಂದು ನಿರ್ಧಾರ ನನ್ನ ಮನಸ್ಸಿನಲ್ಲಿ ರೂಪುಗೊಳ್ಳುತ್ತಿತ್ತು. ಆ ನಿರ್ಧಾರವನ್ನು ನನ್ನ ಮತ್ತು ಪ್ರೀತಿಯ ನಿಜಕ್ಕೆ ಒರೆಗಲ್ಲಾಗಿ ಭಾವಿಸಬೇಕು. ಕಟುವಾದ, ಅಪ್ರಿಯವಾದ, ಆಸ್ಫೋಟಗೊಳ್ಳುವ ಸತ್ಯವನ್ನು ಎದುರಿಸಬೇಕು ಎಂದುಕೊಂಡೆ.

ಊಟ ಮಾಡುವಾಗ ಪ್ರೀತಿಗೆ ಹೇಳಿದೆ– "ನಿನ್ನ ನೋಟ್ಸ್ ನನ್ನ ಕಡೆ ಇದೆ. ಊಟ ಮಾಡಿ ಮೇಲೆ ಬರುತ್ತೀಯಾ?" ಪ್ರೀತಿ ಕುತೂಹಲದಿಂದ ನೋಡಿ "ಶ್ಯೂರ್" ಎಂದಳು.

ಅವಳು ಬಂದಾಗ ನನ್ನ ಕೋಣೆಯ ಬಾಗಿಲು ಮುಂದೆ ಮಾಡಿದೆ. ಪ್ರೀತಿ ಶಾಂತವಾಗಿ ಕುಳಿತಿದ್ದಳು. ನಾನು ಮಾತು ಶುರು ಮಾಡಿದೆ. ಬಹಳ ನಿರ್ಭಾವುಕವಾಗಿ ನಿಶ್ಚಿತವಾಗಿ ಮಾತಾಡಬೇಕೆಂದು ಹಟ ತೊಟ್ಟಿದ್ದೆ.

"ನೋಡು ಪ್ರೀತಿ, ನನಗೆ ಕಣ್ಣು ಮುಚ್ಚಾಲೆ ಏಕೋ ತುಂಬಾ ಹಿಂಸೆ ಆಗ್ತಾ ಇದೆ. ನಾವಿಬ್ರೂ ಪರಸ್ಪರ ಮೆಚ್ಚಿರೋದೇ ನಿಜ್ವಾದ್ರೆ.... ನಿಜ್ವಾದ್ರೆ.... ಯಾರೂ ನಮ್ಮ ನಡುವೆ ಬರೋಕಾಗಲ್ಲ. ನಮ್ಮ ಮನೆಯವರು, ನಿಮ್ಮ ಮನೆಯವರು ಬರ್ಲಿ ಬಿಡ್ಲಿ, ನಮ್ಮ ದಾರಿ ನಾವು ಹಿಡಿಯೋಣ. ನಾವು ಧೈರ್ಯ ಮಾಡ್ಲೇ ಬೇಕು. ಇಲ್ಲಾ ಸುಳ್ಳು ಬದುಕು ಬದುಕ್ಬೇಕು. ಮನಸ್ಸು ಬಿಚ್ಚಿ ಹೇಳ್ಬಿಡು."

ಪ್ರೀತಿಯ ಮುಖ ಗಂಭೀರವಾಗಿತ್ತು, ಅವಳಿಗೆ ಅಸಹಜವಾದ ಗಂಭೀರವಾದ ಮುಖ.

"ಮಾತಾಡು. ಅನ್ಸಿದ್ದು ಹೇಳು" ಎಂದೆ.

ಪ್ರೀತಿ ತಲೆ ತಗ್ಗಿಸಿ, "ನಿಮ್ಮ ಕೋರ್ಸ್ ಮುಗ್ದಿಲ್ಲ" ಎಂದಳು.

"ಬೇಡ. ಇಬ್ಬರ ಜೀವ್ನಕ್ಕೆ ಆಗೋಷ್ಟು ಹೇಗೋ ಸಂಪಾದ್ನೆ ಮಾಡಬಹುದು. ನನ್ನ ಮೆರಿಟ್‌ಗೆ ಒಂದು ಗುಮಾಸ್ತೆ ಕೆಲ್ಸ ಸಿಗೋದು ತೀರ ಕಷ್ಟ ಆಗ್ಲಾರ್ದು. ವೋರಾನೂ ಸಹಾಯ ಮಾಡಬಹುದು. ಅವ ತಂದೆ ತುಂಬ ಇನ್‌ಫ್ಲುಎನ್ಶಿಯಲ್!"

"ನಿಮ್ಮ ತಾಯಿ ತಂದೆ ಮನೇನ ನಂಗೋಸ್ಕರ ದೂರ ಮಾಡ್ಬೇಕಾಗುತ್ತೆ."

"ನೀನು ಮಾಡ್ಕೊಳ್ಳೋಕೆ ಸಿದ್ಧ ಇರ್ಬ್ಬಾಗ ನಾನೇಕೆ ಮಾಡ್ಕೋಬಾರ್ದು? ನಮ್ಮ ಬದುಕು ನಮ್ಗಾಗಿ ಹೊರತು ಬೇರೆಯವರಿಗಾಗಿ ಅಲ್ಲ, ಅಲ್ವಾ?"

"ಸ್ವಲ್ಪ ಟೈಂ ಕೊಡಿ, ನಾನು ಯೋಚ್ನೆ ಮಾಡಿ ಹೇಳ್ತೀನಿ."

ಪ್ರೀತಿ ಹಾಗೆ ಹೇಳಿದಾಗಲೇ ಅವಳು ಏನು ಹೇಳಬಹುದೆಂದು ನನಗೆ ತಿಳಿದು ಹೋಯಿತು. ಮಾರನೆ ದಿನ ಪ್ರೀತಿ ಒಂದು ಚೀಟಿ ಕೊಟ್ಟು "ಪ್ಲೀಸ್ ಓದಿ ಹರಿದು ಬಿಡಿ" ಎಂದಳು. ಅವಳು ದುಃಖಿತಳಾದಂತಿತ್ತು.

ಪ್ರೀತಿ ನನ್ನ ಹಿತಕ್ಕಾಗಿಯೇ ನನ್ನಿಂದ ದೂರವಾಗಿರಲು ನಿಶ್ಚಯಿಸಿದ್ದಳು. ನನ್ನ ವ್ಯಾಸಂಗ ಅರ್ಧಕ್ಕೆ ನಿಲ್ಲುವದು ಅದರಿಂದಾಗಿ ನನ್ನ ಭವಿಷ್ಯ ಹಾಳಾಗುವದು ನನ್ನ ಹಿರಿಯರಿಗೆ ನಿರಾಶೆಯಾಗುವದು ಅವಳಿಗೆ ಸಹಿಸದು. ಅವಳು ಎಲ್ಲಿದ್ದರೂ (ಅಮೇರಿಕಾದಲ್ಲೇ ಇದ್ದರೂ) ನನ್ನನ್ನು ಮರೆಯುವದಿಲ್ಲ. ಸದ್ಯಕ್ಕೆ ಸಿಹಿ ಮುತ್ತುಗಳೊಂದಿಗೆ ಮುಕ್ತಾಯ.

ನಾನು ಕಹಿಯಾಗಿ ನಕ್ಕು ವೋರಾನ ಮುಂದೆ ಚೀಟಿಯನ್ನು ಹಿಡಿದೆ.

ವೋರಾ, "ಚೀರಪ್ ಬಾಯ್, ಬೇಜಾರು ಮಾಡ್ಕೊಂಡ್ರೆ ಏನ್ ಪ್ರಯೋಜ್ನ? ಪ್ರೀತಿ ನಾನಂದ್‌ಕೊಂಡದ್ದಕ್ಕಿಂತ ಜಾಣೆ. ಅಂಥವರನ್ನೆ ನಾನು ಮೆಚ್ಚೋದು ಕೂಡ. ನಿನ್ನಂಥ ಬುದ್ದೂಗಳನ್ನಲ್ಲ. ಈ ದೇಶದಲ್ಲಿ ಪ್ರೀತಿ, ಪ್ರಣಯ ಇಂಥ ವಿಷಯಗಳಲ್ಲಿ ಹುಡುಗ್ರಗಿಂತ ಹುಡುಗಿಯರೇ ತುಂಬಾ ಜಾಣ್ರು ತಿಳ್ಕೊ. ಅವರ ಎಲ್ಲ ಭಾವ್ನೆಗಳು ಆರ್ಥಿಕ ಭದ್ರತೆಯನ್ನು ಭವಿಷ್ಯದ ಹಿತವನ್ನು ಅವಲಂಬಿಸಿರುತ್ತವೆ. ಮದುವೆ ಹೇಗೆ ಒಂದು ಲಾಭದ ವ್ಯವಹಾರ ಆಗ್ಬೇಕು ಅನ್ನೋದು ಇಂಡಿಯಾದ ಹುಡುಗರಿಗಿಂತ ಹುಡುಗಿಯರಿಗೇ ಚೆನ್ನಾಗಿ ಗೊತ್ತು...."

"ವೋರಾ ಪ್ಲೀಸ್ ನಿನ್ನ ಭಾಷಣ ನಿಲ್ಸು."



ಊರಿಗೆ ಹೊಗುವ ಹಿಂದಿನ ದಿನ ತಲುಪುವಂತೆ ಚೆಟ್ಟಪ್ಪನಿಗೆ ಒಂದು ಪತ್ರ ಬರೆದು ನಾನು ಬೆಂಗಳೂರಿಗೆ ಹೊರಟದ್ದೇನೆ ಅಂತ ತಿಳಿಸಿದೆ. ನಿಲ್ದಾಣಕ್ಕೆ ನನ್ನನ್ನು ಕಳಿಸುವದಕ್ಕೆ ಪಾಸ್ಕಾಲ್‌ರಾವ್ ಮತ್ತು ವೋರಾ ಬಂದಿದ್ದರು. "ನಾನೂ ಇಳಾ ಮುಂದಿನ ವಾರ ಊರಿಗೆ ಹೊರಟದ್ದೇವ ಇನ್ವಿಟೇಶನ್ ಕಳಿಸ್ತೇನೆ, ನೀವು ಖಂಡಿತ ಬರ್ಬೇಕು" ಅಂತ ಪಾಸ್ಕಾಲ್‌ರಾವ್ ಹೇಳಿದ.

ವೋರಾ ನಕ್ಕು ನನ್ನ ಮುಖ ನೋಡಿ "ನೀವು ಇನ್ವಿಟೇಶನ್ ಕಳಿಸೋದು ಯಾವಾಗ?" ಅಂತ ಕೇಳಿದ.

ಪ್ರೀತಿಯ ಮಾತು ನೆನಪಾಗಿ "ನೀವು ಕಳಿಸಿದ ದಿನವೇ" ಅಂತ ಹೇಳಿದೆ.

ಇನ್ನೇನು ರೈಲು ಹೊರಡಬೇಕು ಎನ್ನುವಾಗ ಚೆಟ್ಟಪ್ಪ ಮತ್ತು ಲಕ್ಷ್ಮಿ ಮಕ್ಕಳ ಕೈ ಹಿಡಿದುಕೊಂಡು ನಾನು ಕೂತಿದ್ದ ಡಬ್ಬಿಯ ಬಳಿಗೆ ಓಡುತ್ತಾ ಬಂದರು. ಚೆಟ್ಟಪ್ಪ, "ನೀವು ಅಂಗಡಿ ಹತ್ತಿರ ಬರ್ಲೇ ಇಲ್ವಲ್ಲಾ, ಒಂದು ಗಂಟೆಯಿಂದ ನಾವು ಕಾಯ್ತಾ ಇದೀವಿ" ಅಂದ.

"ನಾನು ಬರೋದು ಲೇಟಾಯ್ತು. ಬಂದೋನೆ ರೈಲು ಹತ್ತಿಬಿಟ್ಟೆ" ಎಂದು ಸುಳ್ಳು ಹೇಳಿದೆ.

ಲಕ್ಷ್ಮಿ ಒಂದು ಪುಟ್ಟ ಚೀಲ ಕೈಗೆ ಕೊಟ್ಟಳು. "ದಾರಿಗೆ ಇಟ್ಟುಕೊಳ್ಳಿ" ಎಂದಳು.

ರೈಲು ಚಲಿಸುತ್ತಿದ್ದಾಗ ಎಲ್ಲಾ ಕೈ ಬೀಸುತ್ತಿದ್ದರು. ಮಕ್ಕಳು "ಮಾಮಾ ಟಾಟಾ" ಎಂದು ಕೂಗುತ್ತಿದ್ದರು. ನಾನು ಸ್ಪಷ್ಟವಾಗಿ ನೋಡಲಿಲ್ಲ. ಆದರೂ ಲಕ್ಷ್ಮಿಯ ಕಣ್ಣಲ್ಲಿ ನೀರು ತುಂಬಿದಂತೆ ಕಂಡಿತು.

ನಮ್ಮ ಬಂಡಿ ಬಡಾಪೂಲನ್ನು ದಾಟ ಹೋಗಿರಬೇಕು. ಕಿಟಕಿಯಲ್ಲಿ ಬಗ್ಗಿ ನೋಡಿದೆ.

ತಾಪಿ ಆಳಕ್ಕೆ ಇಳಿಯುತ್ತಿದ್ದಳು. ಕ್ಷಣಕ್ಷಣಕ್ಕೆ ದೂರವಾಗುತ್ತಿದ್ದಳು. ●

ಆರೋಗ್ಯಮಂಗಳ




● ಡಾ. ಡಿ.ಕೆ. ಮಹಾಬಲರಾಜು,
'ಸಹ್ಯಾದ್ರಿ' ನಂ. ೧೦೫೩, ಮೊದಲನೆಯ ಮುಖ್ಯರಸ್ತೆ,
ನಾಲ್ಕನೆಯ ಅಡ್ಡರಸ್ತೆ, ವಿನೋಬಾನಗರ
ದಾವಣಗೆರೆ-೫೭೭೦೦೪

# ಬೊಜ್ಜು ಉಳ್ಳವರಿಗೆ ಬಿಜ್ಜ ಮಾತುಗಳು

ಬೊಜ್ಜು ಒಂದು ಕಾಯಿಲೆಯಲ್ಲ, ಇದು ದೇಹವನ್ನು ಹಲವಾರು ಮರಣಾಂತಕ ರೋಗಗಳು ಆಕ್ರಮಿಸಲಿವೆ ಎಂದು ಎಚ್ಚರಿಸುವ ರಣಕಹಳೆ. ಸಾವು ಸಮೀಪವಾಗುತ್ತಿದೆ ಎಂಬುದನ್ನು ಮುಂಚಿತವಾಗಿಯೆ ಸೂಚಿಸುವ ಮರಣ ಮೃದಂಗ.

ನಮ್ಮ ಆರೋಗ್ಯ ಮತ್ತು ಆಯುಷ್ಯ ಬೊಜ್ಜನ್ನೇ ಬಹಳವಾಗಿ ಅವಲಂಬಿಸಿಕೊಂಡಿರುವುದರಿಂದ, ಬೊಜ್ಜಿನವರು ತಮ್ಮ ಬೊಜ್ಜನ್ನು ಕರಗಿಸಲು, ಬೊಜ್ಜಿಲ್ಲದವರು ತಮಗೆ ಬೊಜ್ಜುಬಾರದಂತೆ ಎಚ್ಚರವಹಿಸಿ ಆರೋಗ್ಯ ಕಾಪಾಡಿಕೊಳ್ಳಲು ಇಂದೇ ಸೂಕ್ತ ಸಮಯ. ಆದ್ದರಿಂದ ಬೊಜ್ಜಿನ ಬಗ್ಗೆ ಸರಿಯಾಗಿ ತಿಳಿದುಕೊಂಡಿರುವುದು ಅತ್ಯಗತ್ಯ.

ದೇಹದ ಅವಶ್ಯಕತೆಯನ್ನು ಮೀರಿ ಶೇಖರಗೊಂಡ ಕೊಬ್ಬಿನಿಂದ ಬೊಜ್ಜು ಉಂಟಾಗುತ್ತದೆ. ಸತ್ವಹೀನವಾಗಿ ಬೆಳೆದ ದೇಹದಲ್ಲಿ ಕೊಬ್ಬೇ ಹೆಚ್ಚಾಗಿ ತುಂಬಿಕೊಂಡಿರುತ್ತದೆ.

ದೇಹದಲ್ಲಿ ಕೊಬ್ಬು ಎರಡು ವಿಧದಲ್ಲಿ ಸಂಗ್ರಹವಾಗಬಲ್ಲದು. ಮೊದಲನೆಯ ರೀತಿಯಲ್ಲಿ ಹೆಚ್ಚು ಕೊಬ್ಬು ತುಂಬುವುದರಿಂದ ಕೊಬ್ಬಿನ ಜೀವಕಣಗಳ ಗಾತ್ರ ಹೆಚ್ಚುತ್ತಾಹೋಗುತ್ತದೆ. ಎರಡನೆಯ ವಿಧದಲ್ಲಿ ಹೆಚ್ಚಿನ ಕೊಬ್ಬನ್ನು ಸಂಗ್ರಹಿಸಿಡಲು ಕೊಬ್ಬಿನ ಜೀವಕಣಗಳ ಸಂಖ್ಯೆಯೇ ಹೆಚ್ಚಾಗಿ ಬಿಡುತ್ತದೆ. ಈ ವಿಧದಲ್ಲಿ ಸಂಗ್ರಹಗೊಂಡ ಕೊಬ್ಬನ್ನು ಕರಗಿಸುವುದು ಹೆಚ್ಚು ಪ್ರಯಾಸಕರ.

## ನೀವು ಬೊಜ್ಜಿನವರೆ?

ನಿಮಗೆ ಬೊಜ್ಜಿದೆಯೆ ಅಥವಾ ಇಲ್ಲವೆ? ಎಂಬುದನ್ನು ತಿಳಿಯಲು ಬಹಳ ದೂರ ಹೋಗಬೇಕಿಲ್ಲ, ನಿಮ್ಮ ಕನ್ನಡಿಯೇ ಅದನ್ನು ನಿಮಗೆ ತಿಳಿಸಬಲ್ಲದು. ನಿಮ್ಮ ಆಪ್ತರೂ ಇದನ್ನು ಸುಲಭವಾಗಿ ಗುರುತಿಸಬಲ್ಲರು. ಎಲ್ಲಕ್ಕಿಂತ ಮೊದಲು ನಿಮಗೇ ಇದರ ಅನುಭವವಾಗುವುದು. ಆದರೂ ಬೊಜ್ಜಿರುವುದನ್ನು ನಿಖರವಾಗಿ ತಿಳಿಯಲು ಒಂದು ಸುಲಭವಾದ ವಿಧಾನವಿದೆ.

ಆರೋಗ್ಯವಂತ ವಯಸ್ಕರ ದೇಹದ ತೂಕ ಅವರ ಎತ್ತರಕ್ಕನುಗುಣವಾಗಿರಬೇಕು.

ನಿಮ್ಮ ಎತ್ತರವನ್ನು ಸೆಂಟಿಮೀಟರುಗಳಲ್ಲಿ ತಿಳಿದು, ಅದರಲ್ಲಿ ನೂರನ್ನು ಕಳೆಯಿರಿ. ಉಳಿದ ಶೇಷವೇ ಕಿಲೋಗ್ರಾಮುಗಳಲ್ಲಿ ನಿಮಗಿರಬೇಕಾದ ಸರಿಯಾದ ತೂಕ. ಉದಾಹರಣೆಗೆ ರವಿಯ ಎತ್ತರ ೫ ಅಡಿ, ೪ ಅಂಗುಲ ಇದೆಯೆಂದರೆ ಅವನ ಎತ್ತರ ೧೬೦ ಸೆಂಟಿಮೀಟರುಗಳಷ್ಟು ಎಂದಾಯಿತಲ್ಲವೆ? ಇದರಲ್ಲಿ ನೂರನ್ನು ಕಳೆದಾಗ ಉಳಿವ ಶೇಷ ೬೦. ಆದುದರಿಂದ ರವಿಗೆ ಇರಬೇಕಾದ ಸರಿಯಾದ ತೂಕ ೬೦ ಕಿಲೋ. ಇದೇ ರೀತಿ ನಿಮಗಿರಬೇಕಾದ ತೂಕವನ್ನು ತಿಳಿಯಿರಿ. ಈ ಪ್ರಮಾಣಕ್ಕಿಂತ ನಿಮ್ಮ ತೂಕ ಶೇಕಡಾ ಹತ್ತರಷ್ಟು ಹೆಚ್ಚಾಗಿದ್ದರೆ ನೀವು ಬೊಜ್ಜಿನವರೆಂದೇ ಅರ್ಥ. ದೇಹದ ತೂಕ ಶೇಕಡಾ ಇಪ್ಪತ್ತಕ್ಕಿಂತ ಹೆಚ್ಚಾಗಿದ್ದಲ್ಲಿ ನೀವೀಗಾಗಲೇ ಸ್ಥೂಲಕಾಯರಾಗಿದ್ದೀರಿ ಎನ್ನುವುದರಲ್ಲಿ ಸಂಶಯವಿಲ್ಲ.

ಮುಂದುವರೆದ ದೇಶಗಳಲ್ಲಿ ಶೇಕಡಾ ೨೦-೪೦ ಜನರಿಗೆ ಬೊಜ್ಜಿದೆ. ಹಾಗೆಂದ ಮಾತ್ರಕ್ಕೆ ಬೊಜ್ಜು ಶ್ರೀಮಂತರ ಸಮಸ್ಯೆ ಎಂದು ತಿಳಿಯಬೇಲ್ಲ. ಭಾರತದಲ್ಲೂ ಈಗ ಕೊಬ್ಬಿಗರ ಸಂಖ್ಯೆ ಏರುತ್ತಿದೆ. ಅಧಿಕ ರಕ್ತದ ಒತ್ತಡ, ಹೃದಯಾಘಾತ, ಸಕ್ಕರೆ ಕಾಯಿಲೆ, ಪಾರ್ಶ್ವಾಘಾತ, ಅಕಾಲಿಕ ಮರಣ ಇವುಗಳಿಗೆ ಬೊಜ್ಜೇ ಒಂದು ಪ್ರಮುಖ ಕಾರಣವಾಗಿದೆ. ಇತ್ತೀಚೆಗೆ ಮಕ್ಕಳೂ ಸ್ಥೂಲಕಾಯರಾಗುತ್ತಿದ್ದಾರೆ. ಗಂಡಸರು ೨೯ ರಿಂದ ೩೫ರ ವಯೋಮಿತಿಯಲ್ಲಿ ಬೊಜ್ಜನ್ನು ಬೆಳೆಸಿಕೊಂಡರೆ ಹೆಂಗಸರು ೪೫-೫೦ರ ಅವಧಿಯಲ್ಲಿ ಬೊಜ್ಜಿನವರಾಗುವುದು ಸಾಮಾನ್ಯ. ಪಟ್ಟಣಿಗರನ್ನೇ ಹೆಚ್ಚಾಗಿ ಪೀಡಿಸುವ ಬೊಜ್ಜು ಈಗ ಹಳ್ಳಿಗರನ್ನೂ ಕಾಡುತ್ತಿದೆ.

## ಕಾರಣಗಳು

ಬೊಜ್ಜು ಉಂಟಾಗಲು ಹಲವಾರು ಪ್ರೇರಕ ಅಂಶಗಳಿರಬಹುದಾದರೂ ಬಹಳಷ್ಟು ಜನರ ಬೊಜ್ಜಿಗೆ ಕಾರಣಗಳು ಮಾತ್ರ ಎರಡೇ:

೧) ಹೆಚ್ಚು ತಿನ್ನುವುದು.

೨) ಕಡಿಮೆ ಶ್ರಮಪಡುವುದು.

ಇದನ್ನೇ ವೈಜ್ಞಾನಿಕ ಪರಿಭಾಷೆಯಲ್ಲಿ ಹೇಳುವುದಾದರೆ ಆಹಾರದ ಮೂಲಕ ದೊರೆಯುವ ಶಕ್ತಿಯು, ದೈಹಿಕ ಶ್ರಮದಿಂದ ವ್ಯಯವಾಗುವ ಶಕ್ತಿಗಿಂತ ಹೆಚ್ಚಾದಾಗ ದೇಹದಲ್ಲಿ ಕೊಬ್ಬು ಸಂಗ್ರಹಗೊಳ್ಳತೊಡಗುತ್ತದೆ.

## ಹೆಚ್ಚು ತಿನ್ನುವುದೇಕೆ?

ಹೆಚ್ಚು ತಿಂದು ದಪ್ಪಗಾಗುವುದು ಆರೋಗ್ಯಕರ ಎಂಬ ತಪ್ಪು ತಿಳುವಳಿಕೆಯಿಂದ ಅನೇಕರು ಕಂಠಪೂರ್ತಿ ತಿಂದರೆ ಇನ್ನು ಕೆಲವರಿಗೆ ಹೆಚ್ಚು ತಿನ್ನುವುದೇ ಅಭ್ಯಾಸವಾಗಿಬಿಟ್ಟಿರುತ್ತದೆ. ಕೆಲವರು ಊಟ -ತಿಂಡಿಗಳ ನಡುವಿನ ಸಮಯದಲ್ಲಿ ಕುರುಕುಲು ತಿಂಡಿಯನ್ನು ಮೆಯ್ದರೆ, ಮತ್ತೆ ಕೆಲವರು ಅತ್ಯಧಿಕ ಶಕ್ತಿ ನೀಡುವ ಬೆಣ್ಣೆ ತುಪ್ಪ, ಸಿಹಿ ತಿಂಡಿಗಳು, ಚಾಕೋಲೇಟ್, ಕೇಕ್, ಐಸ್‌ಕ್ರೀಮ್ ಮುಂತಾದ ಪದಾರ್ಥಗಳನ್ನು ಶ್ರೇಷ್ಠ ಆಹಾರಗಳೆಂದು ಭಾವಿಸಿ ಹೇರಳವಾಗಿ ತಿನ್ನುತ್ತಾರೆ. ಕೆಲವರಿಗೆ ಏಕಾಂತದಲ್ಲಿ ಗೌಪ್ಯವಾಗಿ ತಿನ್ನುವ ಚಟ. ಒಂಟಿತನದ ಬೇಸರ ಕಳೆಯಲು ಹೆಚ್ಚು ತಿನ್ನುವ ರೂಢಿ ಇನ್ನು ಕೆಲವರಿಗೆ. ಹೊಟೇಲ್‌ನಲ್ಲಿ, ಬೇಕರಿಗಳಲ್ಲಿ ಕೆಲಸಮಾಡುವವರು, ಗೃಹಿಣಿಯರು, ಅಡಿಗೆಭಟ್ಟರು ತಮ್ಮೆದುರಿನಲ್ಲೆ ವಿಪುಲವಾಗಿ ಕಾಣುವ ಆಹಾರವನ್ನು ಪದೇ ಪದೇ ಮೆಲ್ಲುತ್ತಾ ಇರುತ್ತಾರೆ. ಇತ್ತೀಚೆಗೆ ಹಲವಾರು ಹೊಸ ತಿನಿಸುಗಳು ಮಾರುಕಟ್ಟೆಯನ್ನು ಪ್ರವೇಶಿಸಿವೆ. ಇವುಗಳ ರುಚಿ, ಆಕಾರ,

ಬಣ್ಣ, ಪರಿಮಳದ ಆಕರ್ಷಣೆಗೆ ಮನಸೋತು ನಾಲಿಗೆಯ ಚಪಲವನ್ನು ತಣಿಸಿಕೊಳ್ಳುವವರ ಸಂಖ್ಯೆಯೂ ಕಡಿಮೆಯೇನಿಲ್ಲ, ಸಹಭೋಜನ, ಔತಣಕೂಟಗಳೂ ಹೆಚ್ಚುತ್ತಾ ಇವೆ. ಜೊತೆಗೆ ಗುಂಡು ಪಾರ್ಟಿಗಳೂ ಸಾಮಾನ್ಯವಾಗುತ್ತಿವೆ. ಈ ಎಲ್ಲ ಕಾರಣಗಳಿಂದ ಬಹಳಷ್ಟು ಜನರು ತಮಗೆ ತಿಳಿಯದಂತೆಯೇ ಶರೀರದ ಅವಶ್ಯಕತೆಗಿಂತ ಹೆಚ್ಚಿನ ಆಹಾರವನ್ನು ಸೇವಿಸುತ್ತಿದ್ದಾರೆ. ಇದಕ್ಕೆಲ್ಲಾ ಮೂಲಕಾರಣ ನಮಗಿನ್ನೂ ಆಹಾರದ ಬಗ್ಗೆ ಸರಿಯಾದ ಪ್ರಜ್ಞೆ ಬೆಳೆಯಬೇಕಾಗಿರುವುದೇ ಆಗಿದೆ. ಬೊಜ್ಜು ವಂಶಪಾರಂಪರ್ಯವಾಗಿ ಬರಬಹುದು. ನಿರ್ನಾಳ ಗ್ರಂಥಿಗಳಲ್ಲಿನ ಲೋಪದೋಷಗಳೂ ಬೊಜ್ಜಿಗೆ ಕಾರಣವಾಗಿರಬಹುದು. ಆದರೆ ಈ ಕಾರಣಗಳು ಬಹಳ ವಿರಳ.

## ಕಡಿಮೆ ಶ್ರಮಕ್ಕೆ ಕಾರಣ

ಇಂದು ವಾಹನಗಳ ಬಳಕೆ ಬಹಳವಾಗಿದೆ. ಕುಳಿತಲ್ಲೇ ಕೆಲಸ ಕಾರ್ಯ ನಿರ್ವಹಿಸಲು ಸಂಪರ್ಕಸಾಧನಗಳಿವೆ. ಮನರಂಜನೆಗಾಗಿ ಟೆಲಿವಿಜನ್ ಇದೆ. ಗೃಹಬಳಕೆಯ ಯಂತ್ರಗಳು ಮಾನವನ ಶ್ರಮವನ್ನು ಹಗುರಗೊಳಿಸಿವೆ. ಮನೆಗೆಲಸಕ್ಕೆ ಆಳುಗಳಿದ್ದಾರೆ.

ಇವೆಲ್ಲಕ್ಕಿಂತ ಮುಖ್ಯವಾಗಿ ಶ್ರಮದ ಕೆಲಸಗಳನ್ನು ಮಾಡುವುದಾಗಲಿ ವಾಹನಗಳನ್ನು ಬಳಸದೆ ನಡೆದುಕೊಂಡು ಹೋಗುವುದಾಗಲಿ ತಮ್ಮ ಅಂತಸ್ತಿಗೆ ತಕ್ಕದ್ದಲ್ಲ ಎಂಬ ಭಾವನೆ




ಸಾರ್ವತ್ರಿಕವಾಗಿದೆ. ಕಷ್ಟಪಟ್ಟು ಕೆಲಸಕ್ಕಿಳಿದರೆ ಮೈ ಕೈ ನೋವಾಗಿ ಅನಾರೋಗ್ಯ ಉಂಟಾದೀತು ಎಂಬ ತಪ್ಪು ತಿಳುವಳಿಕೆಯೂ ಕೆಲವರಿಗಿದೆ. ಹೀಗಾಗಿ ಇಂದು ಕಷ್ಟಪಟ್ಟು ದುಡಿಯುವವರ ಸಂಖ್ಯೆ ಕ್ಷೀಣಿಸಿ, ಆಲಸಿಗಳ ಸಂಖ್ಯೆ ಏರುತ್ತಿದೆ.

ಬೊಜ್ಜಿನವರು ಸಣ್ಣ ಪುಟ್ಟ ಅಡಚಣೆಗಳಿಂದ ಹಿಡಿದು ಪ್ರಾಣಾಂತಕ ರೋಗಗಳವರೆಗೆ ಅನುಭವಿಸಬೇಕಾದ ಪ್ರಮೇಯ ಬಹಳ. ಸ್ಥೂಲಕಾಯದವರ ದೈಹಿಕ, ಮಾನಸಿಕ ಮತ್ತು ಸಾಮಾಜಿಕ ಸಮಸ್ಯೆಗಳನ್ನು ಅವಲೋಕಿಸೋಣ.

## ದೈಹಿಕ ತೊಡಕುಗಳು

ದೇಹ ಭಾರವಾಗಿರುವುದರಿಂದ, ಬೊಜ್ಜಿನವರು ಏಳುವುದೂ ಕಷ್ಟ, ಕೂಡುವುದೂ

ಕಷ್ಟ. ಓಡಾಟ ಮತ್ತಷ್ಟು ಕಷ್ಟ. ಇದರಿಂದ ಅವರ ಕೆಲಸದ ಸಾಮರ್ಥ್ಯ ತಗ್ಗಿ ದುಡಿಮೆ ಕಡಿಮೆಯಾಗುತ್ತದೆ.

ಮಾನವ ಅಸ್ಥಿಪಂಜರಕ್ಕೆ ಅಧಿಕ ಹೊರೆ ಹೊರುವ ಶಕ್ತಿಯಿಲ್ಲ, ಬೊಜ್ಜಿನವರ ಹೆಚ್ಚಿನ ಭಾರಕ್ಕೆ ಪಾದಗಳ ಮೂಳೆಗಳು ತಮ್ಮ ಸಹಜ ಆಕಾರವನ್ನು ಕಳೆದುಕೊಂಡು ಚಪ್ಪಟೆಯಾಗುವುದರಿಂದ ಓಡಾಟ ವಿಕಾರವೂ ಕಷ್ಟಕರವೂ ಆಗುತ್ತದೆ.

ದೇಹದ ಭಾರ ಹೊರುವ ಮಂಡಿ, ಚಪ್ಪೆ, ಬೆನ್ನೆಲುಬುಗಳು ಹೆಚ್ಚಿನ ಭಾರಕ್ಕೆ ನಲುಗಿ ನೋವಿನ ಆಗರಗಳಾಗುತ್ತವೆ.

ಬೊಜ್ಜಿನವರ ಹೊಟ್ಟೆ ಮುಂದೆ ಬಂದಿರುವುದರಿಂದ, ಸಮತೋಲನವನ್ನು ಕಾಪಾಡಿಕೊಳ್ಳಲು ಬೆನ್ನೆಲುಬು ಕೂಡ ಮುಂದಕ್ಕೆ ಬಾಗುತ್ತಾ ಬಂದು ವೈಕಲ್ಯವನ್ನುಂಟು ಮಾಡುವುದಲ್ಲದೆ ಶಾಶ್ವತವಾದ ಬೆನ್ನು ನೋವಿಗೂ ಕಾರಣವಾಗುತ್ತದೆ.

ದೇಹದ ಭಾರಕ್ಕೆ ತೊಡೆ ಮತ್ತು ಕಾಲಿನ ಮೂಳೆಗಳೂ ಡೊಂಕಾಗುವ ಸಾಧ್ಯತೆ ಇದೆ.

ಉಸಿರಾಟದಲ್ಲಿ ಭಾಗಿಯಾಗುವ ಮಾಂಸಖಂಡಗಳಲ್ಲಿ ಕೊಬ್ಬು ಕಲೆತು ಅವುಗಳ ಕ್ರಿಯಾಶಕ್ತಿ ಕುಗ್ಗುವುದರಿಂದ ಬೊಜ್ಜಿನವರು ಉಸಿರಾಡಲು ಪ್ರಯಾಸಪಡುತ್ತಾ, ನೋಡಿದವರಲ್ಲಿ ಮರುಕವುಂಟಾಗಲು ಕಾರಣರಾಗುತ್ತಾರೆ.

ಉಸಿರಾಟದ ತೊಂದರೆಯಿದ್ದಾಗ ಶ್ವಾಸಕೋಶವನ್ನು ಹಲವಾರು ರೋಗಾಣುಗಳು ಪ್ರವೇಶಿಸುತ್ತವೆ. ಹೀಗಾಗಿ ಸ್ಥೂಲಕಾಯರಾದವರು ಪದೇ ಪದೇ ಬ್ರಾಂಕೈಟಿಸ್, ನ್ಯುಮೋನಿಯ ಮುಂತಾದ ಅಂಟು ಜಾಡ್ಯಗಳಿಗೆ ತುತ್ತಾಗುತ್ತಾರೆ. ಅಷ್ಟೇ ಅಲ್ಲ, ಅಸ್ತಮ ಅಥವಾ ದಮ್ಮು ಕೂಡ ಬೊಜ್ಜಿನವರನ್ನು ಹೆಚ್ಚಾಗಿ ಹಿಂಸಿಸುವ ಸಂಭವ ಇದೆ.

ಹೊಟ್ಟೆಯ ಮಾಂಸಖಂಡಗಳು ಜಠರಾಂತರ್ಗತ ಅಂಗಾಗಗಳನ್ನು ಸುಸ್ಥಾನದಲ್ಲಿ ಭದ್ರವಾಗಿರಿಸಲು ಸಹಾಯಕವಾಗಿವೆ. ಕೊಬ್ಬಿನ ಹೆಚ್ಚಳದಿಂದ ಕ್ಷೀಣಗೊಂಡ ಮಾಂಸಖಂಡಗಳ ಕಾರ್ಯದಕ್ಷತೆ ತಗ್ಗಿರುವುದರಿಂದ ಬೊಜ್ಜಿದ್ದವರಿಗೆ ಹರ್ನಿಯ ಉಂಟಾಗುವುದು ಸಾಮಾನ್ಯ.

ಮಲಿನ ರಕ್ತವನ್ನು ಕಾಲಿನಕಡೆಯಿಂದ ಹೃದಯದ ಕಡೆ ಹರಿಯುವಂತೆ ಮಾಡುವಲ್ಲಿ ಕಾಲಿನ ಮಾಂಸಖಂಡಗಳ ಪಾತ್ರ ಹಿರಿದು. ಈ ಮಾಂಸ ಖಂಡಗಳೂ ದುರ್ಬಲವಾಗುವುದರಿಂದ ರಕ್ತ ಚಲನೆಗೆ ಅಡ್ಡಿಯಾಗಿ ಬೊಜ್ಜಿನವರ ಕಾಲಿನ ಮಲಿನ ರಕ್ತನಾಳಗಳು ಉಬ್ಬಿ ಉಂಡೆಗಟ್ಟಿಕೊಳ್ಳುತ್ತವೆ.

ಬೊಜ್ಜಿನವರ ರಕ್ತದಲ್ಲಿ ಕೊಲೆಸ್ಟಿರಾಲ್ ಅಂಶ ಹೆಚ್ಚಿ ಹೃದಯ ಮತ್ತು ರಕ್ತನಾಳಗಳ ತೊಂದರೆಗಳಿಗೆ ಕಾರಣವಾಗುತ್ತದೆ.

ಸ್ಥೂಲಕಾಯದವರಿಗೆ ರಕ್ತ ಕರಣೆಗಟ್ಟುವ ಸಾಧ್ಯತೆಗಳು ಅಧಿಕ.

ಪಿತ್ತ ಸಂಗ್ರಾಹಕದಲ್ಲಿ ಅಶ್ಮರಿ(ಕಲ್ಲು)ಗಳು ಉಂಟಾಗುವುದು ಹೆಚ್ಚಾಗಿ ಬೊಜ್ಜಿದ್ದವರಿಗೇ.

ಕೈಬೆರಳಿನ ಕೀಲುಗಳು ಉರಿಯೂತದಿಂದ ಉಬ್ಬಿ, ನೋವಿನಿಂದ ನರಳುವಂತೆ ಮಾಡುವ 'ಗೌಟ್' ಎಂಬ ಕಾಯಿಲೆಯೂ ಬೊಜ್ಜಿನವರನ್ನೇ ಹೆಚ್ಚಾಗಿ ಬಾಧಿಸುತ್ತದೆ.

ಹಿಗ್ಗಿದ್ದ ದೇಹದ ಗಾತ್ರಕ್ಕೆ ರಕ್ತವನ್ನು ಸರಬರಾಜು ಮಾಡಬೇಕಾಗುವುದರಿಂದ ಹೃದಯ ಹೆಚ್ಚು ಹೆಚ್ಚು ಮಿಡಿಯಬೇಕಾಗುತ್ತದೆ. ಹೆಚ್ಚು ದುಡಿದ ಹೃದಯ ಬೇಗನೇ ಸೋತುಹೋಗುತ್ತದೆ.

ದೇಹದ ಸಕ್ಕರೆ ಅಂಶವನ್ನು ನಿರ್ದೇಶಿಸುವ ಇನ್ಸುಲಿನ್ ಉತ್ಪಾದಕ ಗ್ರಂಥಿಗಳು

(ಮೆದೋಜೀರಕ) ಹೆಚ್ಚಾಗಿ ದುಡಿದು ದಣಿಯುವುದರಿಂದ, ಸಕ್ಕರೆ ಅಂಶವನ್ನು ನಿಯಂತ್ರಣದಲ್ಲಿರಿಸಿಕೊಳ್ಳಲು ಅವುಗಳಿಗೆ ಸಾಧ್ಯವಾಗುವುದಿಲ್ಲ. ಹೀಗಾಗಿ ಸಕ್ಕರೆ ಕಾಯಿಲೆ ಬೊಜ್ಜಿನವರನ್ನು ಬೆನ್ನಟ್ಟಿ ಬರುತ್ತದೆ.

ದೇಹದಲ್ಲಿ ಹೆಚ್ಚಾದ ಕೊಬ್ಬಿನ ಅಂಶ ರಕ್ತನಾಳಗಳಲ್ಲಿ ಕಲೆತು, ಅವುಗಳ ಮೃದುತ್ವವನ್ನು ನಾಶಮಾಡುತ್ತದೆ. ರಕ್ತನಾಳಗಳು ಗಡುಸಾದಾಗ ಹೃದಯ ಹೆಚ್ಚು ಒತ್ತಡದಿಂದ ಮಿಡಿಯಬೇಕಾಗುತ್ತದೆ. ಹೀಗಾಗಿ ಬೊಜ್ಜಿನವರಿಗೆ ಅಧಿಕ ರಕ್ತದ ಒತ್ತಡ ಉಂಟಾಗುವ ಅಪಾಯ ಬಹಳ.

ಹೃದಯಕ್ಕೆ ರಕ್ತ ಸರಬರಾಜು ಮಾಡುವ ರಕ್ತನಾಳಗಳಲ್ಲಿ ಹೆಚ್ಚಿನ ಕೊಬ್ಬಿನ ಅಂಶ ಸೇರಿ ಹೃದಯಾಘಾತಕ್ಕೆ ಕಾರಣವಾಗುತ್ತದೆ. ಬೊಜ್ಜಿನವರಲ್ಲಿ ಹೀಗಾಗುವ ಸಂಭವ ಹೆಚ್ಚು.

ಮಿದುಳಿಗೆ ರಕ್ತ ಪೂರೈಸುವ ನಾಳದಲ್ಲಿ ಕೊಬ್ಬು ಕಲೆತು ರಕ್ತ ಸಂಚಾರಕ್ಕೆ ಅಡ್ಡಿಯಾದಲ್ಲಿ ಪಾರ್ಶ್ವವಾಯು ಉಂಟಾಗುತ್ತದೆ.

ಬೊಜ್ಜಿಲ್ಲದವರಿಗಿಂತ ಬೊಜ್ಜಿದ್ದವರಿಗೆ ಸರಾಸರಿ ೨೦ ವರ್ಷ ಆಯುಷ್ಯ ಕಡಿಮೆ. ಬಹಳ ಜನ ಬೊಜ್ಜಿನವರ ಸಾವಿಗೆ ಹೃದಯಾಘಾತ ಅಧಿಕ ರಕ್ತದೊತ್ತಡ, ಸಕ್ಕರೆ ಕಾಯಿಲೆ, ಪಾರ್ಶ್ವವಾಯು, ಮೂತ್ರಪಿಂಡದ ನಿಷ್ಕ್ರಿಯತೆ, ಶ್ವಾಸಕೋಶದ ಸೋಂಕುಗಳು ಮುಖ್ಯ ಕಾರಣಗಳಾಗಿವೆ. ಹೊಟ್ಟೆಯ ಗಾತ್ರ ಹೆಚ್ಚಿದಷ್ಟೂ ಆಯಸ್ಸು ಕಡಿಮೆಯಾಗುತ್ತಾ ಬರುತ್ತದೆ.

ಮದ್ಯಪಾನ, ಧೂಮಪಾನ, ತಂಬಾಕು ಸೇವನೆಯಂತಹ ಚಟಗಳು ಇತರರಿಗಿಂತ ಬೊಜ್ಜಿನವರಿಗೆ ಹೆಚ್ಚು ಹಾನಿಯನ್ನುಂಟುಮಾಡುತ್ತವೆ.

ಬೊಜ್ಜಿನವರಿಗೆ ಚುರುಕುತನ ಸೂಕ್ಷ್ಮಗ್ರಾಹಿತ್ವಗಳ ಅಭಾವವಿದ್ದು ಅವರ ಚಲನವಲನವೂ ಮಂದವಾಗಿರುತ್ತದೆ. ಹೀಗಾಗಿ ಇಂಥವರು ಅಪಘಾತಗಳಿಗೆ ತುತ್ತಾಗುವ ಸಂಭವ ಹೆಚ್ಚು.

ಇತರರ ಹಾಗೆ ಬೊಜ್ಜಿನವರು ಶಸ್ತ್ರ ಚಿಕಿತ್ಸೆಯಿಂದ ಶೀಘ್ರವಾಗಿ ಚೇತರಿಸಿಕೊಳ್ಳಲಾರರು.

ಕೊಬ್ಬು ಹೆಚ್ಚಾದಲ್ಲಿ ಚರ್ಮಕ್ಕೆ ಅಂಟುರೋಗಗಳ ಉಪಟಳ ಬಹಳ.

ಬೊಜ್ಜಿನವರಿಗೆ ಸ್ತನ, ಜನನೇಂದ್ರೀಯ ಮತ್ತಿತರ ಅಂಗಗಳ ಕ್ಯಾನ್ಸರ್ ಆಗುವ ಸಂಭವ ಹೆಚ್ಚು.

ಸ್ತ್ರೀಯರ ಅಂಡನಾಳದಲ್ಲಿ ಕಲೆತ ಕೊಬ್ಬು ಗರ್ಭಧಾರಣೆಗೆ ಅಡ್ಡಿಯನ್ನುಂಟುಮಾಡುತ್ತದೆ. ಹೀಗಾಗಿ ಬಂಜೆತನಕ್ಕೆ ಬೊಜ್ಜು ಒಂದು ಕಾರಣವಾಗಬಲ್ಲದು.

ಬೊಜ್ಜುಳ್ಳ ಬಹಳಷ್ಟು ಮಹಿಳೆಯರಲ್ಲಿ ಋತುಚಕ್ರ ಸರಿಯಾಗಿರುವುದಿಲ್ಲ.

ಬೊಜ್ಜು ಹೆಚ್ಚಾದಂತೆ ಲೈಂಗಿಕ ಸಾಮರ್ಥ್ಯ ಕುಗ್ಗುತ್ತದೆ. ಲೈಂಗಿಕ ಕ್ರಿಯೆ ನಡೆಸಲು ಬೊಜ್ಜು ಅಡ್ಡಿಯಾಗಬಹುದು.

ಮೂಲವ್ಯಾಧಿ, ಮಲಬದ್ಧತೆಗಳೂ ಬೊಜ್ಜಿನವರಿಗೇ ಹೆಚ್ಚಾಗಿ ತಗಲಿಕೊಳ್ಳುತ್ತವೆ.

## ಮಾನಸಿಕ ವೇದನೆಗಳು

ಬೊಜ್ಜಿನ ಬಾಧೆಯಿಂದ ಕೆಲವರಿಗೆ ಕೀಳರಿಮೆ, ಖಿನ್ನತೆ, ಜೀವನದಲ್ಲಿ ಅನಾಸಕ್ತಿ, ಬೇಸರ ಉಂಟಾಗಬಹುದು.

ಅನೇಕ ರೋಗಗಳು ಕಾಡುವುದರಿಂದ ಬೊಜ್ಜಿನವರು ಸಾಕಷ್ಟು ನೋವನ್ನು ಅನುಭವಿಸಬೇಕಾಗುತ್ತದೆ. ಹೀಗಾಗಿ ಜೀವನದಲ್ಲಿ ನಲಿವು, ಸಂತೋಷ, ಉತ್ಸಾಹ, ಉಲ್ಲಾಸಗಳು ಇಲ್ಲವಾಗುತ್ತವೆ.

ಬೊಜ್ಜಿನವರಿಗೆ ದೇಹದ ವಿರೂಪತೆಯ ಚಿಂತೆ ಯಾವಾಗಲೂ ಕಾಡುತ್ತಿರುತ್ತದೆ. ಗಂಡಸರಿಗಿಂತ ಹೆಂಗಸರೇ ಹೆಚ್ಚಾಗಿ ಈ ಚಿಂತೆಗೊಳಗಾಗುತ್ತಾರೆ.

## ಸಾಮಾಜಿಕ ತೊಂದರೆಗಳು

ಬೊಜ್ಜಿನವರನ್ನು ಜನ ಡೊಳ್ಳು ಹೊಟ್ಟೆ, ಟೊಣಪ, ಡಬ್ಬಲ್‌ಸೀಟ್, ಹೊಟ್ಟೆಬಾಕ ಮುಂತಾದ ಹೆಸರಿನಿಂದ ಅಪಹಾಸ್ಯಕ್ಕೀಡು ಮಾಡುತ್ತಾರೆ.

ಮದುವೆ ನಿಶ್ಚಯವಾಗದಿರುವುದಕ್ಕೆ ಬೊಜ್ಜು ಮುಖ್ಯಕಾರಣವಾಗಬಹುದು.

ಬೊಜ್ಜಿನ ಬವಣೆಗಳನ್ನರಿತವರು, ಬೊಜ್ಜಿದ್ದ ಮನೆತನದಲ್ಲಿ ವೈವಾಹಿಕ ಸಂಬಂಧ ಬೆಳೆಸಲು ಹಿಂಜರಿಯುತ್ತಾರೆ.

ಬೊಜ್ಜೇ ಒಂದು ಕಾರಣವಾಗಿ ಯುವಕ ಯುವತಿಯರಿಗೆ ಉತ್ತಮ ಉದ್ಯೋಗಾವಕಾಶಗಳು ತಪ್ಪಿಹೋಗಬಹುದು.

ಸಮಾಜದಲ್ಲಿ ಇತ್ತೀಚೆಗೆ ಬೊಜ್ಜಿನವರಿಗೆ ಮಾನ್ಯತೆ ದೊರೆಯುವುದು ಕಡಿಮೆಯಾಗಿದೆ. ಹೀಗಾಗಿ ಬೊಜ್ಜಿನವರು ಸಭೆ ಸಮಾರಂಭಗಳಲ್ಲಿ ಭಾಗವಹಿಸಲು ಹಿಂದೇಟು ಹಾಕುತ್ತಾರೆ.

ಸಿನಿಮಾ ನಟ-ನಟಿ, ಕ್ರೀಡಾಪಟು, ಪರಿಚಾರಿಕರು ಮುಂತಾದವರಿಗೆ ಬೊಜ್ಜು ಬೇಗನೇ ನಿವೃತ್ತಿಯನ್ನು ತರುತ್ತದೆ.

ಇತರರಂತೆ ಚಟುವಟಿಕೆಯಿಂದಿರಲು ಆಗಲಿ ಶ್ರಮದಾಯಕ ಕೆಲಸಗಳನ್ನು ಮಾಡಲಾಗಲಿ ಸಾಧ್ಯವಾಗದೆ ಬೊಜ್ಜಿನವರು ಬವಣೆಪಡಬೇಕಾಗುತ್ತದೆ.

ಹಾಗಾದರೆ ಮುಂದೇನು ಉಪಾಯ?

## ಬೊಜ್ಜು ಇಳಿಸಲು ಸಜ್ಜಾಗಿ

ಆದರೆ ಆತುರ ಬೇಡ. ಬೊಜ್ಜನ್ನು ಇಳಿಸುವುದು ಅವಸರವಾಗಿ ಮಾಡುವ ಕಾರ್ಯವಲ್ಲ. ಹಂತ ಹಂತವಾಗಿ ಮತ್ತು ನಿಧಾನವಾಗಿ ದೇಹದ ತೂಕ ಇಳಿಸಿಕೊಳ್ಳಬೇಕು. ಇದಕ್ಕೆ ಮೊದಲು ನಿಮ್ಮಲ್ಲಿ ದೃಢನಿರ್ಧಾರ, ವಿಶ್ವಾಸ, ಆತ್ಮಸ್ಥೈರ್ಯಗಳನ್ನು ಬೆಳೆಸಿಕೊಳ್ಳಿ.

ಬೊಜ್ಜನ್ನು ಕರಗಿಸುವ ಮಾತ್ರೆ ಔಷಧಿಗಳು ಎಲ್ಲೂ ಇಲ್ಲ. ಈ ಬಗ್ಗೆ ಭ್ರಮೆ ಬೇಡ.

ಕಡಿಮೆ ತಿನ್ನಬೇಕು ಹಾಗೂ ಹೆಚ್ಚು ದಣಿಯಬೇಕು. ಇದೇ ಬೊಜ್ಜಿಗೆ ರಾಮಬಾಣ.

ಮಿತಾಹಾರ ಸೇವನೆಯೊಂದಿಗೆ ಚಟುವಟಿಕೆಯ ಜೀವನ ನಡೆಸುವುದು ಕೆಲದಿನಗಳ ಕಾಲ ಮಾತ್ರ ಆಚರಿಸುವ ಕರ್ತವ್ಯವಲ್ಲ. ಇದೇ ಜೀವನ ಕ್ರಮವಾಗಬೇಕು. ಆಗ ಮಾತ್ರ ದೇಹದ ಅನವಶ್ಯಕ ಬೊಜ್ಜು ಕರಗುತ್ತದೆ. ತೂಕ ಇಳಿಯುತ್ತಿರುವಂತೆಯೇ ಆರೋಗ್ಯ ಸುಧಾರಿಸುತ್ತದೆ. ಜೀವನದಲ್ಲಿ ಉತ್ಸಾಹ, ಉಲ್ಲಾಸ ಮೂಡುತ್ತದೆ. ನಿಮಗೆ ಸಾಧನೆಯಲ್ಲಿ ಯಶಸ್ಸು ಗಳಿಸಿದ ತೃಪ್ತಿಯ ಜೊತೆ ಆರೋಗ್ಯ ಭಾಗ್ಯದ ಬಹುಮಾನವೂ ಲಭ್ಯವಾಗುತ್ತದೆ. ಇದಕ್ಕಾಗಿ ನೀವು ಕಡಿಮೆ ತಿನ್ನುವ ಮತ್ತು ಹೆಚ್ಚು ದಣಿಯುವ ಕಲೆಯನ್ನು ಕರಗತ ಮಾಡಿಕೊಂಡ ಹೊರತು ಬೇರೆ ಮಾರ್ಗವಿಲ್ಲ. ನಾವು ತಿನ್ನುವುದಕ್ಕಾಗಿಯೇ ಬದುಕುವುದಿಲ್ಲ, ಬದುಕುವುದಕ್ಕಾಗಿ ತಿನ್ನುತ್ತೇವೆ. ಈ ಜಗತ್ತಿನಲ್ಲಿ ಹಸಿವೆಯಿಂದ ಸಾಯುವವರಿರುವ ಹಾಗೆಯೇ ಹೆಚ್ಚು ತಿಂದು ಸಾಯುವವರೂ ಇದ್ದಾರೆ. ಆದರೆ ಹಿತಮಿತವಾಗಿ ತಿಂದು ಸತ್ತವರು ಯಾರೂ ಇಲ್ಲ ಎನ್ನುವುದನ್ನು ಗಮನದಲ್ಲಿಡಬೇಕು.

## ಕಡಿಮೆ ತಿನ್ನುವ ಕಲೆ

ಪ್ರಾಣಿಗಳು ಮತ್ತು ಪಕ್ಷಿಗಳು ಖಚಿತವಾದ ಆಹಾರ ನಿಯಮವನ್ನು ಪಾಲಿಸುತ್ತವೆ. ಆದರೆ ಮಾನವನ ಮಾತು ಹಾಗಲ್ಲ; ಅವನ ಆಹಾರಸೇವನೆಗೆ ಮಿತಿ ಇಲ್ಲ. ಹೀಗಾಗಿಯೇ

ಆತ ರೋಗಗಳನ್ನು ಬರಮಾಡಿಕೊಳ್ಳುತ್ತಾನೆ. ಬದಲು ಆತ ತನ್ನ ವಯೋಧರ್ಮ ಹಾಗೂ ಶರೀರಶ್ರಮಕ್ಕನುಗುಣವಾಗಿ ಆಹಾರವನ್ನು ಸೇವಿಸಿದರೆ ಆರೋಗ್ಯಭಾಗ್ಯ ತಂತಾನೇ ಪ್ರಾಪ್ತ ವಾಗುತ್ತದೆ. ಹಾಗಾಗಲು ಆಹಾರದ ಬಗ್ಗೆ ಅರಿವು ಅಗತ್ಯ. ಅಗತ್ಯ ಪ್ರಮಾಣದ ಆಹಾರ ಸೇವಿಸಲು ದೃಢ ಮನಸ್ಸೂ ಬೇಕು.

ವಾಸ್ತವವಾಗಿ ನಾವು ಊಟ ಮಾಡುವ ಉದ್ದೇಶ ಕೇವಲ ಹೊಟ್ಟೆ ತುಂಬಿಸಿಕೊಳ್ಳು ವುದಕ್ಕಾಗಲಿ ಬಾಯಿ ಚಪಲ ತೀರಿಸಿಕೊಳ್ಳುವುದಕ್ಕಾಗಲಿ ಆಗಿರದೆ ಆರೋಗ್ಯ ಕಾಯ್ದುಕೊ ಳ್ಳುವುದೇ ಆಗಿರಬೇಕು. ನಾವು ಎಷ್ಟು ಆಹಾರ ಸೇವಿಸುತ್ತೇವೆ ಎನ್ನುವುದಕ್ಕಿಂತ ಅವಶ್ಯಕತೆಗೆ, ರುಚಿಗಿಂತ ಶುಚಿಗೆ ಹೆಚ್ಚು ಮಹತ್ವ ನೀಡುವುದಗತ್ಯ.

ವಾಹನಗಳ ಚಲನೆಗೆ ಬೇಕಾದ ಶಕ್ತಿಯನ್ನು ಇಂಧನ ಪೂರೈಸುವಂತೆಯೇ ಮಾನವನಿಗೆ ಅಗತ್ಯವಾದ ಶಕ್ತಿಯನ್ನು ಆಹಾರ ಪೂರೈಸುತ್ತದೆ. ವಾಹನಗಳು ಚಲಿಸದೆ ಇರುವಾಗ ಇಂಧನವನ್ನು ಬಳಸಿಕೊಳ್ಳುವುದಿಲ್ಲ. ಆದರೆ ನಾವು ನಿದ್ರಿಸುತ್ತಿರುವಾಗಲೂ ನಮ್ಮ ಹೃದಯಮಿಡಿಯುತ್ತಿರುತ್ತದೆ. ಶ್ವಾಸಕೋಶಗಳಲ್ಲಿ ಶ್ವಾಸೋಚ್ಛ್ವಾಸ ಕ್ರಿಯೆ ನಡೆಯುತ್ತಿರುತ್ತದೆ. ಆಹಾರ ಜೀರ್ಣವಾಗುತ್ತಿರುತ್ತದೆ. ಮೂತ್ರ ಉತ್ಪತ್ತಿಯಾಗುತ್ತಿರುತ್ತದೆ. ಆದುದರಿಂದ ನಾವು ಬದುಕಿರುವಷ್ಟು ಕಾಲವೂ ಶಕ್ತಿಯನ್ನು ಬಳಸುತ್ತಿರಲೇಬೇಕಾಗುತ್ತದೆ.

ನಿಜವಾಗಿಯೆಂದರೆ ಏನೂ ಕೆಲಸ ಮಾಡದೆ ಎಂಟು ಗಂಟೆ ನಿದ್ದೆ ಮಾಡಿದ್ದೇವೆಂದರೂ ದೇಹದಿಂದ ೪೫೦ ಕಿಲೋ ಕ್ಯಾಲರಿ ಶಕ್ತಿಯ ವ್ಯಯವಾಗುತ್ತದೆ. (೧ ಕಿಲೋ ಕ್ಯಾಲರಿ ಎಂದರೆ ಒಂದು ಲೀಟರ್ ಶುದ್ಧ ನೀರಿನ ತಾಪವನ್ನು ಒಂದು ಡಿಗ್ರಿ ಸೆಲ್ಸಿಯಸ್‌ನಷ್ಟು ಹೆಚ್ಚಿಸಲು ಬೇಕಾಗುವ ಉಷ್ಣತೆ.) ಇನ್ನು ಏಳುವುದು ಕೂಡುವುದು, ಹಲ್ಲುಜ್ಜುವುದು, ಸ್ನಾನ ಮಾಡುವುದು ಮುಂತಾದ ಕ್ರಿಯೆಗಳಿಂದ ಪ್ರತಿ ನಿತ್ಯ ೧೨೦೦ ಕಿಲೋ ಕ್ಯಾಲರಿಗಳಷ್ಟು ಶಕ್ತಿ ಖರ್ಚಾಗುತ್ತದೆ. ಹೀಗಾಗಿ ನಾವು ಏನೂ ಕೆಲಸ ಮಾಡದಿದ್ದರೂ ದಿನಂಪ್ರತಿ ೧೬೫೦ ಕಿಲೋ ಕ್ಯಾಲರಿ ಶಕ್ತಿ ಬೇಕೇಬೇಕು. ಇನ್ನು ನಮ್ಮ ಉದ್ಯೋಗದ ಶ್ರಮ ಹೆಚ್ಚಿದಂತೆ ಶಕ್ತಿಯ ವ್ಯಯವೂ ಹೆಚ್ಚುತ್ತದೆ. ಒಟ್ಟಿನಲ್ಲಿ ನಿತ್ಯ ನಾವು ವೆಚ್ಚ ಮಾಡುವ ಶಕ್ತಿಯ ವಿವರ ಇಂತಿದೆ:

ಪ್ರತಿ ನಿತ್ಯ ನಾವು ಖರ್ಚು ಮಾಡುವ ಶಕ್ತಿ

| ಕೆಲಸ | ಖರ್ಚು ಮಾಡುವ ಶಕ್ತಿ ಕಿಲೋ ಕ್ಯಾಲರಿಗಳಲ್ಲಿ. | |
|---|---|---|
| | ಗಂಡಸು | ಹೆಂಗಸು |
| ಹಗುರ ಕೆಲಸ | ೨೪೦೦ | ೧೯೦೦ |
| ಶ್ರಮದ ಕೆಲಸ | ೨೮೦೦ | ೨೨೦೦ |
| ಅತಿ ಶ್ರಮದ ಕೆಲಸ | ೩೯೦೦ | ೩೦೦೦ |

ಹಗುರ ಕೆಲಸ: ವೈದ್ಯ, ವಕೀಲ, ಮಾಸ್ತರ, ಪೋಸ್ಟ್ ಮಾಸ್ತರ್, ಬ್ಯಾಂಕ್ ಉದ್ಯೋಗಿ, ವ್ಯಾಪಾರಿ ಇತ್ಯಾದಿ.

ಶ್ರಮದ ಕೆಲಸ: ಟೈಪಿಸ್ಟ್, ಜವಾನ, ಸೈಕಲ್‌ಸವಾರ, ಮನೆಗೆಲಸದವರು, ಹೊಲಗೆಲ ಸದವರು, ನೇಕಾರ, ಅಕ್ಕಸಾಲಿಗ, ಬಡಗಿ, ಮೀನುಗಾರ, ಇತ್ಯಾದಿ.

ಅತಿಶ್ರಮದ ಕೆಲಸ: ಸೌದೆ ಒಡೆಯುವುದು, ಮೂಟೆಗಳನ್ನು ಹೊರುವುದು, ಕಲ್ಲು ಒಡೆಯುವುದು, ಕಬ್ಬಿಣ ಕತ್ತರಿಸುವುದು ಇತ್ಯಾದಿ.

ನಾವು ಕಳೆದುಕೊಳ್ಳುವಷ್ಟು ಶಕ್ತಿಯನ್ನು ಭರಿಸುವಷ್ಟು ಆಹಾರವನ್ನು ಮಾತ್ರ ಸೇವಿಸಬೇಕು. ಮಿತಿಯಿಲ್ಲದೆ ಸೇವಿಸಿದ ಆಹಾರವೇ ಸ್ಥೂಲಕಾಯಕ್ಕೆ ಕಾರಣವಾಗುತ್ತದೆ. ಆದುದರಿಂದ ಬೊಜ್ಜಿನವರು ಅತಿ ಕಡಿಮೆ ಶಕ್ತಿನೀಡುವ ಆಹಾರವನ್ನು ಸೇವಿಸಬೇಕು. ಏನು ತಿನ್ನುವುದಾದರೂ ಅದರಲ್ಲಿನ ಕ್ಯಾಲರಿಯನ್ನು ಲೆಕ್ಕ ಹಾಕಿಕೊಳ್ಳಬೇಕು. ಹಾಗಾಗಿ ನಮಗೆ ನಮ್ಮ ಆಹಾರದಿಂದ ದೊರೆಯುವ ಕ್ಯಾಲರಿಗಳ ಜ್ಞಾನವೂ ಅಗತ್ಯ. (ಪಟ್ಟಿ ೧)

**ಊಟ ತಿಂಡಿಗಳಿಂದ ದೊರೆಯುವ ಶಕ್ತಿ**

| ಆಹಾರ (೧೦೦ ಗ್ರಾಂ) ಪದಾರ್ಥ | ಶಕ್ತಿ (ಕಿ. ಕ್ಯಾಲರಿ) |
|---|---|
| ಧಾನ್ಯಗಳು ಬೇಳೆಕಾಳುಗಳು | ೩೦೦ ರಿಂದ ೪೦೦ |
| ಎಣ್ಣೆ ಬೀಜಗಳು | ೫೦೦ ರಿಂದ ೬೦೦ |
| ಸಕ್ಕರೆ ಬೆಲ್ಲ | ೪೦೦ |
| ಎಣ್ಣೆ ತುಪ್ಪ ಬೆಣ್ಣೆ | ೯೦೦ |
| ಮದ್ಯಾರ್ಕ | ೭೦೦ |
| ಸೊಪ್ಪು ತರಕಾರಿ | ೧೦ ರಿಂದ ೫೦ |
| ಗಡ್ಡೆ ಗೆಣಸು | ೮೦ ರಿಂದ ೧೫೦ |
| ಮಾಂಸ | ೧೫೦ ರಿಂದ ೨೫೦ |

ತೂಕ ಇಳಿಸಿಕೊಳ್ಳಲು ಬಯಸುವವರು, ಅತಿ ಹೆಚ್ಚು ಕ್ಯಾಲರಿ ಶಕ್ತಿಯನ್ನು ಒದಗಿಸುವ ಪದಾರ್ಥಗಳಾದ ಸಿಹಿ ತಿಂಡಿ, ಬೆಣ್ಣೆ ತುಪ್ಪ, ಎಣ್ಣೆ, ಕೆನೆ, ಕೆನೆಮೊಸರು, ಐಸ್‌ಕ್ರೀಂ, ಗೋಡಂಬಿ, ಶೇಂಗಾ, ಬಾದಾಮಿ, ಚಾಕಲೇಟ್, ಕರಿದ ಪದಾರ್ಥ, ಮಾದಕ ಪೇಯಗಳು ಮುಂತಾದವನ್ನು ವರ್ಜಿಸುವುದು ಅಗತ್ಯ.

ಅಕ್ಕಿ, ರಾಗಿ, ಗೋದಿ, ಜೋಳ, ಬೇಳೆಕಾಳು, ಮಾಂಸ, ಮೀನು, ಸಿಹಿ ಹಣ್ಣುಗಳು ಆಲೂಗಡ್ಡೆ, ಗೆಣಸು, ಬಾಳೆಹಣ್ಣು ಇವುಗಳ ಸೇವನೆಗೆ ಕಡಿವಾಣ ಹಾಕಬೇಕು.

ಕಡಿಮೆ ಶಕ್ತಿ ನೀಡುವ ಆಹಾರವಾದ ಸೊಪ್ಪು, ತರಕಾರಿ, ಈರುಳ್ಳಿ, ಸೌತೆಕಾಯಿ, ಬದನೆಕಾಯಿ, ಪಪ್ಪಾಯಿ ಇವುಗಳನ್ನು ಎಷ್ಟು ಬೇಕಾದರೂ ಸೇವಿಸಬಹುದು. ಹಸಿವನ್ನು ತಣಿಸಲು ಇವನ್ನೇ ಹೆಚ್ಚಾಗಿ ಅವಲಂಬಿಸಬೇಕು.

ಬೊಜ್ಜಿನವರು, ತಮ್ಮ ಬೊಜ್ಜನ್ನು ಕರಗಿಸಲು, ನಿತ್ಯ ೧೦೦೦ ಕ್ಯಾಲರಿಗಳ ಶಕ್ತಿ ದೊರಕಿಸುವಷ್ಟೇ ಆಹಾರವನ್ನು ಸೇವಿಸಬೇಕೆಂದು ವೈದ್ಯರು ಹೇಳುತ್ತಾರೆ. ಇಷ್ಟು ಮಾತ್ರ ಶಕ್ತಿಯನ್ನು ಪಡೆಯಲು ನಿಮ್ಮ ಆಹಾರ ಹೀಗಿರಬೇಕು.

**ಬೆಳಿಗ್ಗೆ ೮ ಗಂಟೆಗೆ:** ೧ ಲೋಟ ಕಾಫಿ ಅಥವಾ ಚಹ (ಸಕ್ಕರೆ ಕಡಿಮೆ ಇರಲಿ).

**ತಿಂಡಿ:** ೨ ಇಡ್ಲಿ, ೨ ತುಂಡು ಬ್ರೆಡ್, ೧ ದೋಸೆ, ಒಂದು ಚಮಚೆ ಉಪ್ಪಿಟ್ಟು, ಚಮಚೆ ಚಿತ್ರಾನ್ನ, ಚಮಚೆ ಅವಲಕ್ಕಿ (ಯಾವುದಾದರೂ ಒಂದು).

**೧೧ ಘಂಟೆಗೆ:** ೧ ಲೋಟ ಕಾಫಿ ಇಲ್ಲವೆ ಚಹ (ಸಕ್ಕರೆ ಕಡಿಮೆ ಇರಲಿ).

**ಊಟ:** ೨ ಚಪಾತಿ (ಎಣ್ಣೆ ಇಲ್ಲದ್ದು).

ಆರೋಗ್ಯದಂಗಳ

೧ ಲೋಟ ನೀರುಮಜ್ಜಿಗೆ, ೨ ತುಂಡು ಹಣ್ಣು.

**ಸಂಜೆ ೪ ಘಂಟೆಗೆ:** ೨ ಸಿಹಿ ಇಲ್ಲದ ಬಿಸ್ಕತ್, ೧ ಲೋಟ ಕಾಫಿ ಅಥವಾ ಟೀ (ಸಕ್ಕರೆ ಕಡಿಮೆ ಇರಲಿ).

**ಊಟ ರಾತ್ರಿ ೯ಕ್ಕೆ:** ೧ ಚಪಾತಿ ಹಾಗೂ ತರಕಾರಿ, ೧ ಚಮಚೆ ಅನ್ನ, ೧ ಲೋಟ ನೀರು ಮಜ್ಜಿಗೆ:

ತೂಕ ಇಳಿಸಿಕೊಳ್ಳುವವರು ಆಹಾರವನ್ನು ಲೆಕ್ಕಾಚಾರ ಹಾಕಿಯೇ ತಿನ್ನಬೇಕಾಗುವದ ರಿಂದ ಕೆಲ ಆಹಾರ ಪದಾರ್ಥದಲ್ಲಿನ ಶಕ್ತಿಯ ಪ್ರಮಾಣವನ್ನು ಮಧ್ಯಮ ಗಾತ್ರ ಮತ್ತು ಪ್ರಮಾಣದ ತಿನಿಸುಗಳಿಗೆ ಅನ್ವಯಿಸಿ ಕೊಡಲಾಗಿದೆ.

## ನಮ್ಮ ಆಹಾರ ಪದಾರ್ಥಗಳು ಒದಗಿಸುವ ಶಕ್ತಿ

| ಆಹಾರ | ಪ್ರಮಾಣ | ಶಕ್ತಿ (ಕಿ.ಕ್ಯಾಲರಿ) |
|---|---|---|
| ಅನ್ನ | ೧ ಪ್ಲೇಟ್ | ૩೭೫ |
| ಪುಳಿಯೋಗರೆ | ,, | ೪೦೦ |
| ಚಿತ್ರಾನ್ನ | ,, | ೪೫೦ |
| ಪಲಾವ್ | ,, | ೫೦೦ |
| ಪೊಂಗಲ್ | ,, | ೫೪೦ |
| ಮೊಟ್ಟೆ ಬಿರಿಯಾನಿ | ,, | ೫೪೦ |
| ತುಪ್ಪದ ಅನ್ನ | ,, | ೫೭೦ |
| ಮಟನ್ ಬಿರಿಯಾನಿ | ,, | ೭೪೦ |
| ಬೇಳೆ ಸಾರು | ೧ ಲೋಟ | ೨೧೦ |
| ಮಟನ್ ಸಾರು | ,, | ೫೭೩ |
| ಚಿಕನ್ ಸಾರು | ,, | ೩೮೦ |
| ಮೀನು ಸಾರು | ,, | ೫೪೦ |
| ಬೇಯಿಸಿದ ಬೀನ್ಸ್ | ,, | ೧೦೦ |
| ಬೇಯಿಸಿದ ಹೂಕೋಸು | ,, | ೪೦ |
| ಬೇಯಿಸಿದ ಸೊಪ್ಪು | ,, | ೩೦ |
| ಬೇಯಿಸಿದ ಬಟಾಣಿ | ,, | ೭೦ |
| ಬೇಯಿಸಿದ ಬೆಂಡೆಕಾಯಿ | ,, | ೬೦ |
| ಬೇಯಿಸಿದ ಬದನೆಕಾಯಿ | ,, | ೨೦ |
| ಬೇಯಿಸಿದ ಆಲೂಗೆಡ್ಡೆ | ,, | ೧೦೦ |
| **ಚಟ್ನಿ** | | |
| ಕೊಬ್ಬರಿ | ೩ ಚಮಚ | ೧೫೦ |
| ಶೇಂಗ | ,, | ೧೩೦ |
| ಪುದಿನ | ,, | ೩೫ |

| | | |
|---|---|---|
| ಟೊಮೆಟೋ | ,, | ೩೦ |
| **ರೊಟ್ಟಿ-ಮುದ್ದೆ** | | |
| ಅಕ್ಕಿ ರೊಟ್ಟಿ | ೨ | ೨೧೫ |
| ರಾಗಿ ರೊಟ್ಟಿ | ೩ | ೪೫೦ |
| ಜೋಳದ ರೊಟ್ಟಿ | ೨ | ೨೫೦ |
| ರಾಗಿ ಮುದ್ದೆ | ೧ | ೪೦೦ |
| ಜೋಳದ ಮುದ್ದೆ | ೧ | ೪೩೦ |
| **ತಿಂಡಿ** | | |
| ತಾಲಿಪಟ್ಟು | ೧ | ೩೯೫ |
| ತುಪ್ಪದ ರೊಟ್ಟಿ | ೧ | ೪೭೦ |
| ಚಪಾತಿ | ೨ | ೧೯೦ |
| ಪರೋಟ | ೨ | ೩೦೦ |
| ನಾನ್ | ೧ | ೩೦೦ |
| ಬೆಣ್ಣೆ ನಾನ್ | ೧ | ೪೫೦ |
| ಪೂರಿ | ೨ | ೧೬೦ |
| ಇಡ್ಲಿ | ೨ | ೧೩೦ |
| ರವಾ ಇಡ್ಲಿ | ೨ | ೨೯೦ |
| ಉದ್ದಿನ ವಡೆ | ೨ | ೩೫೦ |
| ಬೋಂಡ | ೨ | ೩೦೦ |
| ಮೊಸರು ವಡೆ | ೨ | ೩೫೦ |
| ಖಾಲಿ ದೋಸೆ | ೨ | ೨೫೦ |
| ಮಸಾಲೆ ದೋಸೆ | ೧ | ೨೧೫ |
| ರವಾ ದೋಸೆ | ೧ | ೨೦೦ |
| ಈರುಳ್ಳಿ ದೋಸೆ | ೧ | ೨೧೫ |
| ಪೇಪರ್ ದೋಸೆ | ೧ | ೨೬೦ |
| ಓಪನ್ ದೋಸೆ | ೧ | ೩೦೦ |
| ಬೆಣ್ಣೆ ದೋಸೆ | ೧ | ೩೦೦ |
| ಗೋದಿ ದೋಸೆ | ೧ | ೨೩೦ |
| ಉಪ್ಪಿಟ್ಟು | ೧ ಪ್ಲೇಟ್ | ೩೬೦ |
| ಅವಲಕ್ಕಿ | ೧ ಪ್ಲೇಟ್ | ೩೪೦ |
| **ಬೇಕರಿ ಪದಾರ್ಥ** | | |
| ಬ್ರೆಡ್ | ೧ ಸ್ಲೈಸ್ | ೩೫ |
| ಬನ್ | ೧ | ೧೫೦ |
| ಕೇಕ್ | ೧೦೦ ಗ್ರ್ಯಾಂ | ೪೯೨ |
| ಸ್ಪಾಂಜ್‌ಕೇಕ್ | ೧೦೦ ಗ್ರ್ಯಾಂ | ೩೦೦ |
| ಸಿಹಿ ಬಿಸ್ಕತ್ | ,, | ೩೪೨ |

| | | |
|---|---|---|
| ಹಾಲಿನ ಬಿಸ್ಕತ್ | ,, | ೩೯೯ |
| ಬೆಣ್ಣೆ ಬಿಸ್ಕತ್ | ,, | ೪೯೨ |
| ಕ್ರೀಮ್ ಬಿಸ್ಕತ್ | ,, | ೪೯೦ |
| ಚಾಕೋಲೇಟ್ | ,, | ೪೬೦ |
| ಹಾಲಿನ ಚಾಕೋಲೇಟ್ | ,, | ೬೭೫ |
| ಕೊಬ್ಬರಿ ಚಾಕೋಲೇಟ್ | ,, | ೬೦೦ |
| **ಕುರುಕಲು ತಿಂಡಿ** | | |
| ಪಕೋಡ | ೧ ಪ್ಲೇಟ್ | ೩೦೦ |
| ಚಕ್ಕಲಿ | ,, | ೩೫೦ |
| ಮುರುಕು | ,, | ೨೨೫ |
| ಕೋಡುಬಳೆ | ,, | ೩೮೦ |
| ಬಜಿ | ೮ | ೩೫೦ |
| ವಡೆ | ೪ | ೪೦೦ |
| ಸಮೋಸ | ೨ | ೨೫೦ |
| ಸ್ಯಾಂಡ್‌ವಿಚ್ | ೨ | ೨೦೦ |
| ಭೇಲ್‌ಪುರಿ | ೧ ಪ್ಲೇಟ್ | ೨೮೦ |
| ಪಾನಿಪುರಿ | ,, | ೧೨೫ |
| ಕಚೋರಿ | ,, | ೧೬೫ |
| ಕರಿದ ಹಪ್ಪಳ | ೧ | ೦೬೫ |
| ಗೋಡಂಬಿ | ೮ | ೦೮೮ |
| ಬಾದಾಮಿ | ೫ | ೦೯೦ |
| ಚಿಪ್ಸ್ | ೧೦೦ ಗ್ರಾಂ | ೨೫೦ |
| ಹುರಿದ ಶೇಂಗ | ,, | ೩೭೦ |
| ಕೊಬ್ಬರಿ | ,, | ೬೭೦ |
| ಹುರಿಕಡಲೆ | ,, | ೩೭೦ |
| **ಸಿಹಿತಿಂಡಿ** | | |
| ಜಾಮೂನು | ೨ | ೩೯೦ |
| ಜಿಲೇಬಿ | ೨ | ೪೯೦ |
| ಲಾಡು | ೨ | ೫೬೦ |
| ಚಿರೋಟಿ | ೧ | ೨೪೦ |
| ಹೋಳಿಗೆ | ೧ | ೪೫೦ |
| ಬಾದಾಮಿ ಪುರಿ | ೧ | ೩೪೦ |
| ಹಲ್ವ | ೧೦೦ ಗ್ರಾಂ | ೨೭೦ |
| ಬರ್ಫಿ | ,, | ೫೦೦ |
| ತಂಬಿಟ್ಟು | ,, | ೩೬೦ |
| ಓಂಪುಡಿ | ,, | ೪೪೪ |

| | | |
|---|---|---|
| ಶಂಕರ ಪೋಳಿ | ,, | ೪೪೦ |
| ರಸಮಲೈ | ,, | ೬೫೦ |
| ಕೇಸರಿಭಾತು | ೧ ಪ್ಲೇಟು | ೫೬೦ |
| ಮೈಸೂರು ಪಾಕ್ | ೧ ತುಂಡು | ೩೦೦ |
| ಕೊಬ್ಬರಿ ಬರ್ಫಿ | ೧ ತುಂಡು | ೧ |
| ಖೀರು | ೧ ಲೋಟ | ೩.೨೫ |
| ಕಡ್ಲೆಬೇಳೆ ಪಾಯಸ | ೧ ಲೋಟ | ೦೮೭ |
| ಅಕ್ಕಿ ಹುಗ್ಗಿ | ,, | ೨೫೦ |
| **ಹಣ್ಣುಗಳು** | | |
| ಸೇಬು | ೧ | ೬೬ |
| ಪೇರಲ | ೧ | ೫೦ |
| ಕಿತ್ತಲೆ | ೧ | ೬೮ |
| ಮಾವು | ೧ | ೧೨೦ |
| ಬಾಳೆ | ೧ | ೧೩೦ |
| ದಾಳಿಂಬೆ | ೧ | ೧೮೦ |
| ಸಪೋಟ | ೧ | ೧೫೦ |
| ದ್ರಾಕ್ಷಿ | ೨೦ | ೭೦ |
| ಉತ್ತತ್ತಿ | ೫ | ೧೪೦ |
| ಹಲಸು | ೩ ತೊಳೆ | ೦೮೮ |
| ಪಪ್ಪಾಯಿ | ೧ ತುಂಡು | ೦೫೦ |
| ಕಲ್ಲಂಗಡಿ | ,, | ೦೩೭ |
| ಅನಾನಸ್ | ,, | ೦೪೪ |
| ನೆಲ್ಲಿಕಾಯಿ | ೧೦ | ೦೫೮ |
| ನಿಂಬೆಹಣ್ಣು | ೧ | ೦೨೫ |
| **ಮಾಂಸಾಹಾರ** | | |
| ಮೊಟ್ಟೆ ಬೇಯಿಸಿದ್ದು | ೧ | ೦೭೭ |
| ಆಮ್ಲೆಟ್ | ೧ | ೧೨೦ |
| ಚಿಕನ್ ಬಾಯಿಲ್ಡ್ | ೧ ತುಂಡು | ೧೩೨ |
| ಚಿಕನ್ ಫ್ರೈ | ,, | ೧೫೦ |
| ಮಟನ್ ಬಾಯಿಲ್ಡ್ | ,, | ೧೫೦ |
| ಮಟನ್ ಫ್ರೈ | ,, | ೨೨೦ |
| ಚಾಪ್ಸ್ | ೨ ತುಂಡು | ೨೫೦ |
| ತಂದೂರಿ ಚಿಕನ್ ೦೨ ತುಂಡು | ೪೫೦ | |
| ಮೀನು ಫ್ರೈ | ೨ ತುಂಡು | ೨೨೦ |
| **ಪಾನೀಯಗಳು** | | |
| ಹಾಲು | ೧ ಲೋಟ | ೧೦೦ |

| | | |
|---|---|---|
| **ಆರೋಗ್ಯದಂಗಳ** | | |
| ಮಜ್ಜಿಗೆ | ,, | ೦೬೦ |
| ಮೊಸರು | ,, | ೧೬೨ |
| ಕಾಫಿ, ಟೀ | ,, | ೦೭೦ |
| ಎಳನೀರು | ,, | ೦೪೦ |
| ಐಸ್‌ಕ್ರಿಂ | ೧೦೦ ಗ್ರಾಂ | ೩೭೦ |
| ಗಿಣ್ಣು | ೧ ಚಮಚ | ೧೧೧ |
| **ಇತರೆ** | | |
| ಸಕ್ಕರೆ | ೧೦೦ ಗ್ರಾಂ | ೪೦೦ |
| ಬೆಲ್ಲ | ೧೦೦ ಗ್ರಾಂ | ೪೦೦ |
| ಜೇನು | ೧ ಚಮಚ | ೦೭೪ |
| ಬೆಣ್ಣೆ | ೧ ಚಮಚ | ೦೪೦ |
| ತುಪ್ಪ | ,, | ೦೪೫ |
| ಎಣ್ಣೆ | ,, | ೦೪೦ |
| ವೀಳ್ಯದೆಲೆ | ೨ | ೦೦೫ |

(ಇದೇ ಲೇಖಕರ 'ಆರೋಗ್ಯ ಮತ್ತು ಆಹಾರ' ಪುಸ್ತಕದಿಂದ)

ಊಟ ತಿಂಡಿಗಳ ಮಧ್ಯೆ ಏನನ್ನೂ ಸೇವಿಸಬಾರದು. ನೀವು ನಿಮ್ಮ ಅವಶ್ಯಕತೆಯನ್ನು ಮೀರಿ ನಿತ್ಯ ೧ ತುಂಡು ಬ್ರೆಡ್ ಅಥವಾ ಅರ್ಧ ಕಪ್ ಚಹ ಸೇವಿಸುತ್ತಾ ಹೋದರೆ ಐದು ವರ್ಷಗಳಲ್ಲಿ ನಿಮ್ಮ ದೇಹದಲ್ಲಿ ೧೦ ಕೆ.ಜಿ.ಗಳಷ್ಟು ಕೊಬ್ಬು ಹೆಚ್ಚಾಗುತ್ತದೆ. ಇದು ಹೇಗೆಂದರೆ, ೧ ತುಂಡು ಬ್ರೆಡ್ ಅಥವಾ ಅರ್ಧಕಪ್ ಚಹದಲ್ಲಿ ೫೦ ಕಿಲೋ ಕ್ಯಾಲರಿ ಶಕ್ತಿ ಇರುತ್ತದೆ. ಆದುದರಿಂದ ನಿತ್ಯ ೫೦ ಕಿಲೋ ಕ್ಯಾಲರಿ ಹೆಚ್ಚಾಗುತ್ತಾ ವರ್ಷಕ್ಕೆ ೧೮೨೫೦ ಕಿ.ಕ್ಯಾಲರಿ ಐದು ವರ್ಷಕ್ಕೆ ೯೧೨೫೦ ಕಿ.ಕ್ಯಾಲರಿ ಹೆಚ್ಚಾಗುತ್ತದೆ. ಸುಮಾರು ೯೦೦೦ ಕಿ.ಕ್ಯಾಲರಿಯಿಂದ ೧ ಕಿಲೋ ಕೊಬ್ಬು ಉಂಟಾಗುತ್ತದೆ. ಹೀಗಾಗಿ ನಿಮ್ಮ ತೂಕ ಐದು ವರ್ಷದಲ್ಲಿ ೧೦ ಕೆ.ಜಿ. ಹೆಚ್ಚಾಗುತ್ತದೆ.

ನೀವು ಆಲಸಿಗಳಾಗಿದ್ದರೂ ನಿತ್ಯ ನಿಮ್ಮ ದೇಹದಿಂದ ೨೪೦೦ ಕಿಲೋ ಕ್ಯಾಲರಿ ಶಕ್ತಿ ವ್ಯಯವಾಗುತ್ತದೆ. ಮೇಲೆ ಹೇಳಿದಂತೆ ನೀವು ನಿತ್ಯ ೧೦೦೦ ಕಿಲೋ ಕ್ಯಾಲರಿ ಶಕ್ತಿ ಒದಗಿಸುವಷ್ಟು ಆಹಾರವನ್ನು ಸೇವಿಸಿದರೆ, ನಿಮ್ಮ ದೇಹಕ್ಕೆ ೧೪೦೦ ಕಿಲೋ ಕ್ಯಾಲರಿ ಶಕ್ತಿಯ ಅಭಾವ ಬೀಳುತ್ತದೆ. ಅಭಾವವನ್ನು ತುಂಬಲು ದೇಹದ ಕೊಬ್ಬು ಕರಗಿ ೧೪೦೦ ಕಿಲೋ ಕ್ಯಾಲರಿ ಶಕ್ತಿಯನ್ನು ಬರಿಸುತ್ತದೆ. ಈ ಕ್ರಮವನ್ನು ಕಟ್ಟುನಿಟ್ಟಾಗಿ ಪಾಲಿಸಿದರೆ, ದೇಹದಲ್ಲಿ ಅಡಕಗೊಂಡಿರುವ ಕೊಬ್ಬೆಲ್ಲಾ ಕ್ರಮೇಣ ಕರಗಿಹೋಗುತ್ತದೆ.

## ಹೆಚ್ಚು ದಣಿಯುವುದು

ಕಡಿಮೆ ತಿನ್ನುವುದು ಮತ್ತು ಹೆಚ್ಚು ದಣಿಯುವುದೇ ಬೊಜ್ಜಿಗೆ ರಾಮಬಾಣವೆಂದು ನಮಗೀಗಾಗಲೇ ಗೊತ್ತಾಗಿದೆ. ಶಕ್ತಿಯ ಹೆಚ್ಚಳವೇ ಬೊಜ್ಜಿಗೆ ಕಾರಣವೆಂದೂ ಮನವರಿಕೆಯಾಗಿದೆ. ಕಡಿಮೆ ತಿನ್ನುವುದರಿಂದ ದೇಹಕ್ಕೆ ಕಡಿಮೆ ಶಕ್ತಿಯನ್ನು ಪೂರೈಕೆ ಮಾಡಬಹುದು. ಹಾಗೆಯೇ ದೇಹದಿಂದ ಹೆಚ್ಚು ಶಕ್ತಿಯನ್ನು ವ್ಯಯಮಾಡಿ ದೇಹದಲ್ಲಿನ ಕೊಬ್ಬನ್ನು ಕರಗಿಸಬಹುದು.



ಯಾರಿಗೆ ವ್ಯಾಯಾಮ?

ಆರೋಗ್ಯದಲ್ಲಿ ಯಾರು ಬಡವ, ಯಾರು ಶ್ರೀಮಂತ?



ಆರೋಗ್ಯದಂಗಳ

ನೀವು ಪ್ರತಿನಿತ್ಯ ಬೇಗನೆ ಎದ್ದು ಬಯಲಿನಲ್ಲಿ ಗಂಟೆಗೆ ೩ ರಿಂದ ೫ ಕಿಲೋ ಮೀಟರು ವೇಗದಲ್ಲಿ ನಡೆಯುವಿರಾದರೆ, ನಿಮ್ಮ ದೇಹದಿಂದ ೩೦೦ ಕಿಲೋ ಕ್ಯಾಲರಿ ಶಕ್ತಿ ವ್ಯಯವಾಗುತ್ತದೆ. ಇದೇ ಕ್ರಮವನ್ನು ಮುಂದುವರೆಸಿದರೆ ಒಂದು ತಿಂಗಳಿನಲ್ಲಿ ನಿಮ್ಮ ದೇಹದಿಂದ ೯೦೦೦. ಕಿಲೋ ಕ್ಯಾಲರಿ ಶಕ್ತಿಯ ವ್ಯಯವಾಗಿ ಒಂದು ಕಿಲೋದಷ್ಟು ಬೊಜ್ಜು ಮಾಯವಾಗಿ ಬಿಡುತ್ತದೆ.

ಓಟವೊಂದೇ ಅಲ್ಲ, ಆಟದಿಂದಲೂ ಬೊಜ್ಜನ್ನು ಇಳಿಸಿಕೊಳ್ಳಬಹುದು. ಟೆನ್ನಿಸ್, ವಾಲಿಬಾಲ್, ಫುಟ್‌ಬಾಲ್, ಹಗ್ಗದಾಟ, ಈಜು ಮುಂತಾದ ಆಟಗಳು, ಮೆಟ್ಟಿಲುಗಳನ್ನು ಹತ್ತುವುದು, ವ್ಯಾಯಾಮ, ಯೋಗ, ಮನೆಗೆಲಸ, ತೋಟಗಾರಿಕೆ ಯಾವುದೇ ಆಗಲಿ- ಇವೆಲ್ಲವುಗಳೂ ದೇಹದಲ್ಲಿ ಕೊಬ್ಬು ಕಲೆಯುವುದಕ್ಕೆ ಕಡಿವಾಣ ಹಾಕುತ್ತವೆ. ಒಟ್ಟಿನಲ್ಲಿ ಸುಮ್ಮನೆ ಮಲಗಿರುವ ಬದಲು ಕುಳಿತುಕೊಳ್ಳುವುದು, ಕುಳಿತುಕೊಳ್ಳುವ ಬದಲು ನಿಂತುಕೊಳ್ಳುವುದು, ನಿಂತು-ಕೊಳ್ಳುವ ಬದಲು ನಡೆದಾಡುವುದು ಒಳ್ಳೆಯದು. ಶ್ರಮಕ್ಕೆ ಪ್ರತಿಫಲ ಬರಿ ಹಣದ ರೂಪದಲ್ಲೆ ಬರಬೇಕೆಂದಿಲ್ಲ, ಆರೋಗ್ಯದ ರೂಪದಲ್ಲೂ ಬರಬೇಕು.

## ಕೊಬ್ಬಿಗರಿಗೆ ಕಿವಿಮಾತು

ನೀವು ಬೊಜ್ಜಿನವರಾಗಿದ್ದರೆ, ಬೊಜ್ಜನ್ನು ಕರಗಿಸಲು ಇಂದೇ ದೃಢ ನಿರ್ಧಾರ ಮಾಡಿ.

ಅತಿ ಕಠಿಣ ಶ್ರಮದಿಂದ ನಿಮ್ಮ ದೇಹದ ರೋಗನಿರೋಧಕ ಶಕ್ತಿ ಕುಂದಿ ಆರೋಗ್ಯ ಕೆಡಬಹುದು. ಆದುದರಿಂದ ಬೊಜ್ಜು ಇಳಿಸಲು ಆತುರ ಬೇಡ, ನಿಧಾನವಾಗಿ, ಹಂತ ಹಂತವಾಗಿ ನಿಮ್ಮ ಸಾಮರ್ಥ್ಯಕ್ಕನುಸಾರವಾಗಿ ಚಟುವಟಿಕೆಯಲ್ಲಿ ನಿರತರಾಗಿ.

ಊಟ-ತಿಂಡಿಗಳನ್ನು ಸಂಪೂರ್ಣವಾಗಿ ತ್ಯಜಿಸುವುದಾಗಲಿ ಕಠಿಣವಾದ ಪಥ್ಯಮಾಡು ವುದಾಗಲಿ ಸಲ್ಲದು. ದೇಹಕ್ಕೆ ಅಗತ್ಯವಾದ ಎಲ್ಲ ಜೀವಸತ್ವ ಮತ್ತು ಖನಿಜಗಳನ್ನು ಪೂರೈಸಲು ಆಹಾರ ವೈವಿಧ್ಯಮಯವಾಗಿರಲಿ, ಸಮತೂಕದ್ದಾಗಿರಲಿ. ನೀವು ವಿದಾಯ ಹೇಳ ಬೇಕಾಗಿರುವುದು ಹೆಚ್ಚು ಸಿಹಿ ಮತ್ತು ಹೆಚ್ಚು ಜಿಡ್ಡಿನ ಪದಾರ್ಥಗಳಿಗೆ ಮಾತ್ರ.

ಕೂತಲ್ಲೇ ಬೊಜ್ಜು ಕರಗಿಸುವುದು ಭ್ರಾಂತಿಯಾದೀತು. ಹಾಗೆಯೇ ಯಾವುದೇ ಮಾತ್ರೆ, ಔಷಧ, ಪಾನೀಯ ಇತ್ಯಾದಿಗಳ ಸೇವನೆಯಿಂದಲೂ ಬೊಜ್ಜನ್ನಿಳಿಸುವುದು ಅಸಾಧ್ಯ. ಮೋಸದ ಜಾಹಿರಾತಿಗೆ ಮೊರೆಹೋಗಬೇಡಿ.

ಬೊಜ್ಜನ್ನಿಳಿಸುವುದು ಕೆಲ ಕಾಲ ಮಾತ್ರ ನಡೆಸಿ ನಿಲ್ಲಿಸುವ ಕ್ರಿಯೆಯಲ್ಲ. ಒಮ್ಮೆ ಇಳಿಸಿದ ಬೊಜ್ಜು ಮತ್ತೆ ಏರದಂತೆ ಜೀವನಪರ್ಯಂತ ಕಾಯ್ದುಕೊಳ್ಳಬೇಕು.

ನಿಮ್ಮ ತೂಕದ ಬಗ್ಗೆ ಸದಾ ನಿಗಾವಹಿಸಿ. ಆಗಾಗ ತೂಕವನ್ನು ನೋಡಿಕೊಳ್ಳುವ ರೂಢಿ ಬೆಳಸಿಕೊಳ್ಳಿ.

ಆರೋಗ್ಯವೇ ಭಾಗ್ಯ. ಆದರೆ ಈ ಭಾಗ್ಯ ತಂತಾನೆ ಒದಗುವುದಿಲ್ಲ ಎಂಬುದನ್ನು ಯಾವಾಗಲೂ ನೆನಪಿನಲ್ಲಿಡಿ. ●

Printed and Published by S.K. KATOTE on behalf of Loka Shikshana Trust at Samyukta Karnataka Press, Koppikar Road, Hubli-580 020. (Phone: 364303): No. 2, Residency Road, Bangalore-560 025. (Phone: 2213265).

**Managing Editor: K. SHAMARAO**

**Registered with the Registrar of Newspaper for India under No. 3633/57.**

